ಪ್ರತಿಭಾಗ್ರಂಥಮಾಲೆ, ಧಾರವಾಡ. ವರ್ಷ ೩, ಕಿರಣ ೪

# ಧರ್ಮಸಂಕಟ

(ಸಾಮಾಜಿಕ ಕಾದಂಬರಿ)

ಶ್ರೀ ವಾಡೇದ ರಘುನಾಥ ಭಟ್ಟರು
ಮಿಶ್ರೀಕೋಟಿ

( ಹಿಂದೀ ಕಾದಂಬರಿಯೊಂದರ ರೂಪಾಂತರ )



೧-೮-೧೯೪೬ ಬೆಲೆ ೨-೦-೦

ಮುದ್ರಕರು
ಶೇ ಗೋ ಕುಲಕರ್ಣಿ
ಸಾಧನ ಮುದ್ರಣಾಲಯ
ಧಾರ-೨೮



## ಮುಂದಿನ ಪ್ರಕಟನೆ

ಶ್ರೀಮಾನ್ ಕುಲಕರ್ಣಿ ಶೇಷಗಿರಿರಾಯರ
ಸ್ವತಂತ್ರ-ಸಾಮಾಜಿಕ- ಕಾದಂಬರಿ

## ಬೆಳವಲದ ಭಾಗ್ಯಲಕ್ಷ್ಮಿ

ಗ್ಲೇಜಕಾಗದ! ಸುಂದರ ಮುದ್ರಣ! ಇನ್ನೂರು ಪುಟಗಳು
( ಬೆಲೆ ೨—೮—೦ ಮಾತ್ರ )
ಪ್ರತಿಭಾಗ್ರಂಥಮಾಲೆ, ಧಾರವಾಡ.

ಪ್ರಕಾಶಕರು
ಭಾಲಚಂದ್ರ ಘಾಣೇಕರ
ಸಮಾಜ ಪುಸ್ತಕಾಲಯ
ಧಾರವಾಡ

# ಧರ್ಮಸಂಕಟ

## (೧)

ಲಖನೌದ ಗಣೇಶಗಂಜ ಬೀದಿಯ, ಎರಡಂತಸ್ತಿನ ಒಂದು ಮನೆಯ ಕೊಟಡಿಯಲ್ಲಿ ಕೇಶವನು ಓದುತ್ತಾ ಕುಳಿತಿದ್ದಾನೆ. ಆಗ ಓರ್ವ ಸುಂದರ ಯುವತಿಯು ಬಾಗಿಲು ತೆರೆದು ಅವನ ಸಮೀಪದಲ್ಲಿ ಬಂದು ನಿಂತುಕೊಂಡಳು.

ಓದುವದನ್ನು ಬಿಟ್ಟು ಕೇಶವನೆಂದನು "ಏನು ಅತ್ತಿಗೆ?"

ಯುವತಿಯು ಸಸನಗೆಯಿಂದ ಹೇಳಿದಳು 'ಒಂದು ಮಾತು ಕೇಳಬೇಕಾಗಿತ್ತು. ನಿಜ ಹೇ? ಕೇಳಿಬಿಡಲಾ?"

"ಯಾವ ಮಾತದು?"

"ನಿಜ ಹೇಳುವಿರಾ? ಮೊದಲು ಹೇಳಿ."

ಕೇಶವನು ದರ್ಶನಶಾಸ್ತ್ರದ ಒಂದು ಗಂಭೀರ ವಿಷಯವನ್ನು ಅಭ್ಯಾಸಿಸುತ್ತಿದ್ದನು. ಆದರೇನು? ಈಗ ಅತ್ತಿಗೆ ರಾಮಕಲಿಯು ಅದಕ್ಕೂ ಗಂಭೀರವಾದ ವಿಷಯವನ್ನು ತೆಗೆದುಕೊಂಡು ಬಂದಿದ್ದಾಳೆ. ಇದರಿಂದ ಬಿಡುಗಡೆ ಹೊಂದಲು ನಿರುಪಾಯನಾಗಿ ಮೆಲ್ಲನೆ ಪುಸ್ತಕವನ್ನು ಮಡಿಸುತ್ತ ನುಡಿದನು.

"ಬಂದಮೇಲೆ ಏನೂ ಹೇಳದಿರಬಹುದು. ಮಾತ್ರ ಏನಾದರೂ ಹೇಳಿದರೆ ಅದು ಸುಳ್ಳಂತೂ ಇರಲಾರದು. ಆಯಿತೇ? ಹೇಳು, ನೀನು ಏನು ಕೇಳಬೇಕಾಗಿದೆ?"

ರಾಮಕಲಿಯ ಅಧರದಲ್ಲಿ ಒಂದು ಹಾಸ್ಯರೇಖೆ ಮಿನುಗಿತು.

"ಮಾಲತಿಯು ನಿಮ್ಮ ಮನಸ್ಸಿಗೆ ಬಂದಿರುವಳಷ್ಟೇ?"

ಇದನ್ನು ಕೇಳಿ ಕೇಶವನು ನಗುತ್ತ ನುಡಿದನು "ಇದಕ್ಕಾಗಿ ಇಷ್ಟು ಉದ್ದ ಪ್ರಸ್ತಾವನೆ ಆಯಿತೋ? ಇದೇನು ಸರ್ವಸಾಧಾರಣ ಮಾತು. ಇದರ ನಿಜವಾದ ಉತ್ತರ ಹೇಳದಿರುವೆನೇ?"

“ಏನು ಮನಸ್ಸಿಗೆ ಬಂದಿರುವಳೇ ?”

“ಹೊ, ಎಂದವನೇ ಕೇಶವನು ಅತ್ತಿಗೆಯ ಮುಖದ ಕಡೆಗೆ ನೋಡತೊಡಗಿದನು ರಾಮಕಲಿಯ ಹೃದಯ ಕಲಕಿ ಅರಳಿ ಹೋಯಿತು” ಹಾಗಿದ್ದರ ಆಕೆಯೊಡನೆ ವಿವಾಹವಾಗಲು ಏನು ತಡೆ ನಿಮಗೆ?

ನಗುತ್ತ ಕೇಶವನೆಂದನು “ಈಸಲ ಮಾತ್ರ ಕಠಿಣ ಪ್ರಶ್ನ ಕೇಳಿದೆ ಅತ್ತಿಗೆ? ಜಗತ್ತಿನಲ್ಲಿ ಎಷ್ಟು ಸುಂದರ ಹುಡುಗೆಯರಿರುವರೋ, ನೋಡಲಿಕ್ಕೆ ಅವರಲ್ಲ ನನ್ನ ಮನಸ್ಸಿಗೆ ಬಂದೇ ಬರುವರು ಹೀಗಿರುವುದರಿಂದ, ಪ್ರತಿಯೊಬ್ಬಳೊಡನೆ ಲಗ್ನವಾಗಲು ನನಗೆ ತಡೆ ಇಲ್ಲವೆನ್ನುವದು ಭಯಾನಕವನಿಸುವದು”

“ಪಾಪ! ನಾನು ಯಾವ ಭಯಾನಕ ಮಾತನ್ನೂ ಕೇಳಿಲ್ಲವಲ್ಲ ನಾನು ಕೇಳುವದು ಒಂದೇ ಒಂದು ಮಾತು. ಒಬ್ಬಳೊಡನೆಯೇ ಲಗ್ನವಾಗಬೇಕೆಂದು ಆಗ್ರಹ”

ತಲೆಕೆರೆದುಕೊಳ್ಳುತ್ತ ಕೇಶವನೆಂದ “ಒಳ್ಳೇ ಕಠಿಣ! ಈ ಸಲದ ಪ್ರಶ್ನೆಯಂತೂ ಇನ್ನಿಷ್ಟು ಕಠಿಣವಾಗಿದೆ. ಇದಕ್ಕೇನು ಉತ್ತರಿಸಬೇಕಂಬುದು ನನಗೆ ಹೊಳೆಯದಾಗಿದೆ”

“ನನಗೆ ಯಾವ ತಡೆಯೂ ಇಲ್ಲವೆಂದು ನೀವು ಹೇಳಿದಿರಲ್ಲ !”

ನವಿನಗೆ ನಗುತ್ತ ಕೇಶವ ನುಡಿದ “ಕ್ಷಮಿಸು ಅತ್ತಿಗೆ! ನನ್ನ ಮಾತಿಗೆ ನೀನು ತಿಳಿದುಕೊಂಡ ಅರ್ಥವಾದರೆ, ಭಾಷೆಯ ಮೇಲೆ ತುಸು ಕೂಡ ನನ್ನ ಪ್ರಭುತ್ವವಿಲ್ಲವೆಂದು ಹೇಳಬೇಕಾದೀತು ಯಾಕೆಂದರೆ— ನೀನು ತಿಳಿದುಕೊಳ್ಳುವದರ ವಿರುದ್ಧಾರ್ಥವೇ ಯಾವಾಗಲೂ ನನ್ನ ಮಾತಿಗಿರುವದು.”

ಈ ಮಾತು ಕೇಳಿ ರಾಮಕಲಿಯ ಮುಖವು ತುಸು ಕಪ್ಪಿಟ್ಟಿತು ಕೇಳಿದಳು “ಮಾಲತಿಯು ತಾಯಿತಂದೆಗಳಿಲ್ಲದ ತಬ್ಬಲಿ, ಕೊರಳಿಗೆ ಬೀಳುವದೆಂದು ನೀವು ಒಪ್ಪುವದಿಲ್ಲವೋ?”

ರಾಮಕಲಿಯ ಮಾತು ಕೇಳಿ ಕೇಶವನ ಮೋರೆಯ ಮೇಲೆ ಆಶ್ಚರ್ಯ ವಿರಾಗಗಳು ಕಾಣತೊಡಗಿದವು ಅವನೆಂದ “ನೀನು ಒಂದು ವೇಳೆ

ಈ ಮಾತನ್ನು ನಗೆಯಿಂದಾಡಿದ್ದರೂ, ಸರಿಯಾಗಲಿಲ್ಲ ಅತ್ತಿಗೆ! ನನ್ನ ವಿಷಯಕ್ಕೆ ನಿನ್ನ ಅಭಿಪ್ರಾಯ ಇರುವದು ಹೀಗೆಯೋ?"

ಮುಗಾಣದೆ ರಾಮಕಲಿ ಕೇಳಿದಳು "ಹಾಗಾದರೆ ನೀವು ಏಕೆ ಒಪ್ಪುವದಿಲ್ಲ!"

ಕೇಶವನೆಂದ "ನಾನು ಏಕೆ ಒಪ್ಪುವದಿಲ್ಲವೆಂಬುದನ್ನು ಕೇಳಿ ನೀನು ಇಂಗ್ಲೀಷು ವಿದ್ಯೆಯ ಕುಫಲದ ಬಗ್ಗೆ ಒಂದು ಉಪನ್ಯಾಸಕೊಟ್ಟುಬಿಡುವಿ'

ನಗುತ್ತಾ ರಾಮಕಲಿಯು ನುಡಿದಳು "ಹುಂ, ಕಲಿಯುವದು ಮುಗಿಯದ ಹೊರತು, ಲಗ್ನವಾಗುವದಿಲ್ಲವೆಂದು ಹೇಳಬಯಸುವಿರಾ?"

"ನಗ ಮಾಡಬಡುವೆಯಲ್ಲ! ಈ ಮಾತು ಅಷ್ಟು ತುಚ್ಛವಾದುದೇ?"

ರಾಮಕಲಿ ಬೇರೊಂದು ಹಾದಿ ಹುಡುಕಿದಳು "ನಿಮ್ಮ ಅಣ್ಣಂದಿರು ಕಲಿಯುವದು ಮುಗಿಯುವ ಮೊದಲೇ ವಿವಾಹ ಮಾಡಿಕೊಂಡರು"

ಗಂಭೀರನಾಗಿ ಕೇಶವನೆಂದನು. "ಅದೇನೋ ನಿಜ ಆದರೆ ಆ ವಿಷಯಕ್ಕ ಒಂದು ಮಾತು ಹೇಳಬೇಕಾಗಿದೆ ಅಣ್ಣನು ಕಲಿಯುವದನ್ನು ಮುಗಿಸುವ ಮೊದಲೇ ವಿವಾಹಿತನಾದನು ಇದು ಹೇಗೆ ನಿಜವೋ, ಹಾಗೆ ಅವನು ಮುಂದೆ ಕಲಿಯಲಿಕ್ಕಾಗದೇ ನಿಲ್ಲಿಸಿದ, ಇದು ಕೂಡ ನಿಜವೇ! ಹೇಳು ಅಹುದಲ್ಲವೇ?"

ತಡವರಿಸುತ್ತ ರಾಮಕಲಿ ಮಾತಾಡಿದಳು. "ಅದೇಕೋ? ನಾನೇನು ಅವರು ಓದುವ ಪುಸ್ತಕಗಳನ್ನು ಮುಚ್ಚಿಡುತ್ತಿದ್ದೆನೇ?"

ಸವಿನಗೆಯಿಂದ ಕೇಶವನೆಂದನು "ಹಾಗೆ ನೀನು ಮಾಡುವ ಆವಶ್ಯಕವೇ ಇರಲಿಲ್ಲ ಪುಸ್ತಕಗಳು ತಾವೇ ಹಾಗಾಗ ತೊಡಗುವವು. ಈ ವಿಷಯದಲ್ಲಿ ಒಂದೂ ಭಿನ್ನಾಭಿಪ್ರಾಯವಾಗುವದಿಲ್ಲ ಅತ್ತಿಗೆ ಮನುಷ್ಯ ಮಹರ್ಷಿಕಾಲದಿಂದ ಪುಸ್ತಕ ಮತ್ತು ಪುರಂಧ್ರಿಯರ ವಿರೋಧ ಸಾಗಿ ಬಂದದ್ದು ಕಾರಣ ಒಂದು ಮುಗಿಸಿ ಮತ್ತೊಂದರ ಕಡೆಗೆ ತಿರುಗಬೇಕು. ಪುರಂಧ್ರಿಯನಂತರ ಪುಸ್ತಕವನ್ನು ಹಿಡಿಯಲಿಕ್ಕೆ ಭಗವಂತ ದೀರ್ಘಾಯುಷ್ಯ ಅಷ್ಟು ಕೊಟ್ಟಿಲ್ಲ ಅದಕ್ಕಾಗಿ ಪುಸ್ತಕ ಓದುವದು ಮುಗಿಸಿ ಪುರಂಧ್ರಿ ಕಡೆಗೆ ತಿರುಗುವುದು ಜಾಣತನ ಅತ್ತಿಗೆ! ನೀನು ನಮ್ಮ ಮನೆಗೆ

ಬಂದ ಸಮಯ ಅಷ್ಟು ಒಳ್ಳೆಯದಲ್ಲ ಇನ್ನೂ ತುಸು ದಿನ ತಡೆದು ಬರುವ ಆವಶ್ಯಕವಿತ್ತು."

ನಗುತ್ತಲೇ ರಾಮಕಲಿ ನುಡಿದಳು.. "ಸರಿ ಮಾಲತಿ ಇನ್ನಷ್ಟು ದಿನ ತಡೆದಿರಬೇಕೆಂದು ಹೇಳುವಿರಾ? ಎಂ ಎ, ಪಾಸಾಗಲಿಕ್ಕೆ ನಿಮಗ ಇನ್ನು ಕೆಲವೇ ತಿಂಗಳು ಅವಕಾಶ ಇಲ್ಲಿ ಕೇಳಿ ನಿಮಗಾಗಿ ಮಾಲತಿ ಇನ್ನೂ ಹದಿನಾರು ವರ್ಷ ತಡೆದಿರುತ್ತಾಳೆ. ಕೆಲವೇ ತಿಂಗಳು ಏಕೆ?"

ರಾಮಕಲಿಯ ಮಾತಿಗೆ ನಗುತ್ತಲೇ ಕೇಶವ ಹೇಳಿದ, "ನೋಡು ಅತ್ತಿಗೆ! ನೀನು ಕನೋಜಿಗಳ ಸೊಸೆಯಾಗದೇ, ಮತ್ತೆ ಯಾರಾದರೂ ವಕೀಲ, ಬ್ಯಾರಿಸ್ಟರರ ಮನೆಯಾಕೆ ಆಗಿದ್ದರೆ ಜಗತ್ತಿಗೆ ಇನ್ನೂ ಹೆಚ್ಚು ಉಪಯೋಗವಿತ್ತು ಸುಮ್ಮನೇ ಶ್ರಮಪಡುವೆಯಲ್ಲ! ನಿನ್ನ ಮಾತಗಳಿಗೆ ನನ್ನಿಂದೇನೂ ಜಯಪತ್ರ ಸಿಗಲಾರದು."

ಪುಷ್ಯ ಮಾಸದ ರವಿಕಿರಣಗಳಿಂದ ರಂಜಿಸಿ ನಲಿಯುತ್ತಿರುವ ಹಸಿರು ಭೂಮಿಯ ಮೇಲೆ, ಮಳೆ ಬಿದ್ದರೆ ಹೇಗೆ ಅದು ಶೋಭಾಹೀನವಾಗುವದೋ ಅದರಂತೆ ಕೇಶವನ ಮಾತು ಕೇಳಿ ರಾಮಕಲಿಯ ಮುಖವಾಯಿತು ನಸು ವೇಳೆ ಸುಮ್ಮನಿದ್ದು ಆಕೆ ಮೆಲ್ಲನೆ ಅರ್ಥ ತನ್ನ ಮನದಲ್ಲಿಯೇ ಅಂದು ಕೊಂಡಳು "ನಾನು ಮಾತಾಡುವ ಮಾತು ಅರ್ಥವಿಲ್ಲದುದೆನಿಸು ವಷ್ಟು ನಗೆಯದೇ?"

ರಾಮಕಲಿಯ ಈ ಸ್ವಗತ ಮಾತನ್ನೂ ಉಪೇಕ್ಷಿಸದೇ ಗಟ್ಟಿಸಿ ಕೇಶವ ನುಡಿದನು "ಅರ್ಥವಿದ್ದರೂ ಎಷ್ಟೋ ಸಲ ವಿಷಯ ಮಂಡನವಾಗುವದಿಲ್ಲ"

ಕೋಪದಿಂದ ರಾಮಕಲಿ ಅಡಿದಳು. "ಅದಕ್ಕೆ ಅನ್ಯಾಯವೆಂದು ಹೇಳುವರು."

ಈ ಸಲ ಕೇಶವ ಬಿದ್ದು ಬಿದ್ದು ನಕ್ಕ "ಅವಶ್ಯ ಅನ್ಯಾಯ ಆದರೆ ಅನ್ಯಾಯ ಮಾಡುವವರು ಯಾರು! ಬಲಾತ್ಕಾರದಿಂದ ವಿವಾಹ ಮಾಡಲೆಳಸುವವರೋ, ವಿವಾಹಕ್ಕೆ ಒಪ್ಪಿಕೊಳ್ಳದವರೋ! ವಿವಾಹವು ಕೇವಲ ನನ್ನದೇ ಒಬ್ಬನದಾಗಿದ್ದರೆ, ನಿನ್ನ ಮಾತು ಕೇಳಿ ಒಂದು ದಿನಕ್ಕೆ ನಾನು ಮುನ್ನೂರು ಲಗ್ನವಾಗುತ್ತಿದ್ದೆ. ಆದರೆ ಇದು ತನ್ನ ಸುಖ, ದುಃಖ

ಭಾಗ್ಯದೊಡನೆ ಇನ್ನೊಂದು ಜೀವನ ಗಂಟು ಹಾಕಿಕೊಳ್ಳುವಂಥದು ಈ ತರದ ಬಂಧನ ಕೂಡ ಹಿಂದುಗಳಾದ ನಮ್ಮಲ್ಲಿ ಕಡಿದು ಹೋಗುವದು, ಹರಿದುಹೋಗುವದು, ಆರಳುವದಂತೂ ಅಷ್ಟೇ ''

ಕೇಶವನ ಮಾತು ಕೇಳಿ ರಾಮುಕಲಿ ತುಸು ಸುಮ್ಮನಿದ್ದು ಹೇಳಿದಳು ''ಹೇಗಿದ್ದರೂ ಒಂದು ದಿನ ನೀವು ಇದರಲ್ಲಿ ಸಿಲುಕಲೇಬೇಕಲ್ಲ!''

ಕೇಶವನ ಕಣ್ಣಾಲೆಗಳಲ್ಲಿ ನಗ ಮೆಲ್ಲನೆ ಆಟವಾಡುತ್ತಿತ್ತು ''ಏನು ಹೇಳುವೆ' ಸಿಲುಕಲೇಬೇಕೆ? ನಾನು ಅಷ್ಟು ಮೂರ್ಖನಿಲ್ಲ ಬೇಕಾದರೆ ಗಂಗಾಜಲ ಹಿಡಿದು ಹೇಳುತ್ತೇನೆ ಎಂದಿಗೂ ವಿವಾಹ ಬಂಧನದಲ್ಲಿ ಸಿಲುಕಲಾರೆ ನನ್ನ ಸದ್ಯದ ಮನಸ್ಥಿತಿಯ ಮೇಲಿಂದ ಇಷ್ಟು ಖಂಡಿತವಾಗಿ ಹೇಳುತ್ತೇನೆ ''

ಮೈದುನನ ಈ ವಿಚಾರಗಳು ರಾಮುಕಲಿಗೆ ಏನೂ ಅರಿಯದಸಲ್ಲ ಆದು ಕಾರಣವೇ ಸಂಸಾರ-ವಿಮುಖನಾದ ಇವನನ್ನು ವಿವಾಹ ಬಂಧನದಲ್ಲಿ ಸಿಲುಕಿಸಬೇಕಂದು, ಇಷ್ಟು ಹಂಬಲು ಆಕೆಗೆ ವೈರಾಗ್ಯದ ಪ್ರಬಲ-ಪ್ರವಾಹದಿಂದ ಹೊಯ್ದಾಡುತ್ತಿರುವ ಜೀವನ ನೌಕಗ ಒಂದು ಸರಪಳಿ ಬಿಗಿದು ಒಂದು ಸ್ಥಾನದಲ್ಲ ನಿಲ್ಲಿಸಬೇಕಂದು ಅವಳ ವಿಚಾರವಾಗಿತ್ತು ಎಷ್ಟೋ ಸಲ ಮೈದುನನ ಇಂಥ ಮಾತು ಕೇಳಿಯೂ, ಅಭಿಮಾನಕ್ಕೆ ಬಿದ್ದ ಪೆಟ್ಟುಗಳನ್ನು ಸಹನ ಮಾಡಿಕೂಡ, ರಾಮುಕಲಿ ನೈರಾಶ್ಯ ತಾಳುತ್ತಿರಲಿಲ್ಲ ಇದು ಮಾಲತಿ ವಿವಾಹದ ಮಾತಕ್ಕೇ ಆಗಿರದೆ, ತಮ್ಮ ಮನೆಯ ಕಲ್ಯಾಣವೂ ಅದರಲ್ಲಿ ಕೂಡಿಕೊಂಡಿತ್ತು ಪುನಃಪುನಃ ಇಂಥ ಪ್ರಯತ್ನಕ್ಕೆ ಜಗ್ಗುತ್ತಿರುವದು ಈ ವಿಚಾರವೇ ರಾಮುಕಲಿ ತುಸು ಅಭಿಮಾನ ಬೆರತ ಗರುವದಿಂದಾಡಿಬಿಟ್ಟಳು '' ಸರಿ ಎಂದಾದರೂ ವಿವಾಹಿತರಾದರೆ-ಮಾತ್ರ ನೆನಸಾಗಬಹುದು ಅತ್ತಿಗೆಯ ಮುಂದಾಡಿದ ಮಾತು ನಿಲ್ಲಲಿಲ್ಲವೆಂದು ''

ನಗುತ್ತ ಕೇಶವನೆಂದ ''ಹಾಗೇನಾದರೂ ಸಂಭವಿಸಿದರ-ಆ ಲಗ್ನವನ್ನು ನೀನು ನಿಲ್ಲಿಸಿಬಿಡು ''

ಕೇಶವನ ಮಾತಿಗೆ ರಾಮುಕಲಿಯೂ ನಕ್ಕುಬಿಟ್ಟಳು. ''ಸರಿಯೇ ತಾಪದಲ್ಲಿಯೂ ವಿನಯಾಚಿಸುವಂಥವರು ನೀವು.'' ಹಾಗೇ ಮುಂದೆ ಹೆಜ್ಜೆ ಇಕ್ಕುತ್ತ ನುಡಿದಳು ''ಇನ್ನು ಇಲ್ಲಿ ನಿಂತು ನಿಮ್ಮ ಅಭ್ಯಾಸದಲ್ಲಿ

ಸುಮ್ಮನೆ ವಿಘ್ನ ಮಾಡಲಾರೆ. ಹೋಗುತ್ತೇನೆ ಆದರೆ ಯುದ್ಧದಲ್ಲಿ ಸೋತು ಹಿಂದಿರುಗಿದಳೆಂದೇನೂ ತಿಳಿಯಬೇಡಿ "

ಕೇಶವ ನಕ್ಕು ಹೇಳಿದ. "ಛೀ! ಹಾಗೆಲ್ಲಿ? ಒಪ್ಪಂದ ಮಾಡಿಕೊಂಡು ನೀನು ಹೊರಟೆ "

ನಗುತ್ತಲೇ ರಾಮಕಲಿ ಕೊಟ್ಟಡಿಯಿಂದ ಹೊರಕ್ಕೆ ಹೋದಳು

## (೨)

ಕೇಶವನ ಅಣ್ಣ—ಅನಂತನು ಎಫ್-ಎ,ದಲ್ಲಿ ಓದುತ್ತಿರುವಾಗ ತಂದೆ ತೀರಿಕೊಂಡರು ತಾಯಿ ಹೋಗಿಯಂತೂ ಎಷ್ಟೋ ದಿನಗಳಾಗಿದ್ದವು ವಿಧವೆಯಾದ ಮುದುಕಿ ಅಜ್ಜಿಯೇ ತಾಯ್ತಂದೆಗಳಿಲ್ಲದ ಈ ಎರಡು ತಬ್ಬಲಿಗಳನ್ನು ಸಲುಹಿದಳು ಈಗ ಮಾತ್ರ ಆಕೆಯಲ್ಲಿ ಒಂದು ಪ್ರಬಲವಾದ ಆಕಾಂಕ್ಷೆ ತಲೆದೋರತೊಡಗಿತ್ತು. ಅದೇನು ಮೊಮ್ಮಕ್ಕಳ ದುಃಖ ಮರೆವಾಗಬೇಕೆಂದೋ, ಅಥವಾ ತನ್ನ ತೀರ್ಥ-ಯಾತ್ರೆಗೆ ದಾರಿ ಸುಗಮವಾಗಬೇಕೆಂದೋ ಮನೆಗೊಬ್ಬ ಸೊಸೆ ಬರಬೇಕು. ಇನ್ನೂ ಅಜ್ಜಿಯ ಅಪೇಕ್ಷೆ ಎಂದರೆ—ಆಕೆ ಮನೆತನ ತೂಗಿಸಿಕೊಳ್ಳುವ ಸಾಮರ್ಥ್ಯವಂತಳಿರಬೇಕು. ನನಗೆ ಭಾರವಾಗದೇ—ನಮ್ಮ ಭಾರ ಇಳಿಸುತ್ತಿರಬೇಕು.

ಅಜ್ಜಿ ಹೀಗೆ ಅಪೇಕ್ಷಿಸುತ್ತಿರುವಾಗ, ಯಾವುದೋ ಊರಿನ ಒಬ್ಬ ಸಭ್ಯಗೃಹಸ್ಥನು ಔಷಧೋಪಚಾರಕ್ಕೆಂದು ಒಂದು ಇವರ ನೆರಮನೆಯಲ್ಲಿ ವಾಸವಾಗಿದ್ದನು ಅವನ ಪರಿವಾರದಲ್ಲಿ ಇಬ್ಬರು ಕನ್ನಿಕೆಯರಿದ್ದರು. ಒಬ್ಬಾಕೆಯ ಹೆಸರು ರಾಮಕಲಿ ಇನ್ನೊಬ್ಬಳ ಹೆಸರು ಮಾಲತಿ ಇವರಿಬ್ಬರೂ ಅಕ್ಕತಂಗಿಯರು ಆ ರೋಗಿಯ ತಂಗಿಯ ಮಕ್ಕಳು ಹಿಂದುಗಳಲ್ಲಾಗುವ ಲಗ್ನ ವಯಸ್ಸನ್ನು ದಾಟಿ-ರಾಮಕಲಿ ಮೂರು-ನಾಲ್ಕು ವರ್ಷಗಳಾಗಿದ್ದವು ಈಗ ಮಾಲತಿಗೆ ಹನ್ನೆರಡು ವರುಷ ಇವರ ಮಾವ ತನ್ನ ರೋಗಮುಕ್ತನಾಗಲು ಅಷ್ಟು ಚಿಂತಿಸುತ್ತಿರಲಿಲ್ಲ ತನ್ನ ತಂಗಿಯ ಮಕ್ಕಳ ಲಗ್ನ ಹೇಗೆ ಆದೀತೆಂಬ ಚಿಂತೆ ಅವನನ್ನು ಹೆಚ್ಚಾಗಿ ಬಾಧಿಸುತ್ತಿತ್ತು ಅದಕ್ಕಾಗಿ ಆತನು ತನ್ನ ಔಷಧೋಪಚಾರದ ಚರ್ಚೆಗಿಂತ, ವರಚರ್ಚೆಯನ್ನೇ ಹೆಚ್ಚಾಗಿ ಮಾಡುತ್ತಿದ್ದನು ಆದರೆ ಅವನಿಗೆ ತನ್ನ ಸೊಸೆಯರು ಮತ್ತು ರೋಗ,

ಇವೆರಡರಿಂದಲೂ ಮುಕ್ತನಾಗುವ ಆಶೆ ಕಾಣದಾಯಿತು. ದಕ್ಷಿಣೆಯ ಮುಖ ನೋಡದೇ, ವಧುಗಳ ಮುಖ ನೋಡಿ, ವಿವಾಹವಾಗುವ ವರ ಯಾವುದೂ ಸಿಕ್ಕಲಿಲ್ಲ. ಬೇಡಿದಷ್ಟು ಹಣ ವೆಚ್ಚಮಾಡಿ, ಲಗ್ನ ಮಾಡಿ ಕೊಡುವ ಸಾಮರ್ಥ್ಯ ಮಾವನಲ್ಲಂತೂ ಇರಲೇ ಇಲ್ಲ. ಕಡೆಗೆ ಒಮ್ಮೆಲೇ ಡಾಕ್ಟರು, ಹಾಗೂ—ವರಪಕ್ಷದವರು, ತಂತಮ್ಮ ಅಭಿಪ್ರಾಯ ತಿಳಿಸಿ ಬಿಟ್ಟಂತಾಯಿತು.

ಇಂಥಾ ನಾಜೂಕು ವೇಳೆಯಲ್ಲಿಯೇ ಅನಂತನ ಅಜ್ಜಿಗೂ, ಆ ಪೀಡಿತ ಪರಿವಾರಕ್ಕೂ ಗುರುತಾದದ್ದು. ಆಗ ಮಾಘಮಾಸ. ಥಂಡಿಯ ದಿನ. ಮೇಲ್ಮನೆಯಲ್ಲಿ ಅಜ್ಜಿ ಬಿಸಿಲು ಕಾಸುತ್ತಿದ್ದಳು. ಸ್ವಾಭಾವಿಕವಾಗಿ ಆಕೆಯ ದೃಷ್ಟಿ ನೆರಮನೆಯ ಮಹಡಿಯ ಕಡೆ ತಿರುಗಿತು. ನೋಡುತ್ತಾಳೆ ಅಲ್ಲೊಬ್ಬ ಹದಿನೈದು ಹದಿನಾರು ವರ್ಷ ವಯಸ್ಸಿನ ಕಿಶೋರಿ ಹಾಸಿಗೆಗಳನ್ನು ಬಿಸಿಲಿಗೆ ಹಾಕುತ್ತಿದ್ದಳು. ಅವಳ ಕೆಲಸ ಮುಗಿಯುವವರೆಗೂ-ಆ ಹುಡುಗಿಯನ್ನು ಅಜ್ಜಿ ನೋಡಿಯೇ ನೋಡಿದಳು. ಆಕೆ ತೆರವಾದ ಕೂಡಲೆ ಸಂಜ್ಞೆ ಮಾಡಿ ಅವಳನ್ನು ಕರೆದಳು. ಬಾಲಿಕ ಹತ್ತಿರ ಬಂದಳು. ಕೈಯಲ್ಲಿ ಚಿನ್ನದ ಕಂಕಣಗಳಿಲ್ಲ. ಉಟ್ಟುಕೊಂಡದ್ದು, ಒಂದು ಸಾಧಾರಣ ನೀಲಿ ಪತ್ತಲ. ಎರಡೂ ಕೈಗಳಲ್ಲಿ ಎರಡೆರಡು ಕಾಜಿನ ಕೆಂಪು ಬಳೆ.

"ಈ ಮನೆಯಲ್ಲಿರತೊಡಗಿ ಎಷ್ಟು ದಿನಗಳಾದವಕ್ಕಾ?"

ಬಾಲಿಕೆ ಎಂದಳು. "ಸುಮಾರು ಮೂರು ತಿಂಗಳಾದವು."

ಆಶ್ಚರ್ಯದಿಂದ ಅಜ್ಜಿ ಕೇಳಿದಳು. "ಮೂರು ತಿಂಗಳು? ಎಲ್ಲಿ ನಾನು ಒಂದು ದಿನ ಕೂಡ ನೋಡಿಲ್ಲವಲ್ಲ! ಇಲ್ಲಿ ನೀವು ಯಾರು—ಎಷ್ಟು ಜನ ಇದ್ದೀರಿ!"

"ಮಾವ-ಅತ್ತೆ, ನನ್ನ ತಂಗಿ ಮತ್ತು ನಾನು."

"ನಿಮ್ಮ ತಾಯಿ ಇಲ್ಲವೇ?"

"ಇಲ್ಲ. ತಾಯಿ ತೀರಿದ್ದಾಳೆ."

"ತಂದೆ?"

"ಅವನೂ—ಬಾಲೆಯ ಕಂಠ ಬಿಗಿದುಬಂದಿತು. ಅಜ್ಜಿಗೂ ದುಃಖವಾಯಿತು. ಅಜ್ಜಿ ನುಡಿದಳು. ಮತ್ತಾರೂ ನಿಮಗೆ ಅಣ್ಣ-ತಮ್ಮಂದಿರಿಲ್ಲವೇ?"

"ಇಲ್ಲ." '

"ನಿಮ್ಮ ಮಾವನಿಗೆ ಮಕ್ಕಳಿರುವವಷ್ಟೇ?"

"ಏನೂ ಇಲ್ಲ"

"ನಿಮ್ಮತ್ತೆ ನಿನ್ನನ್ನು ಪ್ರೀತಿಸುವಳೇ?"

ತಡವರಿಸುತ್ತ ಬಾಲಿಕೆ ಮಾತಾಡಿದಳು "ಹುಂ" ಈ ಸಣ್ಣ ನುಡಿ ಆಕೆಯ ಬಾಯಿಂದ ಸ್ಪಷ್ಟವಾಗಿ ಬರಲಿಲ್ಲ

ಆ ಲಕ್ಷಣ ತಿಳಿಯಲು ಅಜ್ಜಿಗೆ ನೇಳ ಹಿಡಿಯಲಿಲ್ಲ ಮತ್ತೇನಾದರೂ ಮಾತಾಡಬೇಕೆಂದು ಯೋಚಿಸುತ್ತಿರುವಾಗ ಬಾಲಿಕೆಯ ಬೈತಲೆಯ ಕಡೆಗೆ ಕಣ್ಣು ಹೋದವು ಆಶ್ಚರ್ಯದಿಂದ ಕೇಳಿದಳು "ಇನ್ನೂ ನಿನ್ನ ಲಗ್ನ ಆಗಿಲ್ಲವೇ?"

ಬಾಲಿಕೆಯ ಮುಖ ಲಜ್ಜೆಯಿಂದ ಆರಕ್ತವಾಯಿತು ಕೋಪೊಗದಿಂದ ಆ ಆರಕ್ತಮುಖಿ ಮೌನವಾಗಿ ಉತ್ತರಿಸಿದಳು ತಿಳಿದುಕೊಂಡು ಅಜ್ಜಿಯೇ ಕೇಳಿದಳು. "ನಿಮ್ಮ ಲಗ್ನದ ಸಲುವಾಗಿಯೇ, ನಿಮ್ಮ ಮಾವ ಲಖನೌಕ್ಕೆ ಬಂದಿರುವನೇ?"

"ಇಲ್ಲ ಮಾವನಿಗೆ ಜಡ್ಡಾಗಿದೆ ಅವನ ಔಷಧೋಪಚಾರಕ್ಕೆ ಬಂದಿದ್ದೇವ" ಅಜ್ಜಿಯ ಮನದಲ್ಲಿ ಒಂದು ವಿಚಾರ ಮಿಂಚಿಹೋಯಿತು "ನೀವು ಬ್ರಾಹ್ಮಣರೋ? ಕಾಯಸ್ಥರೋ?"

'ಬ್ರಾಹ್ಮಣ'

'ಎಂಥ ಬ್ರಾಹ್ಮಣರು?'

'ತಾನ್ಯಕುಬ್ಜ, ಸುಕುಲ.'

ಇದನ್ನು ಕೇಳಿ ಅಜ್ಜಿಯ ಕಂಗಳು ಹೊಸಬೆಳಕಿನಿಂದ ಮಿಂಚತೊಡಗಿದವು ಮನದಲ್ಲಿಯೇ ಅಂದುಕೊಂಡುಬಿಟ್ಟಳು ಏನಾದರೂ ಯತ್ನಿಸಿ ಈ ಲಕ್ಷ್ಮಿ ಮನೆಗೆ ಬರುವಂತೆ ಮಾಡಬೇಕು

ಆನಂದದಿಂದ ಅವಳ ಹೃದಯ ತುಂಬಿಹೋಯಿತು 'ಮಗಳೇ! ನೀನು ನಮ್ಮ ಮನೆಗೆ ಬರುವೆಯಾ?'

ಈ ಪ್ರಶ್ನೆಯು ಆ ಬಾಲಿಕೆಗೆ ತುಸು ಸೆಡವಿನದೆನಿಸಿತು ಆದರೂ ಆಕೆ ಜೋಕೆಯಿಂದ ಉತ್ತರಿಸಿದಳು 'ಅತ್ತೆಯನ್ನು ಕೇಳಿ ಬರುತ್ತೇನೆ'

ನಗುತ್ತ ಅಜ್ಜಿ ಮಾತಾಡಿದಳು 'ಆಕೆ ಏನು ಒಪ್ಪಲಿಕ್ಕಿಲ್ಲವೇನು? ನೀನು ನಮ್ಮ ಮನೆಯ ಸೊಸೆಯಾಗಿ, ಲಕ್ಷ್ಮಿಯಾಗಿ ಬರುತ್ತೀಯಾ? ನಮ್ಮ ಮನೆಮಾರೆಲ್ಲ ನಿನ್ನವಾಗುವವು ನಾನು ನಿನ್ನನ್ನು ಎದೆಗವಚಿಕೊಳ್ಳುವೆನು'

ಇಂಥ ಅಪರಿಚಿತ ಮಾತುಗಳಿಂದ ಬಾಲಿಕೆ ಮುದುಡಿಕೊಂಡಳು. ಇದರ ಉತ್ತರ ಆಕೆಯ ಬಾಯಿಂದ ಬರಲಿಲ್ಲ. ಆರಕ್ತಮುಖಿಯಾಗಿ, ತಲೆ ತಗ್ಗಿಸಿಕೊಂಡು ಸುಮ್ಮನೆ ನಿಂತುಬಿಟ್ಟಳು.

ಅನುಕೂಲ ಸಿಕ್ಕರೆ ಅಜ್ಜಿ ಏನೇನು ಹುಚ್ಚಾಟ ಮಾಡುವಳೋ ಹೇಳಲಾಗಲ್ಲ. ಕೆಳಗಿನಿಂದ ಕರ್ಣ-ಕಠೋರವಾದ ವಾಣಿಯೊಂದು ಕೇಳಬಂತು. ಆದರೆ ಏನೆಂಬುದು ಮಾತ್ರ ಸ್ಪಷ್ಟ ತಿಳಿಯಲಿಲ್ಲ. ಬಾಲಿಕೆ ಮಾತಾಡಿದಳು 'ಅತ್ತೆ ಕರೆಯುತ್ತಾಳೆ"

ಸ್ನೇಹಯುಕ್ತವಾಗಿ ಅಜ್ಜಿ ನುಡಿದಳು "ಒಳ್ಳೇದು ಮಗಳೇ ಹೋಗಮ್ಮಾ ... ನಿನ್ನ ಹೆಸರೇನು?"

ಕೋಮಲಸ್ವರದಿಂದ ಬಾಲಿಕೆ ಹೇಳಿದಳು 'ರಾಮಕಲಿ'

'ಒಳ್ಳೇದು ಹೋಗು, ನಾನು ಬೇಗನೆ ನಿನ್ನನ್ನು ಕರೆಸುತ್ತೇನೆ'

ರಾಮಕಲಿಯ ಕಿವಿಯವರೆಗೆ ಈ ಶಬ್ದ ಮುಟ್ಟಿದವು. ಸಾವಕಾಶ ಕೆಳಗಿಳಿದು ಆಕೆ ಹೋಗಿಬಿಟ್ಟಳು.

ಅರ್ಧಗಂಟೆಯಾಗಿರಲಿಕ್ಕಿಲ್ಲ ಅಜ್ಜಿಯು ನೆರೆಮನೆಗೆ ಹೋದಳು. ಅದೊಂದು ಎರಡಂತಸ್ತಿನ ಸಣ್ಣ ಮನೆ. ಕಾಲಿಟ್ಟೊಡನೆ ಅಂಗಳ. ಅಲ್ಲಿ ಒಂದು ಬದಿಗೆ ಒಂದು ಹೌದು ಸನಿಯದಲ್ಲೇ ನಲ್ಲಿ. ಆ ಹೌದಿನ ಮೇಲಿಂದಲೇ ಮೇಲೆ ಮಹಡಿಗೆ ಸಾಗಲು ಮೆಟ್ಟಲು. ಒಳಗೆ ಕಾಲಿಟ್ಟವಳೇ ಅಜ್ಜಿ ನೋಡಿದಳು. ರಾಮಕಲಿಯು ತೇಪೆ ಹಚ್ಚಿದ—ಪತ್ತಲ ಉಟ್ಟು, ಆ ಹೌದಿನ ಬದಿಯಲ್ಲಿ ಒಂದು ಬಟ್ಟೆಯ ಮೊಟ್ಟೆಯಿಟ್ಟುಕೊಂಡು ಸಾಬೂನು ಹಚ್ಚತೊಡಗಿದ್ದಾಳೆ. ಇವು ಆ ರೋಗಿಯ ಬಟ್ಟೆಗಳೆಂದು ಅಜ್ಜಿ ಆಗಲೇ ತಿಳಿದುಕೊಂಡಳು. ಅಜ್ಜಿಯನ್ನು ನೋಡಿದವಳೇ ರಾಮಕಲಿ ಎದ್ದು ಸುಮ್ಮನೇ ನಿಂತುಕೊಂಡಳು.

ಅಜ್ಜಿ ಎಂದಳು 'ರಾಮಕಲಿ, ನಿಮ್ಮ ಅತ್ತೆ ಎಲ್ಲಿ?'

ರಾಮಕಲಿ ಮಹಡಿಯತ್ತ ತೋರಿಸುತ್ತ ನುಡಿದಳು. 'ಮೇಲಿದ್ದಾಳೆ'

ಕೆಳಗಿನ ಮಾತುಕತೆ ಕೇಳಿ ಒಬ್ಬ ಸ್ತ್ರೀಯು ಇಣಿಕಿ ಹಾಕಿ ನೋಡಿ ಕೇಳಿದಳು 'ನೀವು ಯಾರು?'

''ನೆರೆಮನೆಯಾಕೆ ನಿಮ್ಮ ಮನೆಯಲ್ಲಿ ಜಡ್ಡಾಗಿರುವದೆಂದು ಕೇಳಿ ನೋಡಲು ಬಂದಿದ್ದೇನೆ''

ನೆರೆಮನೆಯು ಸ್ಥಿತಿವಂತಿಕೆಯನ್ನು ನೆನೆದು ಮೇಲಿಂದಲೇ ಆ ಸ್ತ್ರೀ ಆಗ್ರಹಪಡಿಸಹತ್ತಿದಳು 'ಬನ್ನಿರಮ್ಮ ಮೇಲೆ ಬನ್ನಿ.' ಅಜ್ಜಿ ತಿಳಿದು ಬಿಟ್ಟಳು ಈಕೆಯೇ ಅತ್ತೆ ಎಂದು

ರೋಗಿಯ ಸಂಬಂಧ ಮಾತುಗಳೇ ಹೆಚ್ಚಾಗಿಬಿಟ್ಟವು ನಡುವೆ ರಾಮಕಲಿಯ ಲಗ್ನ ವಿಚಾರ ತೆಗೆಯಲು, ಅಜ್ಜಿಗೆ ಸಂಕೋಚವೆನಿಸ ತೊಡಗಿತು ಆದರೆ ತಾನಾಗಿಯೇ ಸುಯೋಗ ಪ್ರಾಪ್ತವಾಯಿತು

'ಅತ್ತೆ ಎಂದಳು ಬೇನೆ ನೋಡಿದರ ಈಪರಿ ಅಲ್ಲದೆ ಎರಡು ಎದೆ ಯುದ್ದ ಹಣ್ಣು ಹುಡುಗರು ಹಿರಿಯಾಕೆ ಬಹಳ ದೊಡ್ಡವಳಾಗಿದ್ದಾಳೆ ಆದರ ಇನ್ನೂ ಲಗ್ನ ವೇಳೆ ಕೂಡಿ ಬಂದಿಲ್ಲ ಏನು ಮಾಡುವದು? ಇವರಿಗೆ ಬೇನೆಯ ಚಿಂತೆ ಅಷ್ಟಿಲ್ಲ ಲಗ್ನದ ಮಾತಿನಲ್ಲಿಯೇ— ಬಳಲಿಹೋಗುತ್ತಿದ್ದಾರೆ'

ಅಜ್ಜಿ ಮಾತಾಡಿದಳು ''ಕೆಳಗೆ ಒಬ್ಬಾಕೆಯನ್ನು ನೋಡಿದೆ ಇನ್ನೊಬ್ಬಳೆಲ್ಲಿ?'' ಅತ್ತೆ ಮೂಗು ಮುರಿದು ಹೇಳಿದಳು ಇಲ್ಲಿಯೇ ಇದ್ದಾಳೆ ಮಾಲತೀ ಇಲ್ಲಿ ಬಾ''

ಮಾಲತಿ ಹೊರಗ ಬಂದು ಬೆದರಿ ಅತ್ತೆಯ ಬಳಿ ನಿಂತುಕೊಂಡಳು

ಕಠೋರತೆಯಿಂದ ಮಾಲತಿಗೆಂದಳು 'ನೀನೇನು ಹುಡುಗೆಯೋ? ಅಡವಿಯ ಮೃಗವೋ? ನಮಸ್ಕಾರ ಮಾಡಲ್ಲ'

ನಾಚಿಕೆಯಿಂದ ಮಾಲತಿ ನಮಸ್ಕರಿಸಿದಳು ಅಜ್ಜಿ ಬಳಿಗೆ ಕರೆದು ಆ ಬಾಲಿಕೆಯನ್ನು ಎದೆಗಪ್ಪಿಕೊಂಡು, ತೊಡೆಮೇಲೆ ಕೂಡಿಸಿಕೊಂಡಳು ಸ್ನೇಹದಿಂದ ಮೈತುಂಬ ಕೈಯಾಡಿಸಿದಳು ''ಅಹಾ! ಸಾಕ್ಷಾತ್ ಲಕ್ಷ್ಮಿ! ಏನು ಮಾಡುತ್ತಿದ್ದೆಯಮ್ಮಾ?''

ಬೆದರುತ್ತಲೇ ಮಾಲತಿ ಉತ್ತರ ಕೊಟ್ಟಳು. 'ಮಾವನ ಕೈಯಾಡಿಸುತ್ತಿದ್ದೆ'

ಅಜ್ಜಿ ಎಂದಳು 'ನೀನು ಲಕ್ಷ್ಮಿಯಮ್ಮ' ಎಂದವಳೇ ಮಾಲತಿಯ ಅತ್ತೆ ಕಡೆಗೆ ತಿರುಗಿ ಮಾತಾಡತೊಡಗಿದಳು "ನೋಡಿರಮ್ಮಾ" ರೋಗವೇನೋ ಭಗವಂತನಾಧೀನ ಅವನ ದಯೆಯ ಹೊರತು, ಹೆಚ್ಚಿನ ಔಷಧ ಇನ್ನಿಲ್ಲ ಆದರೂ ಶಕ್ಯವಿದ್ದಷ್ಟು ಮನುಷ್ಯ ಯತ್ನಿಸಬೇಕಲ್ಲ. ನಿಮ್ಮ ಈ ವಿಪತ್ತಿನಲ್ಲಿ ನಾವು ನರವಾಗುತ್ತೇವೆ' ಎಂದು ಹೇಳಿ ಮೆಲ್ಲ-ಮೆಲ್ಲನೆ ರಾಮುಕಲಿಯನ್ನು ತೆಗೆದುಕೊಂಡು ಅನಂತನ ವಿವಾಹ ಮಾಡುವ ಮಾತು ತಿಳಿಸಿದಳು

ರಾಮುಕಲಿಯ ಅತ್ತೆ ಇದೊಂದು ಅನಾಯಾಸ ಸುಯೋಗವೆಂದು ಭಾವಿಸಿದಳು ಆದರೂ ಇನ್ನಿಷ್ಟು ಅನುಕೂಲ ಹುಡುಕಬೇಕೆಂದು ನುಡಿದಳು "ಅದೇನೋ ಆಗಬಹುದು ಆದರೆ ರೋಗಿಯ ವೆಚ್ಚವೊಂದು, ಅಲ್ಲದೇ ಹುಡುಗಿಯ ಲಗ್ನದ ಮತ್ತೊಂದು ವೆಚ್ಚ, ಇದು ಹೇಗೆ ಸಾಗಬೇಕು ಹೇಳಿ ರೋಗಿಯ ವಚ್ಚವನ್ನಷ್ಟು ಬಿಟ್ಟು ಹೆಚ್ಚಿನ ಒಂದು ಕಾಸು ವೆಚ್ಚ ಮಾಡಲಿಕ್ಕೂ ನಮಗೆ ಶಕ್ತಿ ಉಳಿದಿಲ್ಲ ಈಗ

"ವೆಚ್ಚ ಮಾಡಿಯೇ ನೀವು ಲಗ್ನ ಮಾಡಬೇಕಾದರೆ, ನಾನು ಇದರಲ್ಲಿ ಮಾಡಬೇಕಾದ ಹೆಚ್ಚಿನ ಉಪಕಾರವೇನಾಯಿತು ? ನೋಡಿ ದೇವರ ದಯೆಯಿಂದ ನಮ್ಮ ಅನಂತನಿಗೆ ಯಾರ ಹಣಕ್ಕೂ ಆಶೆ ಪಡುವ ಸ್ಥಿತಿ ಇಲ್ಲ ಭಗವಂತ ಕೊಟ್ಟದ್ದೇ ಸಾಕಷ್ಟಿದೆ ನನಗೆ ಬೇಕಾದ್ದು ಕೇವಲ ಒಳ್ಳೆ ಹುಡುಗಿ'

ಒಳಗೊಳಗೇ ಸಂತುಷ್ಟಳಾಗಿ ಅತ್ತೆ ಗಂಭೀರಭಾವದಿಂದ ಹೇಳತೊಡಗಿದಳು "ಒಳ್ಳೇದು ನೀವು ಕೂತಿರಿ ಅವರಿಗೂ ಈ ಮಾತು ತಿಳಿಸಿಬರುತ್ತೇನೆ"

ನೂರಾರು ಅರ್ಥ ಗಂಟೆ-ಮಾತಾಡಿ ಅತ್ತೆ ಬಂದು ಹೇಳಿದಳು "ನೀವು ತುಸು ಬಾಗಿಲ ಹತ್ತಿರ ಬರುತ್ತೀರಾ ? ಒನ್ನಿರಿ ಅವರು ನಿಮ್ಮೊಡನೆ ಒಂದೆರಡು ಮಾತು ಆಡಬೇಕನ್ನುತ್ತಾರೆ"

ಅಜ್ಜಿಯು ಬಾಗಿಲ ಬಳಿಯಲ್ಲಿ ಬಂದಕೂಡಲೆ ಹೇಗೆ—ಹೇಗೋ ಎದ್ದು ಕುಳಿತು ಹೇಳಹತ್ತಿದನು

"ನಿಮ್ಮ ಮಾತು ಕೇಳಿ ನಾನು ಉಪಕೃತನಾಗಿದ್ದೇನೆ ಆದರೆ ಈ ಸಂಬಂಧದಲ್ಲಿ ನಾನು ಒಂದು ಮಾತು ಹೇಳಬೇಕಾಗಿದೆ ಈ ಜೀನೆಯ

ಸ್ಥಿತಿ ನೋಡಿದರೆ ನಾನು ಉಳಿಯುವ ಆಶೆ ಇಲ್ಲ ನಾನು ಹೋದಮೇಲೆ ಆಕೆಯ ಗತಿ ಏನು? ಈ ಚಿಂತೆ ಸಾವಿಗಿಂತ ಹೆಚ್ಚು ತಾಪದಾಯಕವಾಗಿದೆ ಅಲ್ಲದೆ ಇವೆರಡು ಹುಡುಗಿಯರು ಆಕೆಯ ಕೊರಳಿಗೆ ಬಿದ್ದುಬಿಟ್ಟರೆ, ಆಕೆಯ ವಿಪತ್ತಿಗೆ ಪಾರ ಉಳಿಯಲಾರದು ಹೀಗಾಗದೆ ಇವೆರಡು ಮಕ್ಕಳು ತಂತಮ್ಮ ಮನೆ ಹೊಂದಿಕೊಂಡಿದ್ದರೆ, ನನ್ನ ಹೃದಯಕ್ಕೇನೋ ಅಷ್ಟು ಶಾಂತಿ ದೊರಯುತ್ತಿತ್ತು ಇದಕ್ಕಾಗಿ ನಾನು ಯತ್ನಿಸತೊಡಗಿದ್ದೇನೆ ಒಂದೇ ಮನೆಯಲ್ಲಿ ಇಬ್ಬರನ್ನೂ ಸೇರಿಸಬೇಕು ಒಂದು ಕಡೆಗೆ ಈ ವಿಷಯಕ್ಕೆ ಮಾತುಕತೆಗಳು ನಡೆದಿವೆ ನಿಮಗೆ ಹೇಳದಿರಲು ಆಗುವದಿಲ್ಲ — ನಮ್ಮ ಮೇಲೆ ದಯಮಾಡಿ ಮಾಲತಿಯ ಭಾರವನ್ನು ನೀವು ವಹಿಸುವಂತಿದ್ದರೆ ಈ ಸಮ್ಮಂಧಕ್ಕೆ ಏನೂ ಪರವಿಲ್ಲ

ಅಜ್ಜಿ ಹರ್ಷಯುಕ್ತಳಾಗಿ ನುಡಿದಳು 'ಛೇ! ಇದು ಭಾರವಲ್ಲ ನಮಗೆ ಬಹಳೇ ಸಂತೋಷದ ಮಾತಿದು ಮಾಲತಿಯನ್ನು ನಾನು ಎದೆಗಪ್ಪಿಕೊಳ್ಳುತ್ತೇನೆ ಆಕೆಯ ಎಲ್ಲಾ ಭಾರ ನಮ್ಮದು"

ಅದೇ ದಿನ ಪಂಡಿತರನ್ನು ಕರೆಸಿ, ವಿವಾಹ ಮುಹೂರ್ತ ಗೊತ್ತು ಮಾಡಿದರು ತುಸು ದಿನಗಳನಂತರ, ರಾಮುಕಲಿ–ಮಾಲತಿಯರೂ ಕೂಡಿ ಅಜ್ಜಿಯ ಬಳಿಗೆ ಬಂದುಬಿಟ್ಟರು ಲಗ್ನವಾದಮೇಲೆ ಬಂದು ತಿಂಗಳಾಗಿರಬಹುದು ಅವರ ಮಾವ ತೀರಿಹೋದನು ಮುಂದಿನ ಕ್ರಿಯಾ-ಕರ್ಮ ಮುಗಿಸಿ ಅತ್ತೆಯು, ಯಾರೋ ತನ್ನ ಅಣ್ಣನಲ್ಲಿಗೆ ಹೊರಟುಹೋದಳು ಮೂರು ತಿಂಗಳಾದವು ಅಜ್ಜಿ ಕಾಶೀವಾಸಕ್ಕೆ ನಡೆದಳು. ಈಗ ರಾಮುಕಲಿಯೇ ಮನೆಯ ಸ್ವಾಮಿನಿ! ವಿವಾಹಯೋಗ್ಯಳಾದ ಮಾಲತಿಯಿಂದ ರಾಮುಕಲಿಯು ಚಿಂತಿತಳಾಗಿದ್ದಾಳೆ ಅವರ ಮನೆಯಲ್ಲಿರುವ ಇಂಥ ಯೋಗ್ಯ ವರ ಬಿಟ್ಟು ಬೇರೆ ಕಡೆಗೆ ಕೊಟ್ಟು ಲಗ್ನ ಮಾಡಲು ರಾಮುಕಲಿಗೆ ಮನಸ್ಸಿರಲಿಲ್ಲ.

(೩)

ಅನಂತನ ಅಜ್ಜಿಯ ಮಗಳಾದ ರಾಜರಾಣಿಯು ಬಂದು ಎರಡು ಮೂರು ದಿನಗಳಾಗಿದ್ದವು ಲಖನೌದಲ್ಲಿಯೇ ಇವಳ ಅತ್ತೆಮನೆ

ತವರು ಮನೆ ಉನ್ನಾವ ಪ್ರಾಂತದ ಒಂದು ಹಳ್ಳಿಯಲ್ಲಿ ನಡು ನಡುವೆ ಯಾವಾಗಾದರೊಮ್ಮೆ ಆಕೆ ಅನಂತಣ್ಣನ ಮನೆಗೆ ಬಂದಿರುತ್ತಿದ್ದಳು ಅವಳ ಪತಿ ರಾಮಚಂದ್ರನು ಚೀಫ್ ಕೋರ್ಟಿನಲ್ಲಿ ವಕೀಲಿ ಆರಂಭಿಸಿ ಮೂರು ವರ್ಷಗಳಾಗಿದ್ದವು

ಅಡಿಗೆ ಮನೆಯಲ್ಲಿ ರಾಮಕಲಿಯು ಸಂಜೆಯ ಅಡಿಗೆಯನ್ನು ಮಾಡುತ್ತಿದ್ದಳು ರಾಜರಾಣಿ—ಮಾಲತಿಯರು ನೆರವಿಗಿದ್ದರು ಪ್ರತಿದಿನ ಹೊಸ ನಲ್ಲಿಕಾಯಿ ಮುಂತಾದುವುಗಳನ್ನು ಆಕೆ ರುಚಿಯಾಗಿ ಮಾಡಿ ಬಡಿಸುವದರಿಂದ, ಗಂಡ—ಮೈದುನರಿಗೆ ಊಟ ಸೊಗಸಾಗುತ್ತಿತ್ತು ಈ ದಿನ ರಾಜರಾಣಿಯ ಗಂಡ ರಾಮಚಂದ್ರ ಬರುವವನಿದ್ದುದರಿಂದ ಅಡಿಗೆಯ ವಿಶೇಷ ಸಿದ್ಧತೆ ನಡೆದಿತ್ತು

ಒಲೆಗೆ ಕಟ್ಟಿಗೆ ಚಾಚುತ್ತ ರಾಮಕಲಿ ಹೇಳಿದಳು. "ರಾಜರಾಣಿ! ಆ ಕಡಲೇಹಿಟ್ಟಿನಲ್ಲಿ ಗುಲಾಬಜಲ-ಕೇಶರ-ಯಾಲಕ್ಕಿಯ ಪುಡಿ ಬೆರೆಸಿ ಅದನ್ನು ಕೈಯ್ಯಾಡಿಸಮ್ಮಾ!" ಮಾಲತಿಯ ಕಡೆ ತಿರುಗಿ ನುಡಿದಳು "ಮಾಲತೀ ಆಕೆಯ ಕೆಲಸವಾಗುವವರೆಗೆ ನೀನು ಈ ಬೆಂದ ಒಟಾಟಿಗಳ ಸಿಪ್ಪೆ ಸುಲಿ"

ಅವರಿಬ್ಬರೂ ತಂತಮ್ಮ ಕಾರ್ಯದಲ್ಲಿ ತೊಡಗಿದರು ಕಟ್ಟಿಗೆ ಚಾಚುತ್ತ ರಾಮಕಲಿ ಅವುಗಳ ಬಿರುಸುತನ ನೋಡಹತ್ತಿದಳು. ಹೊಗೆ ಮತ್ತು ಉಳದಿಂದ ಆಕೆಯ ಕಂಪು-ಸುಂದರ ಮೊಗವು ಚನ್ನದಂತೆ ಕಾಂತಿಮಾನವಾಯಿತು ಅದನ್ನು ನೋಡಿ ರಾಜರಾಣಿ ಅಂದಳು 'ನಿಜವಾಗಿ ಅತ್ತಿಗೆ ಒಬ್ಬ ಮಾಲತಿಯನ್ನು ಬಿಟ್ಟರೆ, ನಮ್ಮ ಕನೋಜಿಗಳ ಮನೆಯಲ್ಲಿ ನಿನ್ನಂಥ ಸುಂದರಿಯರನ್ನು ನಾನು ನೋಡಿಲ್ಲ.'

ಈ ಮಾತು ಕೇಳಿ ರಾಮಕಲಿ ನಕ್ಕು ನುಡಿದಳು. 'ಹೇಗೆ ನೋಡುವಿ? ತನ್ನ ಮುಖ ತನಗೆ ಕಾಣುವದಿಲ್ಲ'

ಮಂದಹಾಸದಿಂದ ರಾಜರಾಣಿ ಮಾತಾಡಿದಳು 'ಚನ್ನಾಗಿಯೇ ನೋಡಿಕೊಳ್ಳುತ್ತೇನೆ ಕನ್ನಡಿಯ ಮುಂದೆ ನಿಂತಕೂಡಲೆ ಶ್ರೀಮುಖ ಕಂಡೇಕಾಣುವದಲ್ಲ ಯಾವುದೆಲ್ಲಿ ಅತ್ತಿಗೆ! ಎಲ್ಲಿ ಚಿನ್ನ, ಎಲ್ಲಿ ಹಿತ್ತಾಳೆ?"

ರಾಮಕಲಿ-ಮರುಮಾತು ಹೇಳಿದಳು 'ಇರಲಿರಲಿ ನಿನ್ನ ಗಂಡ ಬರಲಿ

ಇವರ ನಿರ್ಣಯ ಅವರೇ ಮಾಡಲಿ. ನೋಡುವಾ ನಿನ್ನ ಮುಖ ಸುಂದರವೆಂದು ಹೇಳುವರೋ, ನನ್ನ ಮುಖವನ್ನೋ'

ರಾಜರಾಣಿಯ ಕಪೋಲ ಪ್ರಾಂತದಲ್ಲಿ ಲಜ್ಜೆಯ ಪುಂಜು ತೋರಿಕೊಂಡಿತು ಆದರೆ ಜೋಕೆಯಿಂದ ಉತ್ತರಿಸಿದಳು ಆಗಲವ್ವಾ, ಅಲ್ಲಿ ನಾನು ಸೋತರೆ ಅಣ್ಣನ ಬಳಿ ಅಪೀಲು ಮಾಡುತ್ತೇನೆ ನೋಡುವಾ ಆಗ ಯಾರ ಮುಖದ ವರ್ಣನೆ ನಡೆಯುವುದೋ!'

ರಾಮಕಲಿಯ ಮುಖದಲ್ಲಿ ಮುಗುಳು ಮಲ್ಲಿಗೆ ತೋರಿತು ಅಲ್ಲವೇ! ನಕೀಲರ ಸೊಸೆ ನೀನು ಅಪೀಲು ಮಾಡುವದನ್ನು ಚನ್ನಾಗಿ ಕಲಿತಿದ್ದೀಯಾ ಒಂದು ವೇಳೆ ಅವರು ಸಹ ನಿನ್ನ ಮುಖವನ್ನೇ ವರ್ಣಿಸಿದರೆ ಆಗೇನು ಹೇಳುವೆ? ಬೇಗ ನುಡಿ'

ರಾಜರಾಣಿ ನಾಚಿ ಕೆಂಪೇರಿದಳು ರಾಮಕಲಿಯ ಬೆನ್ನಿಗೆ ಮೆಲ್ಲಗೆ ಒಂದೇಟು ಹಾಕಿ ನುಡಿದಳು "ನೀನು ಬಹಳ ಕೆಟ್ಟವಳು ಒಮ್ಮೆಲೇ ಹೊಸ ವಿಚಾರ ಹೊಳೆಯಿತೇನೋ?' ನಮ್ಮ ಮನೆಯವರು ನಿನ್ನ ಮುಖ ಸುಂದರವೆಂದು ಹೇಳಿದರ ಆಗ ನೀನೇನು ಮಾಡುತ್ತೀ ಹೇಳು'

ನಗುತ್ತಲೇ ರಾಮಕಲಿ ಆಡಿದಳು "ಹಾಗೆಂದರೆ ಅವರಿಗೆ ಬಾಯ್ತುಂಬ ಹಾಲು-ನಕ್ಕರೆ ಕುಡಿಸುತ್ತೇನೆ ಆದರೆ ನಿಮ್ಮ ಅಣ್ಣ ನೀನು ಸುಂದರಿ ಎಂದು ಬಿಟ್ಟರೆ ನೀನೇನು ತಿನ್ನಿಸುವಿ, ಮೊದಲು ಹೇಳು'

ರಾಜರಾಣಿ ಕಪಲೆಬಿಟ್ಟನ ಪಾತ್ರೆಯನ್ನ ಆಚೆಗೆ ನೂಕಿ ಸಸುಗೋಪದಿಂದಾಡಿದಳು " ನೀನು ದೊಡ್ಡಾಕೆಯವ್ವಾ! ನಿನ್ನೊಡನೆ ನಾನು ಮಾತೇ ಆಡುವದಿಲ್ಲ"

ನಗು—ನಗುತ್ತಾ ರಾಮಕಲಿ ಅಂದಳು 'ಅಮ್ಮಯ್ಯಾ! ನನ್ನ ಮೇಲೆ ಸಿಟ್ಟಾದೆಯಾ? ನೀನು ಅಪೀಲು ಮಾಡುತ್ತೇನೆಂದು ಹೇಳುತ್ತಿಯಲ್ಲ? ಹೀಗಾದರ ಮುಂದೆ ಹೇಗೆ ನಡೆಯಬೇಕು?'

ಆ ಪಾತ್ರೆಯನ್ನು ಬಳಿಗೆಳೆದುಕೊಂಡು ರಾಜರಾಣಿ ಗಲ್ಲ ಉಬ್ಬಿಸಿ ಹೇಳಿದಳು 'ನಿನ್ನದಲ್ಲ ಗೊತ್ತವ್ವಾ ನನಗೆ 'ರಾಮಕಲಿ ತಿರುಗಿ ಏನೆನ್ನುವಳೋ ಎಂಬ ಭಯದಿಂದ ರಾಜರಾಣಿ ಮುಂದಾಡಲಿಲ್ಲ ಸುಮ್ಮನಾದಳು.

ಅತ್ತಿಗೆ—ನಾದಿನಿಯರ ಸಲ್ಲಾಪ-ಕೇಳಿ ಮಾಲತಿ ತನ್ನಲ್ಲಿಯೇ ಹಿಗ್ಗಿ

ಹೋಗಿದ್ದಳು ರಾಜರಾಣಿಯು ಅವಸ್ಥೆ ನೋಡಿ ಆಕೆಗೆ ನಗು ಬಂತು 'ಅಕ್ಕಾ ರಾಜರಾಣೀ! ಎಚ್ಚರವಮ್ಮಾ. ಅಕ್ಕನ ಬಾಯಿಗೆ ಹೆಚ್ಚು ಹತ್ತಬೇಡ. ಅಕ್ಕನ ಬಾಯಿ ಅರಳಿತೆಂದರ ನೀನು ತಲೆ ಮೇಲೆ ಕಾಲು ಹೊತ್ತುಕೊಂಡು ಓಡಬೇಕಾದೀತು ಬಲ್ಲೆಯಾ?"

ಮಾಲತಿಯ ಮಾತು ಕೇಳಿ ರಾಜರಾಣಿಯ ಲಕ್ಷ್ಯವು ಮಾಲತಿಯ ಕಡೆ ತಿರುಗಿತು ರಾಮಕಲಿಗೆಂದಳು 'ಅದಿರಲಿ ಅತ್ತಿಗೆ ನಮ್ಮ ಚೆಲುವಿನ ನಿರ್ಣಯ ಒಂದು ರೀತಿ ಆದಂತೆಯೇ ಸರಿ ಆದರೆ ಮಾಲತಿಯ ಮುಖದ ಸೌಂದರ್ಯ ನಿರ್ಣಯ ಯಾರಿಂದ?"

ರಾಜರಾಣಿಯ ಈ ಆಕಸ್ಮಿಕ ಪ್ರಶ್ನದಿಂದ ಮಾಲತಿ ಅಂಜಿಕೊಂಡಳು ತುಸು ವೇಳೆ ಸುಮ್ಮನಿದ್ದು ಅಂದಳು "ಚೆನ್ನಾಗಿದೆ ನಾನೇನೋ ಒಳ್ಳೇ ಮಾತು ಹೇಳಿದೆ ನನ್ನ ಕಡೆಗ ತಿರುಗಿಬಿಟ್ಟಯಾ?"

ರಾಜರಾಣಿ ಹುಬ್ಬು-ಪಕ್ಕ ಮಾಡಿ ಒಳಗೇ ನಗುತ್ತ ನುಡಿದಳು. 'ಹಾಗಂದರೇನಮ್ಮಯ್ಯಾ ನಮ್ಮ ಮಾತಿನಲ್ಲಿ ಮರೆತುಬಿಟ್ಟಿದ್ದೆವು ನಿನ್ನ ಮಾತುಗಳನ್ನು ಲಕ್ಷಿಸದೇ ಇರುವದು ರೀತಿಯೇ? ಹೇಳೇ, ಅತ್ತಿಗೆ ಯಾರಿಂದ ನಿರ್ಣಯ?'

ರಾಮಕಲಿ ತುಟಿ ಕಟ್ಟಿ ನಗುತ್ತಿದ್ದಳು ಹಾಗೇ ರಾಜರಾಣಿಯ ಕಡೆಗೆ ಮೊಗ ತುಸು ಹೊರಳಿಸಿ ಮೆಲ್ಲನಂದಳು 'ಮೈದುನ ದೇವರಿಂದ"

ಬಿರಡಿ ಒತ್ತಿದ ಕೂಡಲೆ ವಿದ್ಯುದ್ದೀಪ ಹತ್ತಿಕೊಂಡು ಝಗ-ಮಗಿಸುವಂತೆ ರಾಮಕಲಿಯ ಆದೊಂದೇ ಮಾತಿನಿಂದ ಮಾಲತಿಯ ಮುಖಮಂಡಲ ಕಾಂತಿಯುತವಾಯಿತು ಇಂಥ ಅದ್ಭುತ ಹಾಗೂ ಮಹತ್ವದ ಮಾತನ್ನು ರಾಮಕಲಿ ನಗೆ ಮಾತಿನಲ್ಲಿ ನಿಃಸಂಕೋಚವಾಗಿ ಹೇಳಿಬಿಟ್ಟಳಲ್ಲ? ಎಂಬುದನ್ನು ನೆನೆದು ಮಾಲತಿಗೆ ನಾಚಿಕೆಯಕಿಂತ ಹೆಚ್ಚು ವಿಸ್ಮಯವೆನಿಸಿತು. ಈ ಮಾತಿನ ವಿರುದ್ಧವಾಗಿ ಏನಾದರೂ ಮಾತಾಡುವದೆಂದರೆ ಇನ್ನಷ್ಟು ಸಂಕೋಚ ಸುಮ್ಮನೆ ತಲೆ ತಗ್ಗಿಸಿ ಮಾಲತಿ ಬಟಾಟೆ ಸುಲಿಯುತ್ತಿದ್ದಳು

ರಾಜರಾಣಿ-ನಗುತ್ತ ಹುಬ್ಬು ಗಂಟಿಕ್ಕಿ ನುಡಿದಳು 'ಹುಂ' ತಿಳಿಯಿತು ಹಾಗೆ ನಿಮ್ಮ ಯೋಚನೆಯೋ? ಆದರೆ ಹಾಗಾಗುವಂತಿಲ್ಲ ಅತ್ತಿಗೆ ಮಾಲತಿಯನ್ನು ನಾನು ಎತ್ತಿಕೊಂಡು ಹೋಗುತ್ತೇನೆ"

ನಗೆ ಮಾತಾಡಿದಳು ರಾಮುಕಲಿ "ಅದು ಹೇಗಮ್ಮಾ"?

ರಾಜರಾಣಿ ಅಂದಳು 'ನನ್ನ ಮೈದುನರ ಸಂಗಡ ಮಾಲತಿಯ ಲಗ್ನವಾಗುವದು'

ರಾಮುಕಲಿ ಹೇಳಿದಳು "ಹುಂ ನನ್ನ ಮೈದುನರೇನು ಹಾಗೇ ಹುಬ್ಬುಗೈ ಹಚ್ಚಿರಬೇಕೇ?"

'ಕೇಶವಣ್ಣ ಎಂದು ಲಗ್ನವಾಗುವನೋ ಅರಿಯದ ಮಾತು. ಅದು ಹೇಗೂ ಇರಲಿ ಅತ್ತಿಗೆ. ನಮ್ಮ ಸಮಾಜದಲ್ಲಿ ಮಾಲತಿಯನ್ನು ಹೆಚ್ಚು ದಿನ ಕುಮಾರಿಯಾಗಿಡುವದು ಒಳಿತಲ್ಲ. ನನ್ನ ಮೈದುನರ ಎಂ. ಎಸ್. ಸೀ. ಪರೀಕ್ಷೆಯ ನಂತರ ಲಗ್ನವೆಂದು ನಿರ್ಣಯವಾಗಿದೆ."

ಒಲೆಮೇಲಿಂದ ತಪ್ಪಲೆ ಇಳಿಸುತ್ತ, ರಾಮುಕಲಿ ಹೇಳಿದಳು 'ಇನ್ನು ಬಹಳ ದಿನ ಹಾಗೆ ಇರುವಳೆಂದು ನೀನು ತಿಳಿದಿರುವೆಯಾ? ನಾವಂತೂ ನಿಶ್ಚಯ ಮಾಡಿಕೊಂಡಿದ್ದೇವೆ. ಮೈದುನರೊಡನೆ ಆಕೆಯ ಲಗ್ನವೆಂದು. ಅವರ ಪರೀಕ್ಷೆಯಾಗುವದೇ ತಡ. ಅದಕ್ಕಾದರೂ ಇನ್ನೆಷ್ಟು ದಿನ? ನಿಮ್ಮ ಅಣ್ಣಂದಿರಿಗೆ ಮಾಲತಿ ಮಂದಿಯ ಮನೆಗೆ ಹೋಗಬೇಕೆಂದು ಅಪೇಕ್ಷೆ ಇಲ್ಲ.'

ಮಾಲತಿ ಕೆಳಗು-ಮೇಲಾಗುತ್ತಿದ್ದಳು. ಈ ಹಾಳು ರಗಳೆ ಆಕೆಗೆ ರುಚಿಸಿರಲಿಲ್ಲ. ಆಕೆಯು ನಾಚಿಕೊಂಡಿದ್ದಳು. ಮಾತಿಗೆ ವಿರೋಧ ಮಾಡಿ ನುಡಿಸುವದಕ್ಕೂ ಆಕೆಗೆ ಸಂಕೋಚವೆನಿಸಿತ್ತು. ನಿರುಪಾಯಳಾಗಿ ಮುಂಗಾಣದೇ—ಬಟಾಟಿಗಳನ್ನು ಬಿಡಿಸಿ, ಬೆಣ್ಣೆಯಂತೆ ಮಿದು ಮಾಡಿ ಹಾಕುತ್ತಿದ್ದಳಷ್ಟೇ.

ರಾಜರಾಣಿ ಅಂದಳು "ನನ್ನ ಸಂಗಡ ಇದ್ದ ಮೇಲೆ, ಮಂದಿಯ ಮನೆಗೆ ಹೋದಂತೇನೂ ಅಲ್ಲ."

ರಾಮುಕಲಿ ಕೇಳಿದಳು "ಇಷ್ಟು ದೊಡ್ಡ ಹುಡುಗಿಯ ಸಂಗಡ ಕೃಷ್ಣನ ಲಗ್ನ ಮಾಡಲು ರಾಮು ಒಪ್ಪುವರೇ?"

"ಯಾರೂ ಹಿಂತೆಗೆಯಲಾರರು. ಅವರೂ ಒಪ್ಪುವರು, ಮೈದುನರೂ ಒಪ್ಪುವರು." ಮಾಲತಿಯನ್ನು ನೋಡುತ್ತಾ ನುಡಿದಳು "ಇಂಥ ಚಂದ್ರಕಲೆಯನ್ನು ಯಾರು ಒಪ್ಪಲಿಕ್ಕಿಲ್ಲ?"

ಈಸಲ ಮಾಲತಿಯ ಸಹನಶಕ್ತಿ ಎಲ್ಲೋ ಮೀರಿಹೋಯಿತು ಸಹ ಕೋಪ ನಾಚಿಕೆಯಿಂದ ನುಡಿದಳು ಇನ್ನು ಸಾಕಮ್ಮಾ—ಅಕ್ಕ, ರಾಜರಾಣಿ. ಜಗತ್ತಿನೊಳಗಿರುವ ಹಾಳು ಹರಟೆಯ ವಿನಾ ನಿಮಗೆ ಬೇರಾವ ಮಾತೂ ಇಲ್ಲವೇ?

ರಾಜರಾಣಿ ನಕ್ಕುಬಿಟ್ಟಳು 'ಮಾಲತೀ ನಿನಗೆ ಸಿಟ್ಟು ಬಂತೇ? ಲಗ್ನದ ಮಾತು ಕೇಳಿ ನಾನಂತೂ ಬಹಳ ಆನಂದಿಸುತ್ತಿದ್ದೆವಮ್ಮಾ' ಎಂದವಳೇ ಹುಚ್ಚುಚ್ಚು ನಗೆ ನಗಹತ್ತಿದಳು ಆಕೆಯ ಸವಿನಗೆಯಿಂದ ಅಡಿಗೆ ಮನೆ ಎಲ್ಲ ತುಂಬಿ ಹೋಯಿತು

ಆಶ್ಚರ್ಯದಿಂದ ರಾಮಕಲಿ ಆಡಿದಳು 'ಇದೇನು ಮಾತು ಲಗ್ನದ ಸುದ್ದಿಯಿಂದ ನಿನಗ ಆನಂದವೆನಿಸುತ್ತಿತ್ತೇ ರಾಜರಾಣಿ?'

ಯಾಕಾಗಬಾರದು? ನೀನೂ ಒಂದು ದಿನ ಹೇಳತೊಡಗಿದ್ದೆ ಅಣ್ಣನ ಕೂಡ ನಿನ್ನ ಲಗ್ನ ನಿಶ್ಚಯವಾದಾಗ ನಿನಗೆ ಬಹಳ ಆನಂದವಾಗಿರಲಿಲ್ಲವೇ?'

ತುಸು ಹಾಗೆ-ಹೀಗೆ ಹಿಂದೆಳೆಸಿ ಲಜ್ಜಿತಭಾವದಿಂದ ಮಾತಾಡಿದಳು 'ಅದರ ಕಾರಣ ಬೇರಿತ್ತು'

'ಲಗ್ನಕ್ಕಿಂತ ಮೊದಲು ಮಹಡಿಯ ಮೇಲಿಂದ ಅಣ್ಣನನ್ನು ನೋಡಿ ನೀನು ಮರುಳಾಗಿದ್ದು ಒಂದಲ್ಲವೇ?'

ಈ ಸಲ ರಾಮಕಲಿಯ ಕಪೋಲದಲ್ಲಿ ಕಂಪಡರಿಕೊಂಡಿತು ಸವಿ ಮಾತಿನ ಈ ಮಾತಿನ ಸುಳ್ಳಿ ನಾದಿನಿಯನ್ನು ಬೇರೊಂದು ಮಾತಿಗೆ ತಿರುಗಿಸುವ ವಿಚಾರದಿಂದ ಆಕೆ ಕೂಡಲೆ ಹೇಳಿದಳು 'ಅದಿರಲಿ ರಾಜರಾಣಿ, ಲಗ್ನಕ್ಕೆ ಮೊದಲು ನೀನು ನಿನ್ನ ಗಂಡನನ್ನು ನೋಡಿದ್ದೆಯಾ?"

ರಾಮಕಲಿಯ ಪ್ರಶ್ನೆಯಿಂದ ರಾಜರಾಣಿ ಹಿಂದು-ಮುಂದಾಡಿದಳು ತಿರುಗಿ ನಗುತ್ತಲೇ ಉತ್ತರ ಕೊಟ್ಟಳು. 'ನಿಜ ಹೇಳಲಾ?'

'ಹೇಳಲ್ಲ. ಅದಕ್ಕೇನು?'

ನಾಚಿ ನಗುತ್ತ ರಾಜರಾಣಿ ಹೇಳತೊಡಗಿದಳು. 'ನೋಡಿರಲಿಲ್ಲ ಅಲ್ಪ ಸ್ವಲ್ಪ ನೋಡಿದ್ದೆನೆಂದರೂ ಸರಿಯೇ ಲಗ್ನದ ದಿನ ವರ ಬಾಗಿಲಿಗೆ ಬಂದಾಗ ನೀವೆಲ್ಲ ನೋಡಲು ಹೊರಗೆ ಹೋದಿರಿ ನಾನು ನಮ್ಮ ಕೊಟ್ಟಡಿಯ ಸನಿಯದಲ್ಲಿ ಕುಳಿತಿದ್ದೆ. ಹೊರಗೆ ನೋಡಿದರ ಯಾರೂ ಕಾಣಲಿಲ್ಲ

ಎದೆಯು ಡಬ ಡಬ ಹಾರುತ್ತಿತ್ತು ಆದರೂ ಒಂದು ಸಾರ ನನಗೂ ನೋಡುವ ಅಪೇಕ್ಷೆಯುಂಟಾಗಿ, ಕಿಟಕಿಯಲ್ಲಿ ಇಣಿಕಿ ನೋಡತೊಡಗಿದೆ ಆದರೆ ಗದ್ದಲದಲ್ಲಿ ಸರಿಯಾಗಿ ಯಾವುದೂ ಕಾಣಲಿಲ್ಲಿ ಇಷ್ಟರಲ್ಲ ಿಸಾರಗೋ ಕಾಲ ಸಪ್ಪುಳ ಕೇಳಬಂದಿತು ನಾನು ಬೇಗ ಬೇಗ ಓಡಿ ನಿನ್ನ ಕೊಟ್ಟಡಿಯಲ್ಲಿ ಕೂತುಬಿಟ್ಟೆ " ಎಂದವಳೇ ರಾಜರಾಣಿ ಮುಖಕ್ಕೆ ಸೆರಗು ಮರೆ ಮಾಡಿ ನಗತೊಡಗಿದಳು

ಗಟ್ಟಿಯಾಗಿ ನಗುತ್ತ ರಾಮುಕಲಿ ಅಂದಳು ''ಅಮ್ಮಮ್ಮಾ ಹಾಗೋ? ಸರಿ ನೀನು ಒಳ್ಳೇ ಹುಡುಗಿ ಹಾಗಾದರೆ?"

ಮಾಲತಿಯೂ ನಗುತ್ತಿದ್ದಳು

ರಾಜರಾಣಿ ಕೇಳಿದಳು "ಅದೇನೇ ಇರಲಿ ಅತ್ತಿಗೆ ನಿಜ ಹೇಳು ನೋಡಬೇಕೆಂದು, ಒಂದು ಬಲವಾದ ಅಪೇಕ್ಷೆ ಇರುವುದಲ್ಲವೇ?'

'' ನಾನು ಹೇಗೆ ಹೇಳಲಮ್ಮಾ? ನಾನಂತೂ ಮೊದಲೇ ನೋಡಿ ಕೊಂಡವಳು "

ಇದೇ ಸಮಯದಲ್ಲಿ ಕೇಶವನು ಒಳಗೆ ಪ್ರವೇಶಿಸಿ ಮಾತಾಡಲಾರಂಭಿಸಿದನು 'ಏನು ಅತ್ತಿಗೆ, ಈ ಕಮಿಟಿ ಯಾತಕ್ಕೆ ಕೂಡಿದೆ? ನಡೆದ ಅಡಿಗೆ ಸಿದ್ಧತೆ ನೋಡಿ ಅಂದ 'ಓ, ಇವತ್ತು ಇದೆಲ್ಲ ಏನು? ಸಂತರ್ಪಣೆ ಇರುವ ಹಾಗಿದೆ' ರಾಜರಾಣಿಯನ್ನು ನೋಡಿ ಮಾತಾಡತೊಡಗಿದ 'ಏನಮ್ಮಾ ರಾಜಿ, ಅದೇನು ಕೈಯಲ್ಲಿ ಬಿಳಿಯ ಗುಂಡು ಕಾಣುವದಲ್ಲ? ಮಾಲತಿಯ ಕಡೆಗೆ ಮುಖ ಮಾಡಿ ನಗೆಯಾಡಿದ " ಮಾಲತೀ, ಅದೇನು ಮಲಾಮು ಸಿದ್ಧ ಮಾಡುತಲಿರುವೆಯಾ?'

ಒಮ್ಮೆಲೇ ಕೇಶವನ ಪ್ರವೇಶ. ಎಲ್ಲರಿಗೂ ಮಾಡಿದ ಒಂದೊಂದು ಪ್ರಶ್ನೆ, ಇದರಿಂದ ಎಲ್ಲರೂ ಮೌನವಾಗಿದ್ದರು.

ರಾಮುಕಲಿಯೇ ಮಾತಿಗಾರಂಭಿಸಿದಳು 'ಹುಂ, ಅದು ಕ್ಷುಧಾ–ದಾಹ ನಾಶಕ ಮಲಾಮು'

'ನೀವೆಲ್ಲ ಗಹಗಹಿಸಿ ನಗುತ್ತಿದ್ದಿರಲ್ಲ! ಅದೇತಕ್ಕೆ? ನಿಮ್ಮ ನಗೆಯ ಗದ್ದರಣೆಗೆ ನಾನು ಓದುವುದನ್ನು ಬಿಡಬೇಕಾಯಿತು. ಏನೋ ನಾಟಕದ ಅಭಿನಯವಾಗಿದೆ, ನೋಡುವಾ, ಎಂದು ಇಳಿದು ಬಂದೆ'

ತುಟಿ ಕಚ್ಚಿ ರಾಮಕಲಿ ನಗುತ್ತಿದ್ದಳು 'ನಾವೆಲ್ಲರೂ ಒಂದು ಮಾತಿನ ತರ್ಕ ಮಾಡುತ್ತಿದ್ದೆವು. ಕಡೆಗೆ ನಮಗೇನೂ ನಿರ್ಣಯವಾಗಲಿಲ್ಲ. ನೀವಷ್ಟು ಮಾಡಿಕೊಟ್ಟರೆ ಸರಿ."

ರಾಮಕಲಿ ಮುಂದೇನು ಹೇಳುವಳೋ, ಅದು ತಿಳಿಯದೇ, ರಾಜರಾಣಿ ಮತ್ತು ಮಾಲತಿಯರು ಸಕೌತುಕ ನೋಟದಿಂದ ಆಕೆಯನ್ನೇ ನೋಡತೊಡಗಿದರು.

ಕೇಶವನೆಂದ 'ಅದೇನು ಹೇಳಿ.'

ರಾಮಕಲಿ ನಗುತ್ತಿದ್ದಳು 'ಸ್ಪಷ್ಟವಾದಿಗಳೆಂದು ಬಹು ಗರ್ವ ನಿಮಗೆ. ಹೇಳಿರಿ ನೋಡುವಾ. ನಮ್ಮ ಮೂವರಲ್ಲಿ ಯಾರ ಮುಖ ಸುಂದರವಾಗಿದೆ?"

ವಿಚಿತ್ರವೆನಿಸುವ ಈ ರಾಮಕಲಿಯ ಮಾತಿಗೆ ಮಾಲತಿ ನಾಚಿ ಕೆಂಪೇರಿದಳು. ರಾಜರಾಣಿ ಮುಖಕ್ಕೆ ಸೆರಗೆಳೆದು ಒಳಗೇ ನಗಹತ್ತಿದಳು. ಮುಂಗಾಣದ ಕೇಶವ, ಮೂಢನಂತೆ ನೋಡಲಾರಂಭಿಸಿದನು.

ರಾಮಕಲಿ ನಗೆ ಮಾತಾಡಿದಳು "ಯಾಕೆ, ಸುಮ್ಮನಾದಿರಿ? ಹೇಳುವ ಶಕ್ತಿ ಇಲ್ಲವೇ? ನೀವು ಹೇಳುತ್ತೀರಿ ಮನಸಿನಲ್ಲಿರುವುದನ್ನು ನಿಃಸಂಕೋಚದಿಂದ ನುಡಿಯುವುದೇ ಉಚಿತವೆಂದು. ಈಗ ಹೇಳಬಹುದಲ್ಲ?"

ತಡೆತಡೆದು ಕೇಶವನೆಂದ "ಶಾಸ್ತ್ರಾಜ್ಞೆಯನ್ನು ನೀವು ಬಲ್ಲಿರಾ? ಸತ್ಯವನ್ನು ಹೇಳಬೇಕು. ಆದರೆ ಅಪ್ರಿಯ ಸತ್ಯವನ್ನು ಹೇಳಬಾರದು. ನಿಮ್ಮ ಪ್ರಶ್ನೆಗೆ ನಾನು ಉತ್ತರ ಕೊಟ್ಟರೆ ನಿಮ್ಮೊಳಗಿನ ಇಬ್ಬರಿಗೆ ಅಪ್ರಿಯ ಸತ್ಯವನ್ನು ಹೇಳಬೇಕಾಗುವುದು."

"ಪರವಿಲ್ಲ. ನಾವು ಕೇಳುವ ಸಾಹಸ ಮಾಡುತ್ತೇವೆ. ಆದರೆ ನಿಮ್ಮಲ್ಲಿ ಹೇಳುವಷ್ಟು ಸಾಹಸ ಮಾತ್ರ ಇಲ್ಲ."

ನಗುತ್ತ ಕೇಶವ ನುಡಿದ "ಹಾಗಾದರೆ ಯಾರೂ ಸಿಟ್ಟಾಗಬಾರದು ಮತ್ತೆ. ನನ್ನ ಕಣ್ಣಿಗೆ ಮಾಲತಿಯ ಮುಖ ಸುಂದರವಾಗಿದೆ."

ಕೇಶವನ ಮಾತಿನಿಂದ ರಾಮಕಲಿ ಗಟ್ಟಿಯಾಗಿ ನಗತೊಡಗಿದಳು. ರಾಜರಾಣಿಗೂ ನಗೆ ಏಕೋ ತಡೆಯಲಿಲ್ಲ. ಮೋರೆ ಮುಚ್ಚಿ ನಗುತ್ತಿದ್ದಳಾಕೆ. ಆ ಕಳ್ಳ ನಗೆಯ ವೇಗಕ್ಕೆ ಆಕೆಯ ದೇಹವೆಲ್ಲ ನಡುಗಲಾರಂಭಿಸಿತ್ತು. ಮಾಲತಿ ಕೆಂಪೇರಿ—ಲಜ್ಜಾವನತಮುಖಿಯಾಗಿದ್ದಳು. ಇವಕ್ಕೂ

ಮೊದಲು ನಡೆದ ಮಾತುಗಳ ಸಂಬಂಧ ಕೂಡಿ, ಕೇಶವನ ಈ ಮಾತಿನಿಂದ ಮಾಲತಿಗೆ ಅಷ್ಟು ಲಜ್ಜಾ-ಸಂಕೋಚಗಳುಂಟಾದವು

ಈ ಮೂವರ ಭಾವವನ್ನೂ ನೋಡುತ್ತಿರುವ ಕೇಶವ ಆಶ್ಚರ್ಯಚಕಿತನಾಗಿ ನಗುತ್ತ ತುಸು ವೇಳೆ ನಿಂತನು "ಇಂದೇಕೋ ನಿಮ್ಮ ನಗೆ ನೋಡಿದರೆ ನಿಮಗೆ ಭೂತಬಾಧೆಯಾಗಿಲ್ಲವಷ್ಟೇ ?" ಎಂದು ನುಡಿದು ಸಾವಕಾಶ ಹೊರಟುಹೋದನು ಮಾಲತಿಯ ಅವಸ್ಥೆಯನ್ನು ಅವನು ತಿಳಿದುಕೊಂಡುಬಿಟ್ಟನು ನನ್ನ ಉತ್ತರದಿಂದ ರಾಮುಕಲಿ ತನ್ನ ಒಲೆಯಲ್ಲಿ ನನ್ನನ್ನು ಹಿಡಿದುಹಾಕಿದಳು ಅಲ್ಲದೇ ಮಾಲತಿಯನ್ನು ಲಜ್ಜಿತಗೊಳಿಸಿದಳು

(೪)

ಊಟವಾದ ಮೇಲೆ ರಾಮಚಂದ್ರ ಮತ್ತು ಕೇಶವರು ಕೋಟಡಿಯಲ್ಲಿ ಏನೋ ತರ್ಕ-ವಿತರ್ಕ ಮಾಡುತ್ತಾ ಕುಳಿತಿದ್ದಾರೆ ರಾಮಚಂದ್ರ ಹೇಳುತ್ತಿದ್ದನು ಸನ್ಯಾಸ ತೆಗೆದುಕೊಳ್ಳದೇ ಜಗತ್ತು ಮತ್ತು ಮಾನವಜಾತಿಯ ಉಪಕಾರ ಮಾಡಲು ಸಾಧ್ಯವಿಲ್ಲವೆಂಬ ಮಾತನ್ನು ನಾನಂತೂ ಒಪ್ಪಲಾರೆ ಸನ್ಯಾಸಿಯಾದವನು ಅವನೊಂದು ಜಗತ್ತಿಗೆ ಭಾರ ಆತ್ಮಹತ್ಯೆ ಮಾಡಿಕೊಂಡರೆ ಜಗತ್ತು ಒಂದು ಜೀವಿಯನ್ನು ಕಳೆದುಕೊಂಡಂತಾಗುವುದು ಕಾರಣ ಅದು ಉಚಿತವಲ್ಲ ಅದರಂತೆ ಸನ್ಯಾಸಿಯಾದರೂ ಸಮಾಜದ ಒಂದು ಘಟಕ ಕಳಚಿದಂತಾಗುವುದು ಹೀಗೆ ಅವೆರಡೂ ಸಮಾನವಾಗಿವೆ

ಕೇಶವನೆಂದ 'ಸನ್ಯಾಸಿಯಾಗದೇ ಯಾವ ಉಪಕಾರವನ್ನೂ ಮಾಡಬರುವದಿಲ್ಲವೆಂದು ನಾನು ಹೇಳುತ್ತಿಲ್ಲ ಆದರೆ ಈ ಮಾತನ್ನು ನೀನಾದರೂ ಒಪ್ಪಲೇ ಬೇಕಾಗುವದು ಏನೆಂದರೆ ಸನ್ಯಾಸಿಯಾದರೂ ಜಗತ್ತಿಗೆ ಉಪಕಾರ ಮಾಡಲು ಸಾಧ್ಯವಿದೆ ಹೀಗಿರುವುದರಿಂದ ಆತ್ಮಹತ್ಯೆ ಮತ್ತು ಸನ್ಯಾಸ ಇವೆರಡು ಸಮಾನವಾದುವುಗಳಲ್ಲ

ರಾಮಚಂದ್ರ ನುಡಿದನು "ನೀನು ಹೇಗಾದರೂ ಹೇಳು ಕೇಶವಾ, ನಾನು ಇಷ್ಟು ಮಾತ್ರ ಹೇಳತಕ್ಕವನೇ. ಸನ್ಯಾಸ ತೆಗೆದುಕೊಳ್ಳುವದೆಂದರೆ ಅದೊಂದು ದೊಡ್ಡ ಸ್ವಾರ್ಥ ಹೊಣೆಗಾರಿಕೆ ತಪ್ಪಿಸಿಕೊಂಡು ಓಡಿಹೋಗುವದು, ಕಾರಣ ಹೇಡಿತನ. ವೈರಾಗ್ಯವೆಂದರೆ ಕೆಲವರು ಅಭಯವೆಂದು ಹೇಳುತ್ತಾರೆ ನಾನುಮಾತ್ರ ಅದೊಂದು ಹೇಡಿತನ

ವೆನ್ನುತ್ತೇನೆ ನಾನಂತೂ ಆಸಕ್ತಿಗ ಆನಂದವೆನ್ನುವವ ಕಾಪುರುಷರು ಅಭಯವನ್ನು ಅಪೇಕ್ಷಿಸುವರು. ಆದರ ಪುರುಷರು ಆನಂದವನ್ನು ಮಾತ್ರ '

ಕೇಶವ ಹೇಳಿದ "ನಮ್ಮ ಸನ್ಯಾಸದ ಮೂಲ ಮಂತ್ರವಂದರ ಆಸಕ್ತಿ—ಸ್ವಾತ್ಮರತಿ ಆನಂದ, ವೈರಾಗ್ಯವಲ್ಲ ಜಗತ್ತಿನ ದುಃಖ–ದೈನ್ಯ ಹಾಗು ಕಷ್ಟಗಳನ್ನು ನೋಡಿ, ಯಾರು ದರಿ–ಕಂದರಗಳಲ್ಲಿ ತಪಸ್ಸಿಗೆಂದು ಅಡಗುವರೋ, ಅವರಿಗೆ ನೀನು ಬೇಕಾದುದಂಸರೂ ಸರಿ, ಆದರ ನಮ್ಮ ಸನ್ಯಾಸಿಗಳು ಇಂಥವರಲ್ಲ ಅವರು ತಮ್ಮ ಆಧ್ಯಾತ್ಮಿಕ ಮಂಗಲಕ್ಕಾಗಿ ಹೇಗ ನಿರ್ಲಿಪ್ತ ನಿಸ್ಪೃಹ, ಪೃಥಕರಾಗಿರುವರೋ, ಹಾಗೆ ಜಗತ್ತಿನ ಒಂದು ಕ್ಷುದ್ರವೆನಿಸುವ ಪ್ರಾಣಿಯ ಮಂಗಲಕಾಮನೆಯಲ್ಲಿಯೂ ತತ್ಪರರಾಗಿರುತ್ತಾರ ಅವರು ಸಂಯಮರು ಆದರೆ ವಿಮುಖರಲ್ಲ "

ಕೇಶವನ ಮಾತಿಗ ರಾಮಚಂದ್ರ ಹಾಸ್ಯ ಮಾಡಿದನು "ವಿಮುಖರಲ್ಲವೆಂದು ಹೇಗೆ ಹೇಳುವಿ ? ಮನುಷ್ಯ ಜಾತಿಯ ಅರ್ಧಾಂಶವನ್ನು ಅವರು ತಿರಸ್ಕರಿಸುವರು, ಹೆದರುವರು, ನಾರಿ ಮತ್ತು ಅರಿ ಇವರನ್ನು ಸಮನೆಂದು ಭಾವಿಸುವರು ಇಂಥವರು ವಿಮುಖರಲ್ಲದೇ ಮತ್ತೇನು ?"

ಮದ್ದಿನ ರಾಶಿಯ ಮೇಲೆ ಒಂದು ಕಿಡಿ ಬಿದ್ದರೂ ಕೂಡ ಹೇಗೆ ಭುಗಿಲೆಂದು ಉರಿ ಏಳುವದೋ, ಹಾಗೆ ರಾಮಚಂದ್ರನ ಮಾತು ಕೇಳಿ, ಕೇಶವನು ಉತ್ತೇಜಿತನಾದನು ಅವನು ಗಟ್ಟಿಸಿ ಹೇಳತೊಡಗಿದನು "ಸುಳ್ಳು ಮಾತು ನಾರಿ ಎಂದರ ಅವರು ಹೆದರುವದೂ ಇಲ್ಲ, ತಿರಸ್ಕರಿಸುವದೂ ಇಲ್ಲ, ಮತ್ತು ಅರಿಗಳೆಂದೂ ಭಾವಿಸುವದಿಲ್ಲ ಯಾವ ನಾರಿಯಲ್ಲಿ ತಾಯಿ, ತಂಗಿ, ಮಗಳು ಮುಂತಾದವರ ದರ್ಶನವಾಗುವದೋ, ಆ ನಾರೀ ಜಾತಿಯ ವಿಷಯದಲ್ಲಿ ಬೇರೆಯವರಿಗಿಂತ ನನಗೆ ಹೆಚ್ಚು ಶ್ರದ್ಧೆಯೂ, ಆದರವೂ ಉಂಟು

ಮೊದಲಿನಂತೆಯೇ ನಗುತ್ತ ರಾಮಚಂದ್ರನಂದ "ಅದೇನೋ ಸರಿಯೇ ಆದರೆ ಪತ್ನೀ ರೂಪದಿಂದ ನೋಡಲು ಭಯವೇಕೆ? ಪತ್ನೀ ಮೂರ್ತಿಯನ್ನು ನೋಡದ ವಿನಾ, ಕನ್ಯಾ ದರ್ಶನ ಹೇಗಾಗುವುದು ? ತಾಯಿಯ ರೂಪದಿಂದ ರಕ್ಷಿಸುವಾಕೆ—ಪತ್ನೀ ರೂಪದಿಂದ— ಆ ನಾರಿ ಉಪೇಕ್ಷಣೀಯಳೋ

ಕೇಶವ ಹೇಳಿದ. "ಎಂದಿಗೂ ಅಲ್ಲ ಸನ್ಯಾಸಿಯ ಮಾರ್ಗದಲ್ಲಿ ಮಾತ್ರ ಆಕೆ ಬಹು ಬಾಧಕಳಾಗಿದ್ದಾಳೆ"

ಈ ವಾದವಿವಾದ ನಡೆದಿರುವಾಗಲೇ ರಾಮಕಲಿ ಅಲ್ಲಿ ಪ್ರವೇಶಿಸಿದಳು ಕೇಶವನು, ಅತ್ತಿಗೆಯನ್ನು ನೋಡಿ ಮೊದಲಿನಂತೆಯೇ ಉತ್ತೇಜಿತನಾಗಿ ಅಂದ "ಯಾವ ಜಾತಿಯಲ್ಲಿ, ಅತ್ತಿಗೆಯಂಥ ಒಬ್ಬಾಕೆಯಾದರೂ ಹುಟ್ಟುತ್ತಿರುವಳೋ— ಆ ಸ್ತ್ರೀ ಜಾತಿಯನ್ನು ತಿರಸ್ಕರಿಸುವಂಥ ಘೋರ ಪಾಪಿ ನಾನಾಗಲಾರೆ"

ಸಹಸಾ ಮೈದುನನ ಬಾಯಿಂದ, ಇಂಥ ಭಕ್ತಿ–ಸ್ನೇಹಪೂರಿತ ಮಾತುಗಳನ್ನು ಕೇಳಿ ರಾಮಕಲಿ ಚಕಿತಳಾದಳು ತುಸು ಲಜ್ಜಿತಳಾಗಿ ಕೇಳಿದಳು "ಏನದು? ಕಡೆಗೆ–ನನ್ನಿಂದೇನು ಅಪರಾಧವಾದುದು?"

ಕೇಶವನು ಉತ್ತೇಜಿತನಾಗಿ ಹಾಗೆ ನುಡಿದುಬಿಟ್ಟಿದ್ದ. ಈಗ ಅವನಿಗೂ ಹೇಗೋ ಅನಿಸಿತ್ತು ವಿಷಯವನ್ನು ನಗೆ ಮಾಡಿ ಹಾರಿಸುವ ಉದ್ದೇಶದಿಂದಾಡಿದನು "ಅಪರಾಧವೇ? ಅವು ಅನೇಕವಾಗಿವೆ ಮೊದಲಿನ ಅಪರಾಧವೆಂದರೆ— ನೀನು ಉಪ್ಪಿನಕಾಯಿ ಚನ್ನಾಗಿ ಹಾಕುವೆ ಎರಡನೆಯದು, ಹಸಿವಾಗದಿದ್ದರೂ — ಊಟಕ್ಕೆ ಏಳುವಂತೆ ಮಾಡುವ ಮೂರನೆಯದು, ತಿನಿಸಿ–ಉಣಿಸಿ ದೇಹವನ್ನು ಕೊಬ್ಬಿಸಿಬಿಡುವೆ ತಿರುಗಿ ಒಪ್ಪುವದಿಲ್ಲ ಕೂಡ ದೇಹ ಕೊಬ್ಬಿದೆ, ಎಂದರೆ"

ಇದೇ ಸಮಯಕ್ಕೆ ಅನಂತನು, ಮಾತಿನ ಗತಿ ಬದಲಿಸಿ ಹೋಗುವಂಥ ಯಾವುದೋ ಸುದ್ದಿ ತೆಗೆದುಕೊಂಡು ಪ್ರವೇಶಿಸಿಬಿಟ್ಟನು

ರಾಮಚರಣ ತಿವಾರಿಯವರು ಸೆಕ್ರೆಟರಿಯಟನಲ್ಲಿ ನೌಕರಿ ಮಾಡುತ್ತಿದ್ದರು ಮೂರು ತಿಂಗಳಾದವು ಕಾರ್ಯ ನಿಮಿತ್ತ ಪೆನ್ಶನ್ ಪಡೆದು ರಾಯ ಬರೇಲಿ ಜಿಲ್ಲೆಯ ತಿವಾರಿಪುರದ ತಮ್ಮ ಮನೆಯಲ್ಲಿ ವಾಸ ಮಾಡಿದ್ದಾರೆ. ಅವರು ಲಖನೌದಲ್ಲಿರುವಾಗ ಓರ್ವ ಕಾಯಸ್ಥ ಯುವಕನು, ಅವರುಗಳಿಗೆ ಓದಿಸುತ್ತಿದ್ದನಂತೆ ಹಿಂದಿನಿಂದ ಕಂಡುಬಂದುದೇನಂದರೆ– ಆ ಯುವಕ ಮತ್ತು ಯುವತಿ ಅಂಧ ಪ್ರೇಮದಿಂದ ಹುಚ್ಚಾಗಿ, ಗುರು ಶಿಷ್ಯ ಬಂಧನ ಕಿತ್ತೊಗೆದು ಬಂದು ಹೊಸ ಬಂಧನದ ಉಪಕ್ರಮದಲ್ಲಿದ್ದಾರೆ ಎಂದು ಗನೇನೋ ಒಳ್ಳೆಯವ ಕಲಿತವ ಸರಿ ಸಾಮಾಜಿಕ ರೂಢಿಯು ಯಜ್ಞ

ದಲ್ಲಿ, ಹುಡುಗಿಯ ಸುಖದ ಬಲಿಯನ್ನು ಕೊಡಲಾರೆ, ಎಂದೇನೋ ಹೇಳಿ ಪಂಡಿತ ರಾಮಚರಣರು, ಅದೇ ಕಾಯಸ್ಥ ಹುಡುಗನ ಕೂಡ ತಮ್ಮ ಮಗಳ ವಿವಾಹವನ್ನು ಹಿಂದೂ ಪದ್ಧತಿಗನುಸಾರ ಮಾಡಿಕೊಡಲು ಸಿದ್ಧರಾದರಂತೆ ಆದರೆ ಇದರಿಂದ ಊರ ಜನರು ಬಹಳ ದ್ವೇಷಗೊಂಡುಬಿಟ್ಟರು ರಾಮಚರಣರನ್ನು ಬಹಿಷ್ಕರಿಸಿಬಿಟ್ಟರು ಅಲ್ಲದೆ, ಭಯಗೊಳಿಸತೊಡಗಿದರು 'ಆ ಕಾಯಸ್ಥ ವರನಂತೂ ಒರಲಿ ಹೊಡೆದೋಡಿಸುತ್ತೇವೆ ಊರಲ್ಲಿ ಇಂಥ ಪಾಪ ಎಂದಿಗೂ ನಡೆಯಗೊಡಲಾರೆವು' ಎಂದರು ಇನ್ನು ಲಖನೌಕೆ ಬಂದು ಲಗ್ನ ಮಾಡಿಕೊಡುವ ವಿಚಾರವೂ ಸಾಧ್ಯವೆನಿಸುವಂತಿಲ್ಲ ಯಾಕೆಂದರೆ, ಆ ಊರಿನಿಂದ ಲಾಲಗಂಜ ನಿಲ್ದಾಣ ಹನ್ನೆರಡು ಮೈಲು ದಮಣಿ, ಎತ್ತಿನ ಗಾಡಿಗಳಷ್ಟೇ ಓಡಾಡುವವು ಆದರೆ ಆ ಊರ ಜಮೀನುದಾರ ಗಾಡಿಯವರನ್ನೆಲ್ಲ ಹದರಿಸಿಬಿಟ್ಟಿದ್ದಾನೆ ಯಾರಾದರೂ ರಾಮಚರಣರನ್ನು ನಿಲ್ದಾಣಕ್ಕೆ ಕಳಿಸಿದರೆ—ಊರುಬಿಡಿಸಿ ಹೊರಗೆ ಹಾಕುತ್ತೇನ ಎಂದು. ಮಗಳ ವಿವಾಹಕ್ಕಿಂತಲೂ ತಮ್ಮ ಔಷಧೋಪಚಾರಕ್ಕೆ ರಾಮಚರಣರು ಲಖನೌಕ್ಕೆ ಬರುವ ಅವಶ್ಯಕತೆ ಬಹಳವಾಗಿದ ಆದರೆ ಕೂಲಿಯವರು ಸಹ ಸಿಗುವಂತಿಲ್ಲ ರಾಮಚರಣರ ಭೆಟ್ಟಿಗೆ ಕೂಡ ಯಾರೂ ಹೋಗುವಂತಿಲ್ಲವೆಂದು ನಿರ್ಬಂಧವಾಗಿದೆ

ಉತ್ತೇಜಿತನಾಗಿ ಕೇಶವ ನುಡಿದ "ಪಂಡಿತ ರಾಮಚರಣರು ಪೋಲೀಸರಿಗೆ ಏಕೆ ಸೂಚನೆ ಕೊಟ್ಟಿಲ್ಲ ?"

ಅನಂತ ಹೇಳಿದ "ಅದನ್ನಾದರೂ ಮಾಡುವವರು ಯಾರು ? ಜೇನೆಯಿಂದ ಬಳಲಿ—ಇನ್ನೂ ನೌಕರಿ ಇದ್ದರೂ ಅವರು ಪೆನ್ಶನ್ ತೆಗೆದುಕೊಂಡರು ಸರಿ ಅವರ ಮಾತೆಲ್ಲ ಕೇಳುವಾಕೆ ಆ ಒಬ್ಬ ಮಗಳು ದಾಯಾದಿಗಳೇನು, ಸಿಕ್ಕರೆ ನುಂಗಲಿಕ್ಕ ಮಾತ್ರ ಸಿದ್ಧರಾಗಿದ್ದಾರೆ "

ರಾಮಚಂದ್ರ ಕೇಳಿದನು "ಪಂಡಿತ ರಾಮಚರಣರು ನಿಮ್ಮ ಸಮ್ಮಂಧಿಕರೋ ?"

ಅನಂತ ಹೇಳಿದನು "ಹಾಗೇನೂ ಇಲ್ಲ. ನಮ್ಮ ತಂದೆಗೆ ಮಾತ್ರ ಅಂತರಂಗ ಸ್ನೇಹಿತರು''

ಕೇಶವ ಹೇಳತೊಡಗಿದ. " ಇಷ್ಟೇ ಸಂಬಂಧ ಸಾಕಾಗಿದೆ.

ಇದೊಂದೇ ಆಪ್ತತ್ವದಿಂದ ನಾನು ಈ ಸತ್ಕಾರ್ಯದಲ್ಲಿ ಅವರಿಗೆ ಸಹಾಯ ಮಾಡುತ್ತೇನೆ,”

ತುಸು ತಡೆದು ಅನಂತ ನುಡಿದನು. “ಈ ಸಮ್ಮಂಧವಿರದಿದ್ದರೂ ಸಹಾಯ ಮಾಡಬಹುದಾಗಿತ್ತು ಬೇರೆ ಪ್ರಸಂಗವಾಗಿದ್ದರೆ ಈಗ ಇದರಲ್ಲಿ ಒಂದು ದೊಡ್ಡ ಸಾಮಾಜಿಕ ಸಮಸ್ಯೆ ಕೂಡಿಕೊಂಡಿದೆ ಏನೂ ವಿಚಾರಿಸದೆ ನಾವು ರಾಮಚರಣರಿಗೆ ಸಹಾಯ ಮಾಡಬೇಕೆನ್ನುವದು ಊರ ಜನರ ಮೂರ್ಖಾಳತನವನ್ನು ಲಕ್ಷಿಸಿ ಬೇರೊಂದು ಪ್ರಸಂಗವಾಗಿದ್ದರೆ ಊರ ಜನರ ಕಾರ್ಯ ಅನುಚಿತವೆಂದು ನಾನೂ ಹೇಳುತ್ತಿದ್ದೆ”

ಅನಂತನ ಮಾತು ಕೇಳಿ ಕೇಶವನು ಉತ್ತೇಜಿತನಾದನು ಅವನ ಬಲಿಷ್ಠ ದೇಹದ ಸಬಲ ಹಾಗೂ ಸದಯ ಹೃದಯವು, ಕ್ರೋಧ ಮತ್ತು ತಾರುಣ್ಯದಿಂದ ವೇಗವಾಗಿ ಸ್ಪಂದಿತವಾಯಿತು

ಅವನೆಂದ “ನನ್ನ ಅಭಿಪ್ರಾಯ ಬೇರೆ. ಊರ ಜನ ಯಾವ ಕಾರ್ಯದಲ್ಲಿ ವಿಘ್ನ ಒಡ್ಡಿರುವರೋ, ಆ ಕಾರ್ಯ ಅನುಚಿತವೆಂದರೂ, ಅವರ ಮೂರ್ಖಾಳತನ ಅಪ್ರಾಸಂಗಿಕವಾದುದು ಯಾಕೆಂದರೆ ಇತರ ಉಪಾಯಗಳೆಲ್ಲ ಮುಗಿದಾಗ ದಂಡೋಪಾಯ ಸರಿ.—ಆದರೆ ಇಲ್ಲಿ ಮಾತ್ರ ತಿರುಗು-ಮುರುಗು

ರಾಮಚಂದ್ರ ಕೇಳಿದ. “ಹಾಗಾದರೆ, ನೀನು ಬ್ರಾಹ್ಮಣ ಕುಮಾರಿಯೊಡನೆ ಕಾಯಸ್ಥನ ವಿವಾಹವನ್ನು ಒಪ್ಪಿಕೊಳ್ಳುವೆಯಾ?“

ಹುಬ್ಬು ಗಂಟಿಕ್ಕಿ ಕೇಶವ ಹೇಳಿದನು “ಒಪ್ಪುವದಿಲ್ಲ ಆದರೆ ವಿಶೇಷರೂಪದಿಂದ ಯೋಗ್ಯವೆಂದು ಹೇಳುತ್ತೇನೆ ಮನುಷ್ಯನು, ಮನುಷ್ಯರ ಮಧ್ಯದಲ್ಲಿ, ಅನುಚಿತವೂ, ಅಸ್ವಾಭಾವಿಕವೂ ಆದ ಯಾವ ರೂಢಿಯ ಗೋಡೆಯನ್ನು ಕಟ್ಟಿರುವನೋ, ಅದರ ಮೊದಲ ಇಟ್ಟಿಗೆಯನ್ನು ಸಡಲಿಸಿ ಬಿಸುಟಹತ್ತಿದ್ದಾರೆಂದು ಪಂಡಿತ ರಾಮಚರಣರನ್ನು ನಾನು ಆದರಿಸುತ್ತೇನೆ ಬ್ರಾಹ್ಮಣ ಕುಮಾರಿ—ಕಾಯಸ್ಥ ಯುವಕ ಇವರ ನಡುವೆ ಮನುಷ್ಯ ಮನುಷ್ಯರ ಕೂಡ ಇರಬಲ್ಲ ಸ್ವಾಭಾವಿಕ ಸಂಬಂಧ ಶಕ್ಯವಿಲ್ಲವೆಂದು ನೀವು ಭಾವಿಸುವಿರಾ? ಹಾಗೆ ಭಾವಿಸಿದಲ್ಲಿ ನಿಮ್ಮ ಭಾವನೆಗಳು ಅನಂತಕಾಲ ಬದಲಾಗದೆ ಉಳಿಯಬಹುದೆಂದೂ ನಿಮ್ಮ ಅಭಿಪ್ರಾಯವೇ?”

ಗಂಭೀರನಾಗಿ ಅನಂತ ಮಾತಾಡಿದನು. "ಅನಂತ ಕಾಲ ಹಾಗೇ ಇರುವದಿಲ್ಲವೆಂದರೂ, ಎಷ್ಟೋ ದಿನದ ಗೋಡೆ ಒಂದೇ ದಿನಕ್ಕೆ ನಷ್ಟವಾಗ ಲಾರದು ಬಹಳ ದಿನಗಳ ಅನುಭವದಿಂದ ಸಮಾಜ, ನಿರ್ಮಿಸಿದ ನಿಯಮ ವ್ಯವಸ್ಥೆಯ ಗೋಡೆ ಉರುಳಿಸಿಬಿಟ್ಟರೆ ಮನುಷ್ಯರಿಗ ಸುಖವಾಗುವದೆಂದು ನಿನ್ನ ವಿಚಾರವೋ? ಯಾವುದೇ ಕ್ರಾಂತಿ ಆಗಲಿ, ಈ ಗೋಡೆ ಬಿದ್ದರೆ ಕೂಡಲೇ ಮರುದಿನವೇ ಮಾನವ, ನಿಯಮ ವ್ಯವಸ್ಥೆಯ ಮತ್ತೊಂದು ಗೋಡೆ ಕಟ್ಟುತ್ತಾನೆ ಸಮಾಜದಲ್ಲಿ ಕೆಲವು ಅನುಶಾಸನ (ನಿರ್ಬಂಧ) ಗಳು ಸದೈವ ಇದ್ದೇ ತೀರುವವು ಕೆಲವು ಸಾರೆ ಅವು ಕಠೋರವೆಂದು ಭಾಸವಾಗುವವು. ಅಷ್ಟೆ ಚೂರಿಯಿಂದ ಯಾವಾಗದರೂಮ್ಮೆ ಕೈಕೊರೆ ಯುವದು ನಿಜ. ಆದರೆ ಅಷ್ಟರಿಂದಲೇ ಚೂರಿಯನ್ನೇ ಹಿಡಿಯಬಾರದೆಂದು ಹೇಳುವುದು ಸರಿಯಲ್ಲ"

ಇದು ವರೆಗೆ ರಾಮಕಲಿ ಸುಮ್ಮನಿದ್ದಳು. ಪತಿ ಮತ್ತು ಮೈದುನರ ವಾದ ಕೇಳಿ ಹೇಳಿದಳು "ಆದಿರಲಿ. ಕಾಯಸ್ಥ ಹುಡುಗನ ಕೂಡ, ಬ್ರಾಹ್ಮಣ ಹುಡುಗೆಯ ಲಗ್ನ ಆಗಲಿ ಹೋಗಲಿ. ಊರ ಜನರಿಂದ ಅವರಿಗೆ ಒದಗಬಹುದಾದ ಕಷ್ಟಗಳನ್ನು ದೂರ ಮಾಡಲೇಬೇಕಲ್ಲ!"

ಕೇಶವನೆಂದ. "ಅಷ್ಟೇ ಅಲ್ಲ ಅತ್ತಿಗೆ ಯಾವುದರಿಂದ ಆ ವಿವಾಹ ನಿರ್ವಿಘ್ನ ನೆರವೇರುವದೋ ಅದನ್ನೂ ಮಾಡಬೇಕು ಆ ಹುಡುಗಿಯ ತಂದೆ, ಎಲ್ಲ ವಿಚಾರಮಾಡಿ, ವಿವಾಹಮಾಡುವ ನಿಶ್ಚಯ ಮಾಡಿರಬಹುದು ಅವರು ತಮ್ಮ ದಾರಿ ನಡೆಯುತ್ತಿರುವಾಗ ಅವರನ್ನು ತಡೆದು ನಿಲ್ಲಿಸಲು ಈ ಜನ ಯಾರು?"

ನಗುತ್ತ ರಾಮಚಂದ್ರ ಹೇಳಿದ. "ತಡೆಯುವವರು ಇನ್ನಾರೂ ಅಲ್ಲ ಸಮಾಜದಜನ ಪ್ರತಿಬಂಧಿಸಿದ್ದಾರೆ ಎಲ್ಲಿಯ ವರೆಗೆ ನೀವು ಸಮಾಜದಲ್ಲಿರು ನಿರೋ, ಅಲ್ಲಿಯ ವರೆಗೆ-ಸಮಾಜ-ಶಾಸನವನ್ನು ಪಾಲಿಸಲೇಬೇಕು"

ಕೇಶವ ಹೇಳಿದನು "ಅಲ್ಲಿ ಅದೂ ಕೂಡ ಇಲ್ಲ ಅವರು ಪಂಡಿತ ರಾಮಚರಣರಿಗೆ ಸಮಾಜದ ಹೊರಗೆ, ಹೋಗಗೊಡಿಸರು ಅನೇಕ ತರದಿಂದ ಜನ ರಾಮಚರಣರ, ವ್ಯಕ್ತಿಸ್ವಾತಂತ್ರ್ಯ ಅಪಹರಣ ಮಾಡ ಬೇಕೆನ್ನುತ್ತಾರೆ."

ರಾಮಚಂದ್ರ ಅನಂತನ ಪಕ್ಷ ಸ್ವೀಕರಿಸಿ ನುಡಿದನು "ನೀನು ತಪ್ಪು ತಿಳಿವಿ ಕೇಶವಾ! ಪಂಡಿತ ರಾಮಚರಣರು ಸಮಾಜದ ಹೊರಗೆ ಹೋಗಿ ವಿವಾಹ ಮಾಡಲು ಇಷ್ಟಪಡುವದಿಲ್ಲ. ಹಿಂದೂ-ಧರ್ಮಾನುಸಾರವಾಗಿ ಮಾಡಬೇಕೆಂಬು ಅವರ ಅಪೇಕ್ಷೆ."

ರಾಮಚಂದ್ರನ ಮಾತಿಗೆ ಕೇಶವ ನಗಲಾರಂಭಿಸಿದ. ಈ ಮಾತು-ಕತೆ ಕೇಳಿ, ಅಷ್ಟರಲ್ಲಿ ಮಾಲತಿ ರಾಜರಾಣಿಯರೂ ಅಲ್ಲಿಗೆ ಬಂದಿದ್ದರು.

ಕೇಶವ ರಾಮಚಂದ್ರನಿಗೆ ಉತ್ತರಿಸಿದ "ನೀನು ಹೇಳುವದಾದರೂ ಏನು? ಹಿಂದೂ ಧರ್ಮಾನುಸಾರ ಲಗ್ನಮಾಡುವದೆಂದರೆ, ತಿವಾರೀ ಪುರದ ಆ ಪಾಖಂಡಿಗಳ-ಸಮಾಜದಲ್ಲಿದ್ದಂತೆಯೋ? ಹಿಂದೂ ಧರ್ಮ ಇಷ್ಟು — ಸಂಕೀರ್ಣವಿರುವುದೇ? ನೀನು ಬಲ್ಲೆಯಷ್ಟೆ? ವೈಷ್ಣವ ಸಮಾಜ ಹಿಂದೂ ಧರ್ಮದಲ್ಲಿ, ಆರ್ಯಸಮಾಜಗಳು-ನಾನಕ ಪಂಥಿಗಳು, ಇವರಷ್ಟೇ ಅಲ್ಲ, ಬ್ರಾಹ್ಮಸಮಾಜದವರು ಕೂಡ ಹಿಂದೂ ಧರ್ಮದಲ್ಲಿಯೇ ಬರುತ್ತಾರೆ"

ರಾಮಚಂದ್ರ ಏನೂ ಮಾತಾಡಲಿಲ್ಲ. ಕಾರಣವೆಂದರೆ-ಕೇಶವನ ಅಭಿಪ್ರಾಯಕ್ಕೆ ಅವನ ತೀವ್ರ ಮತಭೇದವೂ ಇದ್ದಿರಲಿಲ್ಲ ಅವನು ಸುಮ್ಮನಿರುವದನ್ನು ನೋಡಿ ಅನಂತ ಮಾತಾಡತೊಡಗಿದ "ಯಾವುದೇ ಸಮಾಜವಿರಲಿ-ಬೇಕಾದರೆ ಹಿಂದೂ ಸಮಾಜವಾಗಲಿ, ಅಥವಾ ಅನ್ಯಸಮಾಜವೇ ಆಗಲಿ, ಅದಕ್ಕೆ ಕೆಲವು ಆಚಾರ-ವಿಚಾರಗಳು ಇದ್ದೇ ತೀರುವವು. ಇಂಗ್ರಜಿಯವರು ಒಳ್ಳೇ ಸುಧಾರಕರೆಂದು ಹೇಳಿಕೊಳ್ಳುತ್ತಾರೆ ಆದರೆ ಅವರಲ್ಲಿ ಕಕ್ಕನ ಮಕ್ಕಳೊಡನೆ ವಿವಾಹ ನಡೆಯುತ್ತದೆ. ಆದರೆ ಭಾವಮೈದುನನ ಮಕ್ಕಳೊಡನೆ ಆಗುವಂತಿಲ್ಲ. ಇದರ ಕಾರಣ ಹೇಳಲಿಕ್ಕೆ ಅವರಿಗೇ ಬರುವದಿಲ್ಲ. ಆದರೂ ಇದೊಂದು ಪ್ರಚಲಿತ ರೀತಿಯಾಗಿದೆ."

ಕೇಶವನೆಂದ "ಹೇಳುವದೇನು? ಕಣ್ಮುಚ್ಚಿ ನಡೆಯುವದೇ ಹೆಚ್ಚುಗಾರಿಕೆ ಎಂದು ಹೇಳುವರು. ವಿಚಾರಿಸದೇ ಕಣ್ಮುಚ್ಚಿ ನಡೆದುಬಿಟ್ಟರೆ ಸಮಾಜವನ್ನು ಗೌರವಿಸಿದಂತಾಯಿತೇ? ನಡೆಯುವದೆಂದರೆ-ಹೀಗೆ, ವಿಚಾರಿಸಿಕೊಂಡು ಹೆಜ್ಜೆಹಾಕಬೇಕು."

ಅನಂತ ಹೇಳಿದ. "ನಡೆಯಬೇಕಾದರೆ ಪ್ರತಿಯೊಂದು ಹೆಜ್ಜೆ,

ತನ್ನ ಇಚ್ಛೆಗನುಸಾರ ಹಾಕುತ್ತ ಹೋದರೆ ಹಾದಿ ಬಿದ್ದೂ ಸಿದ್ಧವಾಗುವದಿಲ್ಲ. ಒಂದು ಪೀಳಿಗೆ ಹಾದಿ ಸಿದ್ಧಮಾಡುವದು. ಮತ್ತೊಂದು ಅದರ ಮೇಲೆ ನಡೆಯುವದು."

ಕೇಶವ ಮಾತಾಡಿದನು "ಆದರೆ ಈ ರೀತಿಯಿಂದ ಸಿದ್ಧವಾದ ಮಾರ್ಗ ಸರ್ವೋತ್ಕೃಷ್ಟವಾಗುವದೆಂದೇನೂ ಹೇಳಬರುವದಿಲ್ಲ ಮೂರು ಸಾವಿರ ವರ್ಷಗಳ ಹಿಂದೆ ಯಾವ ನಿಯಮ ರಚಿತವಾದುವೋ, ಅವು ಸದ್ಯದಲ್ಲಿಯೂ ಸಮಾಜಕ್ಕೆ ಉಪಯೋಗವಾದುವು, ಇದು ಬಹಳ ಸಂದೇಹಾಸ್ಪದ"

ಅನಂತನಾಡಿದ. "ಒಂದೇ ಸವನೆ ಮೂರು ಸಾವಿರ ವರ್ಷ ಯಾವ ನಿಯಮ ನಡೆದುಬಂದವೋ, ಅವು ಈಗ ಒಮ್ಮೆಲೇ ನಿರುಪಯುಕ್ತವಾಗುವವೆಂದರೆ ಶಕ್ಯವೋ?"

ಕೇಶವ ನಗುತ್ತ ಅಂದ "ಅಣ್ಣಾ, ಇಲ್ಲಿ ತುಸು ವಿಚಾರಮಾಡುವ ಪ್ರಸಂಗವಿದೆ ವಿಚಾರವಿಲ್ಲದೇ ಗತಾನುಗತಿಕರಾಗುವುದು ಉಚಿತವಲ್ಲ. ಆದರೆ ಈಗ ತರ್ಕವಿತರ್ಕ ಮಾಡಲು ಸಮಯವಿಲ್ಲ ಮೊದಲ ಕಾರ್ಯವೆಂದರೆ— ತಿವಾರಿಪುರದ ಜನಗಳ ಕೈಯಿಂದ ಪಂಡಿತ ರಾಮಚರಣರನ್ನು ರಕ್ಷಿಸುವದು. ನಾನು ನಾಳೆಯೇ ತಿವಾರಿಪುರಕ್ಕೆ ಹೋಗುತ್ತೇನೆ"

ಕೇಶವನ ಮಾತು ಕೇಳಿ ರಾಮುಕಲಿ ವಿಷಣ್ಣಳಾದಳು. ಆಕೆ ಪ್ರಬಲ ಮತ್ತು ಚತುರನಾದ ಮೈದುನನನ್ನು ಚನ್ನಾಗಿ ಅರಿತಿದ್ದಳು ಇಷ್ಟು ಸಹ ಆಕೆ ತಿಳಿದ ಮಾತಾಗಿತ್ತು ಒಂದು ವೇಳೆ ದೈಹಿಕ ಶಕ್ತಿ ಸಾಲದಿರಲಿ, ಆಗ ಕೇಶವನು ತನ್ನ ಮಾನಸಿಕ ಬಲದಿಂದ ಅಸಾಧ್ಯವನ್ನು ಕೂಡ ಸಾಧ್ಯ ಮಾಡಿಕೊಳ್ಳಲು ಹೆಣಗುವನು, ಊರಿಗೆ ವಿರುದ್ಧ ಒಬ್ಬನೇ ಕುಸ್ತಿಗೆ ನಿಲ್ಲುವನು, ಮತ್ತು ಸಂಕಟವನ್ನು ಮೈಮೇಲೆ ಹಾಕಿಕೊಳ್ಳುವನು ಇವೆಲ್ಲ ಭಯದಿಂದ ರಾಮುಕಲಿ ಅವನನ್ನು ತಿರುಗಿಸಬೇಕೆಂದು ತಿಳಿಸಿ ಹೇಳತೊಡಗಿದಳು. ಕಡೆಗಿಷ್ಟು ನಿರ್ಣಯವಾಯಿತು. ಕೇಶವನೊಡನೆ ಕೃಷ್ಣಚಂದ್ರನೂ ಹೋಗಬೇಕು

ಚಿಂತಿತಳಾದ ರಾಮುಕಲಿಗೆ ಕೇಶವ ಹೇಳಿದನು "ನೀನು ಚಿಂತಿತಳಾಗಿರುವದನ್ನು ನೋಡಿ ನನಗೆನಿಸುವದನ್ನು ಅತ್ತಿಗೆ, ನಾನು ಯುದ್ಧ ಮಾಡ

ಲಿಕ್ಕೆ ಹೊರಟಿರುವೆನೋ ? ಏನೋ ? ತಿವಾರಿಪುರದ ಆ ಹೇಡಿಗಳನ್ನು—ಭೀಮರೆಂದು ತಿಳಿಯಬೇಡ ಗೊಂದಲ ಹಾಕಬಂದವರನ್ನು ಉಫ್ಫೆಂದು ಊದಿಹಾರಿಸಿಬಿಡುತ್ತೇನೆ."

ಅನಂತನ ಮನಸ್ಸಿಗೆ ಆ ವಿವಾಹವೇನೂ ಒಂದಿರಲಿಲ್ಲ ಆದರೆ ಪಂಡಿತ ರಾಮಚರಣನನ್ನು ಕಷ್ಟದಿಂದ ಪಾರಮಾಡಲು, ಅವನಿಗೂ ಸಹಾನುಭೂತಿಯುಂಟಾಗಿತ್ತು ಹಜರತಗಂಜ ಓಣಿಯಲ್ಲಿ ಅನಂತನದೊಂದು ಮನೆಯೂ ಇತ್ತು ಈಗ ಬಾಡಿಗೆದಾರರು ಯಾರೂ ಇರಲಿಲ್ಲ ಪಂಡಿತ ರಾಮಚರಣಗೆ ಆ ಮನೆ ಇರಲು ಕೊಡುವದೆಂದು ನಿಶ್ಚಯವಾಯಿತು

ಕೇಶವನು ಕೃಷ್ಣಚಂದ್ರನ ಬಳಿಗೆ ನೀನು ಸಿದ್ಧವಾಗಿರು, ಎಂದು ಹೇಳಲು ಹೋದನು ಎಲ್ಲಾ ಸರಿಮಾಡಿ ಅವನು ತಿರುಗಿ ಮನೆಗೆ ಬಂದಾಗ ಹನ್ನೊಂದು ಬಾರಿಸಿತ್ತು

(೫)

ಮರುದಿನ ಸುಮಾರು ಹನ್ನೊಂದು ಗಂಟೆಯಾಗಿರಬಹುದು ಕೇಶವ ಕೃಷ್ಣರು ಲಾಲಗಂಜ ನಿಲ್ದಾಣಕ್ಕೆ ತಲುಪಿದರು. ಆಗ ಕೇಶವ ಪೂರಾ ಸಾಹೇಬನಾಗಿದ್ದ ಕೃಷ್ಣಚಂದ್ರನು ಒಬ್ಬ ಕಾಬೂಲಿಯಾಗಿದ್ದ ಕೃಷ್ಣಚಂದ್ರನ ಕೆಂಬಣ್ಣ ನೀಳವಾದ—ಬಲಿಷ್ಟ ಹಾಗೂ ಸುಘಟಿತ ಶರೀರ ನೋಡಲಿಕ್ಕೆ ಗಂಭೀರವಾಗಿ ಕಾಣುತಿದ್ದವು ಅಲ್ಲದೇ ಕೇಶವನ ಸಂಗಡ ಕೈಯ್ಯಲ್ಲೊಂದು ಬಡಿಗೆ ತಲೆಗೊಂದು ಪೇಟಾ ಸುತ್ತಿದ ಸೇವಕನೊಬ್ಬ.

ನಿಲ್ದಾಣದಿಂದ ಹೊರಬಿದ್ದು, ಹೋಗಿಬರುವದಕ್ಕೆ ಬಾಡಿಗೆಯ ಎರಡು ಡಮಣಿಗಾಡಿಗಳನ್ನು ಗೊತ್ತುಮಾಡಿದರು ಒಂದರಲ್ಲಿ ಕೃಷ್ಣಚಂದ್ರ-ಕೇಶವರು ಮತ್ತೊಂದರಲ್ಲಿ ಕೇಶವನ ಸೇವಕಕಲ್ಲೂ ಗಾಡಿ ಸಾಗಿದವು. ಕೇಶವ ಕೇಳಿದನು.

"ಠಾಣೆಗೆ ಹೋಗಿ ಪೋಲೀಸರನ್ನು ಕರೆತರಬೇಕಾದೀತೇ ?"

ಮೀಸೆ ಹುರಿ ಮಾಡುತ್ತಿರುವ ಕೃಷ್ಣಚಂದ್ರ ಹೇಳಿದ "ಏನು ಹೇಳಿದೆ? ನಾಯಿ ಹೊಡೆಯಲಿಕ್ಕೆ ಬಣ್ಣದ ಕೋಲು ಬೇಕಾಗುವದೇ ? ಠಾಣೆಗೆ ಹೋದರೆ ಇನ್ಸಪೇಕ್ಟರು ನಕ್ಕುಬಿಟ್ಟರು ಊರ ಜನ ಏನು ಮಾಡಿಯಾರು. ಏನಿಲ್ಲ ಇದನ್ನು ಹೇಳಲಾಗುವದಿಲ್ಲ. ಊರೊಳಗಿನ ಯಾರೊಬ್ಬರ ಹೆಸರು

ಸಹ ನಮಗೆ ಗೊತ್ತಿಲ್ಲ ಠಾಣೆಗೆ ಹೋಗಿ ಪೋಲೀಸರನ್ನು ಕರೆಯುತ್ತಾನಂತೆ ”

ಈ ಮಾತು ಕೇಳಿ ನಗುತ್ತ ಕೇಶವ ನುಡಿದನು “ಹೋಗಲಿ ಬಿಡು ” ಗಾಡಿ ಸಾಗುತ್ತಿದ್ದವು ಕೃಷ್ಣಚಂದ್ರನೆಂದ. “ಉಪಕಾರ ಮಾಡಲೇನೋ ಹೊರಟಿದ್ದೇವೆ. ಅಲ್ಲಿ ಹೋಗಿ ನೋಡುತ್ತಿರಲು, ನಮ್ಮ ಉಪಕಾರದ ಆವಶ್ಯಕತೆ ಇಲ್ಲದಿದ್ದರೆ?”

ಕೇಶವ ನುಡಿದ “ಮತ್ತೇನು? ನಮ್ಮ ಕೆಲಸ ಮುಗಿದು ಹೋಯಿತು ಇದು ಸರಳ ಮಾತು ಆದರೆ ಊರಿಗೆ ಹೋದ ಮೇಲೆ ತಿಳಿಯು ಬಹುದು ಆ ಜನರ ಕೈಯಿಂದ ಪಂಡಿತ ರಾಮಚರಣ ಮತ್ತು ಅವರ ಮಗಳನ್ನು ಬಿಡಿಸುವದೆಂದರ ಅದೇನು ಪಾಯಸ ಸುರಿದಂತಲ್ಲ?”

ಕೃಷ್ಣಚಂದ್ರ ನಗುತ್ತಿದ್ದನು “ಸರಿ ಅಲ್ಲಿಗೆ ಹೋದನಂತರ ನಮ್ಮ ಶೌರ್ಯಾರಂಭ ಈಗ ಯಾವುದೂ ಬೇಡ ಕ್ಷೇತ್ರೇ ಕರ್ಮ ವಿಧೀಯತೆ ಅಲ್ಲಿ ಮುಟ್ಟಿದಾಗಲೇ ಏನು ಮಾಡಬೇಕೆಂಬುದು ತಿಳಿಯುವದು, ಎಂದವನೇ ಗಾಡಿಯ ಕಟ್ಟಿಗೆ ಬಾರಿಸುತ್ತ ಹಾಡತೊಡಗಿದನು

ಗಾಡಿಯ ಹೊಯ್ದಾಟದಲ್ಲಿ ಹಾಡು ಚನ್ನಾಗಿ ಮೇಳವಾಗದ ಮೂಲಕ ಕೇಶವ ಎಡ-ಬಲ ದೃಶ್ಯ ನೋಡಲಾರಂಭಿಸಿದನು. ಆಗ ಮಾಘಮಾಸ. ಗೋದಿಯ ಹೊಲಗಳು, ಎಲ್ಲಾ ತೆನೆಹಾಕಿಹೋಗಿವೆ ಕಲವು ಕಡೆಗೆ ಹೊಲಕ್ಕೆ ನೀರುಣಿಸುತ್ತಿದ್ದಾರೆ ಮತ್ತೊಂದು ಸ್ಥಳದಲ್ಲಿ ನೀರಿನ ಕಾಲುವೆ ಸರಿಪಡಿಸುತ್ತಿದ್ದಾರ ಒಂದೆಡೆಗೆ ಹಿಂಡುಹಿಂಡಾಗಿ ದನ ಮೇಯ ತೊಡಗಿವೆ ಅಲ್ಲಿ ಕೆಲ ದನಗಾಯಿ ಹುಡುಗರು ಎಮ್ಮೆಗಳ ಮೇಲೆ ಕುಳಿತು ಸ್ವಚ್ಛಂದವಾಗಿ ಜಾನಪದ ಗೀತಗಳನ್ನು ಹಾಡತೊಡಗಿದ್ದಾರೆ. ಈಚೆಗೆ ಕಲವು ಅಳಿಲುಗಳು ಆಟವಾಡುತ್ತಿವೆ ಲಖನೌದ ಕೃತ್ರಿಮತೆಗಿಂತ ಇಲ್ಲಿಯ ಸಹಜ-ಶಾಂತ, ಸುಂದರ ದೃಶ್ಯಗಳಲ್ಲಿ ಕೇಶವನಿಗೆ ಹೊಸ ಆಕರ್ಷಣವೆನಿಸಿತು.

ಒಮ್ಮೆಲೆ ಹಾಡು ತಾಲಗಳನ್ನು ನಿಲ್ಲಿಸಿ ಕೃಷ್ಣಚಂದ್ರನು ಮಾತಾಡಿದನು. “ಕೇಶವ, ಏನು ಕಾರಣ ಈ ದಿನ ನನಗೆ ಬಹಳ ಸೊಗಸೆನಿಸ ತೊಡಗಿದೆ? ನಾವು Adventure, ಮಾಡಲು ನಡೆದಿರುವೆವೇನೋ?

ಕೇಶವನೆಂದ. "ಅದರಲ್ಲೇನಾಶ್ಚರ್ಯ? ಬೆಳಗಿನಲ್ಲಿ ಚಹ ಕುಡಿದು ಬಾಲಿಕಾ-ಉದ್ಧಾರಕ್ಕೆ ನಾವೆಂದು ಹೋಗಿದ್ದೆವು?"

ನಗುತ್ತ ಕೃಷ್ಣಚಂದ್ರ ನುಡಿದ "ನಿಜವಾಗಿ ಈ ಕಾರ್ಯ ಎಷ್ಟು ರೋಮ್ಯಾಂಟಿಕ್ ಇದೆ ಏನು ಮಾಡುವದು, ನಿನ್ನ ಸಲುವಾಗಿ ಉಪಕಾರ ಮಾಡಲೆಂದು ಹೋಗಬೇಕಾಗಿದೆ. ಏನೋ, ಇದೊಂದು ನೀರಸ ಪರೋಪಕಾರ, ಅಷ್ಟೇ.

ಕೇಶವನೂ ನಗುತ್ತ ಉತ್ತರಿಸಿದನು "ನಿನ್ನ ಸಲುವಾಗಿ ಹೋಗುವದಾಗಿದ್ದರೆ, ಇನ್ನಷ್ಟು ರೋಮ್ಯಾಂಟಿಕ್, ಆಗುತ್ತಿತ್ತು."

ಇದಾದಮೇಲೆ ಹಾಗೇ ಮಾತಿನಲ್ಲಿ ಗಾಂಧಿಯ ಅಹಿಂಸೆಯಿಂದಾರಂಭವಾಗಿ, ಬುದ್ಧ, ಟಾಲಸ್ಟಾಯ, ಮಾರ್ಕ್ಸ, ಮತ್ತು ಲೆನಿನರ ಸಿದ್ಧಾಂತಗಳ ವಿಷಯಕ್ಕೆ ತರ್ಕ ಸಾಗುತ್ತಿರುವಾಗಲೇ ಗಾಡಿಗಳು ತಿವಾರಿಪುರವನ್ನು ಮುಟ್ಟಿದವು.

ಗಾಡಿಯುವನೆಂದ. "ಕಿಧರ ಜಾನಾ ಹೋಗಾ? ಹುಜೂರ '

ಊರ ಕಡೆಗೆ ದಿಟ್ಟಿಸಿ ಕೇಶವ ನುಡಿದ "ಯಹೀ ತಿವಾರಿಪುರ ಹೈ ಕ್ಯಾ?"

"ಜೀ ಹಾಂ"

ತುಸು ದೂರ ಯಾರೋ ಒಬ್ಬರು ನಿಂತುಕೊಂಡು, ಲಕ್ಷ್ಯಪೂರ್ವಕವಾಗಿ ಈ ಗಾಡಿ ಮತ್ತು ಗಾಡಿಯಲ್ಲಿ ಕುಳಿತವರನ್ನು ನೋಡುತ್ತಿದ್ದರು ಅವರನ್ನು ಕೇಶವ ಕೇಳಿದನು "ಪಂಡಿತ ರಾಮುಚರಣ ತಿವಾರಿಯವರ ಮನೆ ಎಲ್ಲಿ?"

ಕೈ ಮಾಡಿ ತೋರಿಸಿ ಅವನೆಂದ "ನೆಟ್ಟಗೆ ಹೋಗಿ ಬಲಕ್ಕೆ ಹೊರಳಬೇಕು" ತರುವಾಯ .

ಇದೇ ಸಮಯದಲ್ಲಿ ಎದುರು ಮನೆಯಿಂದ, ಅರ್ಧ ವಯಸ್ಸು ಕಳೆದ ಓರ್ವನು ಹೊರಗೆ ಬಂದು, ಅವನಿಗೆ ಹೇಳಿದನು. "ಏ ನಿನ್ನ ಪಾಂಡಿತ್ಯ ಸಾಕು ಮಾಡು" ಇತ್ತ ತಿರುಗಿ ನಮ್ರತೆಯಿಂದ ಕೇಳಿದನು "ತಾವೆಲ್ಲಿ ಹೋಗಬೇಕು?

ಕೇಶವನೆಂದ. "ಪಂಡಿತ ರಾಮುಚರಣರ ಕಡೆಗೆ."

"ಕೆಲಸವೇನು? ತಿಳಿಯಬಹುದೋ?"

ಗಂಭೀರತೆಯಿಂದ ಕೇಶವ ಹೇಳಿದನು "ಊ ಹುಂ"

ತಿರುಗಿ ಹೆಚ್ಚು ಕೇಳದೇ, ಅವನು ಗಾಡಿಗಳ ಮುಂದೆ ಹಾದಿ ತೋರಲು ನಡೆದನು ತುಸು ದೂರ ಸಾಗಿದ ಮೇಲೆ, ಅವನು ಎಡ ಮಗ್ಗಲಿನ ಒಂದು ಬೀದಿ ಪ್ರವೇಶಿಸಿದನು.

ಕೃಷ್ಣಚಂದ್ರ ಕೇಶವನಿಗೆ ಹೇಳಿದನು "ಇವನ ನಡತೆ ಏನೋ ಸರಿ ಕಾಣುವದಿಲ್ಲ ಮತ್ತೆ ಬೇರೆ ಕಡೆಗೆಲ್ಲಿಯೋ ನಡೆದಹಾಗಿದೆ"

ಕೇಶವ ದನಿಗೂಡಿಸಿದನು "ನಿಜ. ಅವನು ಹೇಳಿದ್ದು ಬಲಕ್ಕೆ ತಿರುಗಬೇಕೆಂದು. ಓ ನೀವು ಎಡಕ್ಕೆ ಏಕೆ ನಡೆದಿರಿ?"

ಮಾರ್ಗದರ್ಶಕನು ತಡೆದನು. "ಅವನೊಬ್ಬ ಹುಚ್ಚ! ಬನ್ನಿ. ನಾನು ಸರಿಯಾಗಿ ಸ್ಥಳ ತೋರಿಸುವೆನು"

ಕೃಷ್ಣಚಂದ್ರ ತೀಕ್ಷ್ಣವಾಗಿ ಹೇಳಿದನು "ತಡೆಯಿರಿ" ಎರಡೂ ಗಾಡಿ ನಿಂತವು ಕೃಷ್ಣಚಂದ್ರ ಗಾಡಿ ಇಳಿದನು ಕೇಶವನೂ ಇಳಿದು ನಿಂತನು.

ಸ್ವೇಚ್ಛೆಯಿಂದ ಬಂದ ಆ ಮಾರ್ಗದರ್ಶಕನೆದುರು ಹೋಗಿ ನಿಂತವನೇ ಕೃಷ್ಣಚಂದ್ರ ಅವನ ಕೈಹಿಡಿದು ವಿಚಾರಿಸಿದನು "ನೀವು ಮನೆಗೆ ಹೋಗಿರಿ ನಮಗ ಅವಶ್ಯವಿಲ್ಲ. ಸ್ವತಃ ನಾವು ಹೋಗುತ್ತೇವೆ."

ಆ ಮನುಷ್ಯನು ಕೃಷ್ಣಚಂದ್ರನ ಕಾಬೂಲೀ ಟೋಪಿ, ಉದ್ದನೆಯ ಅಂಗಿ, ನೀಳ ಬಲಿಷ್ಠ ದೇಹ, ಇವನ್ನೆಲ್ಲ ನೋಡಿ ಹೆದರಿ ಹೋದ ಬಾಗಿ ನಮಸ್ಕರಿಸುತ್ತ ಅಂದನು "ಆಗಾಸಾಹೇಬ! ನಾನು ನಿಜ ಹೇಳುತ್ತೇನೆ. ಸುಳ್ಳಾಡುವದಿಲ್ಲ. ತಿವಾರಿಯುವರನ್ನು ತೋರಿಸುತ್ತೇನೆ" ಕೃಷ್ಣಚಂದ್ರ ಗದ್ದರಿಸಿದನು "ನಿನ್ನ ಮೋರೆ ಸಹ ನೋಡುವದು ಬೇಕಿಲ್ಲ. ಹೊರಟು ಹೋಗು."

ಕೇಶವನು ತಲೆಯಮೇಲೆ ಟೋಪಿ ಇಟ್ಟುಕೊಂಡು, ಕೆಂಗಣ್ಣಿನಿಂದ ಮುಂದಾಗಿ ಇಂಗ್ರಜಿಯಲ್ಲಿ ಏನೋ ಮಾತಾಡಹತ್ತಿದನು. ಆ ಮನುಷ್ಯ-ಇಂಗ್ರಜಿಯ ಒಂದು ಶಬ್ದ ಕೂಡ ತಿಳಿಯಲು ಸಮರ್ಥನಿರಲಿಲ್ಲ. ಈಗ ಅವನ ಪ್ರಜ್ಞಾ ತಪ್ಪಿ ಹೋಗಿತ್ತು.

ಇದೇನೋ ಗಡಬಿಡಿ ಕೇಳಿ ಕಲ್ಲೂ–ತನ್ನ ಬದಿಗೆ ಸಜ್ಜುಗೊಳಿಸಿ ಬಂದುಬಿಟ್ಟನು.

ಆ ಮನುಷ್ಯ ಅಳುಮೋರೆಯಿಂದ–ಅಂಜುತ್ತ ಕೇಳಿದನು "ಸಾಹೇಬ, ನೀವು ಏನು ಹೇಳುತ್ತೀರಿ?"

"ನಿನಗೆ ಇಂಗ್ರಜಿ ತಿಳಿಯುವದಿಲ್ಲವೋ?"

"ಇಲ್ಲ"

"ನಿನ್ನ ಹಸರೇನು?"

ಅವನು ಬೆದರಿ ಕೇಶವನನ್ನು ನೋಡುತ್ತ ಅನುಮಾನಿಸಹತ್ತಿದನು

"ಹುಜೂರ, ಸದಾಶಿವ, ಪಾಂಡೆ" ಕೇಶವ ಡೈರಿ ತೆಗೆದು ಬರದುಕೊಂಡನು

"ನಿಮ್ಮ ತಂದೆಯ ಹೆಸರು?"

"ತಂದೆ ತೀರಿರುವರು"

ಕೃಷ್ಣಚಂದ್ರ ಗದ್ದರಣೆಮಾಡಿದನು. ಬೋಲೊ, ಬೋಲೊ ಜಲ್ದೀ–ಬತಾವೋ.

"ಸರಕಾರ, ಜ್ಞಾನೇಸರ ಪಾಂಡೆ"

ಇದನ್ನು ಬರೆದುಕೊಂಡನು ಇಷ್ಟರಲ್ಲಿ ಸ್ವಲ್ಪ ದೂರ ಮತ್ತೊಂದು ವ್ಯಕ್ತಿ ಬರುವದು ಕಾಣಿಸಿತು ವಯಸ್ಸು ಸುಮಾರು ಐವತ್ತಕ್ಕೆ ಹೆಚ್ಚು ಬಣ್ಣ ಕೆಂಪು. ತಲೆ–ಖಲ್ವಾಟ ಅವನನ್ನು ನೋಡಿದವನೇ ಸದಾಶಿವ ಚೀತ್ಕರಿಸಿದ "ಏ-ಕಾಕಾ-ಬೇಗ ಬಾರೋ. ನಾನು ಪೇಚಿನಲ್ಲಿ ಸಿಕ್ಕಿದ್ದೇನೆ"

ಇದನ್ನು ಕೇಳಿ ಆ ಕಕ್ಕ ಬೆರಗುಬಿಟ್ಟು ಕೇಳಿದನು. "ಏನಾದದ್ದು?" ಸದಾಶಿವ ಹೇಳಿದ "ಆ ಸಾಹೇಬರೂ, ಮತ್ತು ಈ ಸಾಹೇಬರೂ–ಪಂಡಿತ ರಾಮುಚರಣರ ಮನೆಗೆ ಹೋಗುತ್ತಿದ್ದರು ನಾನೆಂದುಕೊಂಡೆ ನಿಮ್ಮಲ್ಲಿ ಇವರನ್ನು ಕೂಡಿಸಿ, ನಾನು ಪಂಡಿತರಿಗೆ ಸುದ್ದಿ ತಿಳಿಸಬೇಕು. ಹೀಗೆಂದು ನಿನ್ನ ಕಡೆಗೆ ಕರಕೊಂಡು ನಡೆದಿದ್ದೆ. ಇವರು ನನ್ನ ಹೆಸರು–ದಸೆ ಬರೆದುಕೊಂಡಿದ್ದಾರೋ."

"ಅಲ್ಲಿಗೆ ಹೊರಟವರನ್ನು ನನ್ನ ಕಡೆಗೆ ಕರೆದುಕೊಂಡು ಬರುವದು ಅನವಶ್ಯ?" ಎಂದವನೇ ಆ ಕಕ್ಕ ನೆರೆಮನೆಯನ್ನು ಪ್ರವೇಶಿಸಿಬಿಟ್ಟನು.

"ಇವರ ಹೆಸರೇನು ?" ಕೇಶವ ಕೇಳಿದನು

"ಶಂಕರ ದಯಾಲ್ ತಿವಾರಿ ಊರ ಜಮೀನುದಾರ"

ಕೇಶವ ಡೈರಿಯಲ್ಲಿ ಹೆಸರು ಬರೆದುಕೊಂಡನು ಮತ್ತು ಕೈಬೊಟ್ಟಿನಿಂದ ಎಚ್ಚರದ ಸಂಜ್ಞೆಮಾಡಿ ಹೇಳಿದನು "ಇನ್ನು ಮೇಲ ಸಹ ನಿಜ ಸ್ಥಳ ತೋರಿಸದಿದ್ದರ, ನೆನಪಿರಲಿ, ನಿನ್ನನ್ನು ಕಚೇರಿಗೆ ಕಳಿಸುತ್ತೇವೆ"

"ನಡೆಯಿರಪ್ಪ" ಎಂದು ಹೇಳಿ ಸದಾಶಿವ ಮುಂದಾದನು ತುಸು ದೂರ ಹೋದ ಮೇಲೆ ಹೇಳಿದ. "ಇದೇ ಮನೆ"

ಅದೊಂದು ಇಟ್ಟಿಗೆಯಿಂದ ಕಟ್ಟಿದ ಸಣ್ಣ ಮನೆ ಸುಣ್ಣ-ಬಣ್ಣ ಇಲ್ಲದುದಕ್ಕೆ ಅಲ್ಲಲ್ಲಿ ಬೀಳುವಂತಾಗಿತ್ತು. ಮುಂಭಾಗದಲ್ಲಿ ಸ್ವಲ್ಪ ಬಯಲು ಸ್ಥಳ ಅದರಲ್ಲಿ ಒಂದು ಬದಿಗೆ ಸಣ್ಣದೊಂದು ಕೈದೋಟ ಒಂದೆರಡು ಹೇರಲ ಗಿಡಗಳೂ ಅದರೊಳಗಿದ್ದವು

ಕೇಶವನು ಸದಾಶಿವನಿಗೆಂದನು "ಹುಂ-ಪಂಡಿತರನ್ನು ಕೂಗು"

ಸದಾಶಿವ ಮುಂದಾಗಿ ನೋಡುತ್ತಾನೆ ಪಂಡಿತ ರಾಮಚರಣರ ಮಗಳು-ಬಾಗಿಲದಲ್ಲಿ ಕುಳಿತು-ಕರುಗಳಿಗೆ ರೊಟ್ಟಿ ತಿನ್ನಿಸತೊಡಗಿದ್ದಾಳೆ. ಸದಾಶಿವನೆಂದ "ಅಮ್ಮಾ, ನಿಮ್ಮ ತಂದೆಗೆ ಬೆಟ್ಟಿಯಾಗಲಿಕ್ಕೆ ಇಬ್ಬರು ಸಾಹೇಬರು ಬಂದಿದ್ದಾರೆ"

ಹುಡುಗೆ ಹೊರಗೆ ಬಂದಳು ಸದಾಶಿವ ಕೈಸನ್ನೆಯಿಂದ-ಕೇಶವ ಕೃಷ್ಣಚಂದ್ರರನ್ನು ಕರೆದನು ಇಬ್ಬರೂ ಸಮೀಪದಲ್ಲಿ ಬಂದರು ದೂರದಿಂದ ನೋಡಿದರೂ ಹುಡುಗೆ ಸುಂದರಿ ಎಂದೇ ಕಾಣುತ್ತಿತ್ತು ಸನಿಯದಲ್ಲಿ ಬಂದಾಗಂತೂ, ಅವರಿಬ್ಬರೂ ಒಂದು ಕ್ಷಣ ಮಂತ್ರಮುಗ್ಧರಾದಂತೆ ನಿಂತುಬಿಟ್ಟರು. ಮೆಲ್ಲನೆ ಕೇಶವ ಕೇಳಿದನು "ನೀವು ರಾಮಚರಣರ ಮಗಳೋ ?"

ಹುಡುಗೆ ಎಂದಳು "ಹು."

ಅತ್ತ ಸದಾಶಿವ ಕಣ್ಣು ಹಿಗ್ಗಿಸಿ-ತುಸು ಭಯ-ತುಸು ಆಶ್ಚರ್ಯ

ದಿಂದ ನೋಡುತ್ತ ನಿಂತಿದ್ದನು ಅವನ ಕಡೆಗೆ ತಿರುಗಿ ಕೇಶವ ನುಡಿದ. "ನೀನು ಹೋಗಬಹುದು"

ಸದಾಶಿವ ಪ್ರಸನ್ನನಾದ. ಹೋಗ-ಹೋಗುತ್ತ ಕೈಮುಗಿದು ಹೇಳಿಕೊಂಡನು "ಹುಜೂರ–ನನ್ನ ಹೆಸರು ಕಾಟುಹಾಕಿಬಿಡಿ"

"ಅಚ್ಛಾ" ಎಂದವನೇ ಕೇಶವ ಧೈರಿಯಿಂದ ಹೆಸರು ತೆಗೆದುಹಾಕಿದನು ಹುಡುಗೆಗೆ ನುಡಿದನು "ನಾವು ಪಂಡಿತ ರಾಮಚರಣರ ಬೆಟ್ಟಿಗೆ ಬಂದಿದ್ದೇವೆ. ಮತ್ತೇನೂ ತಿಳಿಯಬಾರದು ನಾನು ಪಂಡಿತ ವಿಶ್ವನಾಥ ವಾಜಪೇಯಿಯವರ ಮಗ, ಇವನು–ನನ್ನ ಆಪ್ತ–ಮಿತ್ರ ಕೃಷ್ಣಚಂದ್ರ ಮಿಶ್ರ"

ಮುಗುಳುನಗೆಯಿಂದ ಹುಡುಗೆ ಹೇಳಿದಳು "ಸರಿ ತಮ್ಮ ಗುರುತೇನೋ ಹತ್ತಿದಂತಾಯಿತು ನಿಮ್ಮ ಚಿತ್ರವೂ ನಮ್ಮಲ್ಲಿರಬೇಕು" ಎಂದವಳೇ ಆ ಯುವತಿ ಒಳಗೆ ಹೋದಳು ಬೇಗ ತಿರುಗಿ ಬಂದು ಒಳಗೆ ಬರಬೇಕೆಂದು ಹೇಳಿದಳು

ಕೃಷ್ಣಚಂದ್ರ ಸಾವಕಾಶ ಮಾತಾಡಿದನು. "ನೋಡಿದೆಯಾ? ತಿವಾರಿಪುರದವರ ಕಾರ್ಯ' ಜಮೀನುದಾರ ಸಾಹೇಬರು ಬಾಲಮುದುರಿಕೊಂಡು ಚಾರಿಕೊಂಡರು"

ಕೇಶವನೆಂದ "ಇನ್ನಾದರೂ ಆಗಾ ಸಾಹೇಬರು ಟೋಪೀ ಕಳಚಿರಲಿಲ್ಲ"

ಟೋಪಿ ತೆಗೆದು ಕೃಷ್ಣಚಂದ್ರ ಕೈಯ್ಯಲ್ಲಿ ತೆಗೆದುಕೊಳ್ಳುತ್ತ ನುಡಿದ. "ಅಷ್ಟಾದರೂ ಈ ಪಾಚಾತ್ಯನ ವೇಷ ಉಳಿದೇ ಬಿಟ್ಟಿತಲ್ಲ"

( ೬ )

ಬಾಗಿಲದಿಂದ ಒಳಗೆ ಪ್ರವೇಶಿಸಿ, ಕೇಶವ–ಮತ್ತು ಕೃಷ್ಣಚಂದ್ರರು ಮನೆಯ ಒಳಂಗಳಕ್ಕೆ ಬಂದರು. ಪ್ರಶಾಂತವಾದ ಮನೆ ಅಂಗಳದಲ್ಲಿ ಒಂದು ಬದಿಗೆ ಚಂಡುಮಲ್ಲಿಗೆ ಬಳ್ಳಿ ಇತ್ತು. ಆದರ ಹೂಗಳೆಷ್ಟೋ ಉದುರಿ ನೆಲದ ಮೇಲೆ ಸೂರೆಗೊಂಡಿದ್ದವು. ಮಧ್ಯದಲ್ಲಿ ತುಲಸೀ–ಕಟ್ಟೆ. ಏಕೋ, ತುಲಸೀ ಗಿಡ ಬಾಡಿದಹಾಗಿತ್ತು. ಅಂಗಳದಾಟಿ–ಎತ್ತರವಾದ ಮೊಗಸಾಲೆಗೆ ಬಂದರು.

ಒಳಗೆ ಬಂದು ಆ ಯುವತಿ ಕೂಗಿದಳು. "ಅಪ್ಪಾ."

"ಏನಮ್ಮಾ?" ರಾಮಚರಣ ಮಲಗಿಕೊಂಡೇ ಕೇಳಿದರು

"ಅವರು-ಬಂದರು."

"ಒಳ್ಳೇದು" ರಾಮಚರಣ ಮಂಚದಿಂದ ತುಸು ಎದ್ದು ಕುಳಿತರು

ಕೇಶವ ಮತ್ತು ಕೃಷ್ಣಚಂದ್ರರು ಮಂಚದ ಸಮೀಪದಲ್ಲಿ ಹೋಗಿ, ಪಂಡಿತ ರಾಮಚರಣರಿಗೆ-ನಮಸ್ಕರಿಸಿದರು ಅವಸರಪಟ್ಟುಕೊಂಡು ರಾಮ ಚರಣ ಎದ್ದು ಕುಳಿತು, ಇಬ್ಬರನ್ನೂ ನೋಡತೊಡಗಿದರು "ಯಾರು? ಗುರುತು ತಿಳಿಯಲಿಲ್ಲ"

ನಗುತ್ತ ಕೇಶವ ಹೇಳಿದ "ಕಕ್ಕಾ, ನಾನು ಕೇಶವ ಪಂಡಿತ ವಿಶ್ವ ನಾಥ ವಾಜಪೇಯಿ--"

ಕೇಶವ ಹೆಚ್ಚು ಹೇಳುವ ಕಾರಣವೆನಿಸಲಿಲ್ಲ ಮಿತ್ರನ ಮಗನನ್ನು ಗುರುತಿಸಿ, ರಾಮಚರಣರಿಗೆ ಬಹಳ ಪ್ರಸನ್ನತೆ ಎನಿಸಿತು ಹಾಗೇ ಕೇಶವ ನಿಂದ ಕೃಷ್ಣಚಂದ್ರನ ಪರಿಚಯವನ್ನೂ ತಿಳಿದುಕೊಂಡು ಅವನನ್ನೂ— ಸ್ನೇಹಪೂರ್ವಕ ಮಾತಾಡಿಸಿದರು ನಂತರ ಮಗಳ ಕಡೆಗೆ ಹೊರಳಿ- ತುಸು ವ್ಯಗ್ರಭಾವದಿಂದಾಡಿದರು "ದುಲಾರೀ, ಬೇಗನೆ ಇವರ ಊಟದ ವ್ಯವಸ್ಥೆ ಮಾಡಮ್ಮಾ"

ಈಗಾಗಿರುವ ಅವೇಳೆಯನ್ನು ನೋಡಿ ಕೇಶವನಾಡಿದ 'ಈಗೇನೂ ನಮಗೆ ಊಟಬೇಡ ಊಟಮಾಡಿ ಬಂದಿದ್ದೇವೆ ಸಂಜೆಗೇ ಊಟ"

ನಗುತ್ತ ರಾಮಚರಣ ಹೇಳಿದರು "ನೀವು ತಿಳಿದಿರಬಹುದು ಅಡಿಗೆ ಮಾಡಲು ದುಲಾರಿಗೆ ಶ್ರಮವಾಗುವದೆಂದು ಜಾಗ್ರತೆ ಅಡಿಗಮಾಡುವದ ರಲ್ಲಿ ಆಕೆ ಮೇಲುಗೈ" ಹೀಗೆ ಹೇಳುತ್ತ ಮಗಳ ಕಡೆಗ ಸ್ನೇಹಪೂರಿತ ದಿಟ್ಟಿಯಿಂದ ನೋಡಿ ಅಂದರು "ಬೇನೆಯಿಂದ ಹಣ್ಣಾದ ನನ್ನ ಶರೀರ ವನ್ನು, ಈಕೆ ತಿನಿಸಿ-ಉಣಿಸಿ ಹೇಗೆ ಜೋಪಾನವಾಗಿರಿಸುವಳೋ— ಹಾಗೆ ಇವಳ ತಾಯಿಯಿಂದಲೂ ಆಗುತ್ತಿರಲಿಲ್ಲವೆಂದು ನಾನು ಭಾವಿಸಿದ್ದೇನೆ."

ಈ ಪ್ರಶಂಸೆಯಿಂದ-ಕೇಶವ-ಕೃಷ್ಣಚಂದ್ರರು ಹರ್ಷಭರಿತರಾಗಿ ದುಲಾರಿ ಯನ್ನು ಒಂದು ಸಾರೆ ನೋಡಿದರು ಆಕೆಯ ಸುಂದರ ಮುಖವು ಉಷಃ ಕಾಲದ ಆಕಾಶದಂತೆ ರಾಗರಂಜಿತವಾಗಿದ್ದಿತು ಸ್ಮಿತ-ಮಾತೆಯು ನೆನಿವಿ

ನಿಂದ, ಆಕೆಯು ಸ್ನಿಗ್ಧ-ಕಂಗಳಲ್ಲಿ ನೀರು ತುಂಬಿದವು ಆ ತರುಣರಿಬ್ಬರು, ತಮ್ಮೆದುರಿನಲ್ಲಿ ವಿಶ್ವಶಿಲ್ಪಿಯ ಈ ಮನೋರಮ ಚಿತ್ರವನ್ನು ಆದೆಷ್ಟೋ ವೇಳೆ ನೋಡೇನೋಡಿದರು. ಈ ಕಮನೀಯ ಆವರಣದಾಚೆ, ಸೇವಾ-ಪರಾಯಣವೂ ಸ್ನೇಹ-ಶಾಂತವೂ ಆದ ನಾರೀ ಹೃದಯದ, ಪರಿಚಯವನ್ನು ಪಡೆದು ತಮ್ಮ ಎಲ್ಲ ಪರಿಶ್ರಮ ಸಫಲವಾಯಿತೆಂದುಕೊಂಡರು ಅತ್ಯಾಚಾರದ ಕೈಯಿಂದ ಉದ್ಧಾರಮಾಡಲು, ಈ ವೇಳೆಯ ವರೆಗೆ ಕೇವಲ ಕರ್ತವ್ಯವಷ್ಟೇ ಪ್ರೇರಿಸುತ್ತಿದ್ದಿತು ಆದರೆ ಈಗ ಸೌಂದರ್ಯದ ಈ ಸ್ವರ್ಣ-ಪ್ರತಿಮೆಯ ಲಾವಣ್ಯ-ಮತ್ತು ಮಾಧುರ್ಯದಿಂದ, ಅವರಲ್ಲಿ ಆನಂದವು ಇಮ್ಮಡಿಸಿ ಹೋಯಿತು.

ತಂದೆಯ ಪ್ರಶಂಸಾಪರ ಮಾತು, ಆಗಂತುಕರ ಮುಗ್ಧ ದೃಷ್ಟಿ ಇವುಗಳಿಂದ ಪಾರಾಗಲು ದುಲಾರಿ ಕೇಳಿದಳು "ಅಪ್ಪಾ, ಹೇಗಂದರೂ ಅಡಿಗೆ ಮಾಡಲಿಕ್ಕೆ ವೇಳೆ ಬೇಕಾಗುವದು ಹೋಗಿ ನಾನು ಸಿದ್ಧತೆ ಮಾಡಲಿಯಾ?"

ಕೇಶವನು ಪುನಃ ವ್ಯಗ್ರನಾಗಿ, ದುಲಾರಿಯನ್ನುದ್ದೇಶಿಸಿ ನುಡಿದನು "ಸುಮ್ಮನೆ ಈಗ ಶ್ರಮವು ಬೇಡ. ಅವಶ್ಯಕವೆನಿಸಿದ ಕೂಡಲೆ ನಾವೇ ತಮಗ ಹೇಳುತ್ತೇವೆ."

ಕೇಶವನ ಮಾತು ಕೇಳಿ ರಾಮಚರಣರಾಡಿದರು. "ನೀನು ದುಲಾರಿಗೆ ಬಹುವಚನ ಉಪಯೋಗಿಸುವಿ ಇದರಿಂದ ದುಲಾರಿಗೇನೂ ಅನಿಸಲಿಕ್ಕಿಲ್ಲ, ನನಗೆ ಮಾತ್ರ ಕಷ್ಟವೆನಿಸುವದು ದುಲಾರಿಯು ನಿನಗಿಂತ ನಾಲ್ಕೈದು ವರ್ಷಕ್ಕೆ ಸಣ್ಣಾಕೆಯಷ್ಟೇ ಅಲ್ಲ, ವಿಶ್ವನಾಥನೊಡನೆ ನನಗಿದ್ದ ಸ್ನೇಹ ನೋಡಿದರೆ-ನಿನ್ನ ತಂಗಿಯಲ್ಲದೆ ಆಕೆ ಬೇರೆ ಅಲ್ಲ. ಆ ಹಳೇ ಕತೆ ನಿನಗೆ ಗೊತ್ತಿಲ್ಲ"

ಮೃದುಹಾಸ್ಯದಿಂದ ಕೇಶವ ನುಡಿದ "ಈಗಿನಿಂದ ನಾನು ದುಲಾರಿಯನ್ನು ತಂಗಿಯೆಂದೇ ತಿಳಿಯುತ್ತೇನೆ" ಎಂದವನೇ ದುಲಾರಿಯನ್ನು ಲಕ್ಷಿಸಿ ಹೇಳಿದನು "ನಾನು ನಿನ್ನ ಅಣ್ಣನಾದೆ ದುಲಾರಿ, ಇನ್ನು ಸಂಕೋಚ ಪಡುವ ಕಾರಣವೇನೂ ಇಲ್ಲ ನಾನು ಹೇಳಿದಾಗ ನೀನು ಅಡಿಗೆ ಮಾಡಬೇಕು."

ಕೇಶವನ ಮಾತು ಕೇಳಿ ದುಲಾರಿಯ ಹೃದಯ, ಪ್ರೀತಿ ಆದರಗಳಿಂದ ತುಂಬಿಹೋಯಿತು ಆಕೆಯ ಅಂತರಂಗದ ಈ ಭಾವ ಮುಗುಳುನಗೆ ಮಲ್ಲಿಗೆ ರೂಪದಿಂದ ಮುಖದಲ್ಲಿ ತೋರಿತು ಇದೀಗ ಉಂಟಾದ ಭ್ರಾತೃತ್ವ ಭಾವದಿಂದ ಆಕೆಯ ಕೋಮಲ ಹೃದಯ ತುಂಬ ರಸಭರಿತವಾಯಿತು ಅವಳಿಗೆ ಈಗಲೇ–ಕೇಶವನನ್ನು 'ಅಣ್ಣಾ, ಎಂದು ಕೂಗಿಬಿಡಲಾ? ಎಂಬ ಅಪೇಕ್ಷೆ ಬಲವಾಗಲಾರಂಭಿಸಿತು ಆದರ ಈ ಅನುಭವ ಹೊಸತಾದ ಕಾರಣ ಅಪೇಕ್ಷೆ ಮನದಲ್ಲಿಯೇ ಉಳಿಯಿತು

ರಾಮಚರಣರು ನಗುತ್ತ ಕೃಷ್ಣಚಂದ್ರನ ಕಡೆಗೆ ತಿರುಗಿ ಮಾತಾಡಿದರು. "ಹುಡುಗನಿದ್ದಾಗ ನೀನು ಓದಿರಬಹುದು ಯಾವ ವಸ್ತು ಒಂದಕ್ಕೊಂದು ಸಮಾನವಾಗಿರುವವೋ, ಅವು ಒಂದರಲ್ಲೊಂದು ಬೆರೆತು ಹೋಗುವವು ಈ ನಿಯಮಾನುಸಾರವಾಗಿ ನೀನೂ ದುಲಾರಿಯ ಅಣ್ಣನಾಗಬೇಕು "

ನಗುತ್ತಲೇ ಅವನೂ ನುಡಿದ "ಮೊದಲಿಗೇ ನಾನು ಈ ನಿಯಮ ಹೊಂದಿಸಿಕೊಂಡಿದ್ದೇನೆ "

ಹೀಗೇ ಅನೇಕ ಮಾತುಕತೆ ನಡೆದಿರುವಾಗ, ದುಲಾರಿ ತನ್ನ ಕಾರ್ಯ ನಿಮಿತ್ತ ಒಳಗೆ ಹೋದಳು. ಈ ಸಂಧಿ ಸಾಧಿಸಿ ಕೇಶವನು ಬಂದ ಕಾರಣ ಉದ್ದೇಶಗಳನ್ನು ತಿಳಿಸಿದನು. ಈ ತರುಣರ ಮಾತು ಕೇಳುತಿರುವಂತೆ, ರೋಗದಿಂದ ಕಾಂತಿಹೀನವಾದ ರಾಮಚರಣರ ಮುಖವೂ ಪ್ರಕಾಶಮಾನವಾಯಿತು ಸ್ನೇಹಪೂರ್ವಕವಾಗಿ ಇಬ್ಬರನ್ನೂ ಆಶೀರ್ವದಿಸಿದರು. ಸಾನಕಾಶ ದುಲಾರಿಯ, ಲಗ್ನದ ಸಂಗತಿಯನ್ನು ಹೇಳಿಬಿಟ್ಟರು.

ಎಲ್ಲಾ ಕಡೆಗೂ ಇರುವಂತೆ, ಇಲ್ಲಿಯೂ ನಡೆದಿತ್ತು. ಲಖನೌಕ್ಕೆ ತಿಳಿದುಬಂದಿರುವ ವಾರ್ತೆಯಲ್ಲಿನ ಅತಿರಂಜಿತ ಭಾಗವನ್ನು ಬಿಟ್ಟರ ಆ ಘಟನೆ ಈ ರೀತಿ ಕೇವಲ ತಮ್ಮ ಮಗಳ, ಮಂಗಲ ಮತ್ತು ಸುಖಗಳನ್ನಷ್ಟೇ ಲಕ್ಷಿಸಿ ರಾಮಚರಣರು ವಿವಾಹಕ್ಕೆ ಒಪ್ಪಿಕೊಂಡಿದ್ದರೆಂತಲ್ಲ ಆ ತರುಣನನ್ನು ನೋಡಿ ಅವರು ಒಪ್ಪಿದ್ದು ಯಾವ ದಿನ ಅವನು ವಿಹ್ವಲನಾಗಿ ಬಾಯಿಬಿಟ್ಟು ಹೇಳಿಬಿಟ್ಟನೋ, ಆಗ ರಾಮಚರಣರು ನಿಶ್ಚಯವಾಗಿ ತಿಳಿದುಕೊಂಡರು. ಈ ವಿವಾಹವಾಗದಿದ್ದರೆ ತರುಣನ ಜೀವನ ನಷ್ಟವಾಗುವುದು

ಎಂದು ವಿಚಾರಿಸಿ ಸಾಮಾಜಿಕ ರೂಢಿಯ, ಬಲಿ-ಶಾಲೆಯಲ್ಲಿ ಒಂದು ಜೀವದ ಸುಖ-ಶಾಂತಿ ಬಲಿ ಕೊಡುವದು ಒಳಿತಲ್ಲವೆಂದು ನಿರ್ಣಯಕ್ಕೆ ಬಂದರು. ಆ ತರುಣನ ಹೆಸರು ಮೋತಿಲಾಲ ಸಕ್ಸೇನಾ, ಪ್ರೊಫೆಸರನಿದ್ದಾನೆ. ಶ್ರೇಷ್ಠ ತರುಣ ಮನುಷ್ಯನೆಂದರೆ, ಅವನೇ. ಊರ ಜನ ರಾಮುಚರಣ ರನ್ನು ಪೀಡಿಸಿದ ವಿಷಯ ಬಹು ಮಟ್ಟಿಗೆ ಸತ್ಯವಾಗಿದ್ದಿತು. ಆಗಸರು, ಕೆಲಸಿಗರು, ಬರುತ್ತಿರಲಿಲ್ಲ ಸೇವಕರು ಬಿಟ್ಟು ಹೋಗಿದ್ದರು. ಊರಲ್ಲಿದ್ದ ಡಾಕ್ಟರನು ಸಹ ಜಮೀನುದಾರರ ಹೇಳಿಕೆಯಿಂದ ಔಷಧ ಕೊಡುವುದನ್ನು ನಿಲ್ಲಿಸಿದ್ದ. ಕೇವಲ ನೆರೆಮನೆಯ ಸಿಲಿಯಾಳ ತಾಯಿಯದೊಂದು ಇವರಿಗೆ ನೆರವು ಆಕೆ ಯಾರ ಭಯಕ್ಕೂ ಸೊಪ್ಪು ಹಾಕದೇ ದಿನಾಲು ಎರಡು ಹೊತ್ತು ಈ ವಿಪನ್ನರಿಗೆ ನೆರವಾಗಿ ಹೋಗುತ್ತಿದ್ದಳು. ಆಕೆ ಬರದಿದ್ದರೆ ಕಸ ಮುಸುರೆ, ನೀರು ತುಂಬುವದು ಸಹ ದುಲಾರಿಯದೇ ಕೆಲಸವಾಗಿದ್ದಿತು. ಮೊದಲ ದಿನ ಆ ಸಿಲಿಯಾಳ ತಾಯಿ ಸ್ವಯಂ ಪ್ರೇರಣೆಯಿಂದ ನೆರವಿಗೆ ಬಂದಾಗ ದುಲಾರಿ ಅಂದಳು "ಬೇಡ-ಕಕ್ಕೀ, ನಮಗೇನೂ ತೊಂದರೆ ಇಲ್ಲ ನಮ್ಮ ಸಲುವಾಗಿ ನೀನು ಸಂಕಟದಲ್ಲಿ ಬೀಳಬೇಕಾದೀತು" ದುಲಾರಿಯ ಈ ಮಾತು ಕೇಳಿ ಆಕೆ ಕಣ್ಣು ಹಿಗ್ಗಿಸಿ ಹೇಳಿದ್ದಳು "ಹುಡುಗೀ, ನೀನೇನು ಹೇಳುತ್ತೀ. ನಮಗೇನು ದಯಾ-ಧರ್ಮ ಇಲ್ಲವೇ? ಪರಲೋಕದ ಹೆದ ರಿಕೆಯೂ ಇಲ್ಲವೇ? ನೀವು ಮುಸುರೆ ತಿಕ್ಕಬೇಕು, ನೀರು ತುಂಬ ಬೇಕು, ನಾವು ನಿಂತು ನೋಡಬೇಕು! ನಾನು ಯಾರಿಗೂ ಹೆದರುವದಿಲ್ಲ ಉಳಿದವರಂತೆ ನಾನು ಧರ್ಮವಂತಿಯಲ್ಲ"

ರಾಮುಚರಣರ ಬಾಯಿಂದ ಎಲ್ಲ ಕತೆ ಕೇಳಿ ಕೇಶವನು ಅದೇ ದಿನ ಲಖನೌಕ್ಕೆ ನಡೆಯುವಂತೆ ಹೇಳಿದನು ಅಲ್ಲದೆ ಇಲ್ಲಿ ಗಾಡಿಯ ಅನಾನು ಕೂಲವೆಂದು ಲಾಲಗಂಜದಿಂದಲೇ ಎರಡು ಗಾಡಿ ತಂದ ಸಮಾಚಾರವನ್ನು ತಿಳಿಸಿದನು.

ಇಷ್ಟು ಬೇಗ ಲಖನೌಕೆ ಹೋಗುವ ಮಾತು, ರಾಮುಚರಣರಿಗೆ ಮೊದಲು ಸರಿ ಕಾಣಲಿಲ್ಲ. ಆದರೆ ಚರ್ಚೆಯ ನಂತರ ನಿರ್ಣಯವಾದುದೇ ನಂದರೆ—-ಎರಡು ದಿನಗಳಾದ ಮೇಲೆ ಹೋಗಲು ಪರವಿಲ್ಲ ಔಷಧೋಪ ಚಾರಕ್ಕೆ ಆದಷ್ಟು ಬೇಗ ಹೊರಡುವದೂ ಅವಶ್ಯದ ಮಾತಾಗಿದ್ದಿತು

ಕೇಶವನು ಇರಲು ಮನೆ ವ್ಯವಸ್ಥೆ ಸಹ ಮಾಡಿಬಂದಿದ್ದಾನೆ. ಇದನ್ನೆಲ್ಲ ತಿಳಿದು ರಾಮಚರಣರು ಒಪ್ಪಿದರು ನಾಳೆ ಊಟ ತೀರಿಸಿಕೊಂಡು ಹೊರಡುವದಾಯಿತು ಇನಾಮು ಸಿಗುವ ಆಶೆಗೆ ಗಾಡಿಯವರೂ ಸಮ್ಮತಿಸಿದರು. ಮತ್ತು ತಮ್ಮ ಕುದುರೆಗಳನ್ನು ಮೇಯಬಿಟ್ಟು ಊಟ ಉಡಿಗೆಯ ಸಿದ್ಧತೆಯಲ್ಲಿ ತೊಡಗಿದರು

(೭)

ಇನ್ನೂ ಕೇಶವ-ಕೃಷ್ಣಚಂದ್ರರು ರಾಮಚರಣರ ಸಂಗಡ ಮಾತಾಡುತ್ತ ಕುಳಿತಿದ್ದಾರೆ ಅಡಿಗೆ ಮನೆಯಲ್ಲಿ ಚೊಕ್ಕಟ ಮಾಡಿ, ಒಂದು ಬದಿಗೆ ಎರಡು ಮಣೆ, ಎಲೆ, ನೀರು ಸಿದ್ಧ ಮಾಡಿ, ಒಂದು ಕಂದೀಲು ಹಚ್ಚಿಟ್ಟು ದುಲಾರಿಯು ರಾತ್ರಿಯ ಊಟದ ಸಿದ್ಧತೆಯನ್ನು ತಿಳಿಸಿದಳು

ಮಣೆ ಮೇಲೆ ಕೂತು, ದುಲಾರಿಯ ಕಡೆಗೆ ಹೊರಳಿ ಕೇಶವ ನುಡಿದನು. "ಎಷ್ಟು ಅಡಿಗೆ ಮಾಡಿಟ್ಟಿರುವೆ ದುಲಾರಿ. ಲಖನೌಕೆ ಹೋದ ಮೇಲೆ ಸಹ ನಮಗೆ ಔತಣವೋ? ಅಥವಾ ಉಪಹಾರವೊ?''

ಲಜ್ಜೆಯಿಂದ ದುಲಾರಿಯಾಡಿದಳು "ಇದರಲ್ಲಿ ಹೆಚ್ಚಿನದೇನು?"

''ಸರಿ ಇದಂತೂ ಹೆಚ್ಚಿನದಲ್ಲ. ಹಾಗಾದರೆ ನಾವು ಹೊಟ್ಟೆಬಾಕರೆಂದು ನಿನ್ನ ಅಭಿಪ್ರಾಯವಷ್ಟೇ?

ಉಣ್ಣುತಿರುವಾಗ ಕೇಶವನೆಂದನು. "ದುಲಾರೀ, ಅಡಿಗೇ ಮಾಡುವದನ್ನು ನಿನಗೆ ಕಕ್ಕೀ ಕಲಿಸಿದ್ದಳೋ, ಆಕೆ ಹೋದಮೇಲೆ ಕಲಿತೆಯೋ!''

ಶಾಂತಸ್ವರದಿಂದ ಹೇಳಿದಳು ದುಲಾರಿ. '' ಆಕೆಯೇ ಎಲ್ಲಾ ಕಲಿಸಿದ್ದಳು "

'' ಅದಕಾಗಿಯೇ ಇಷ್ಟು ರುಚಿಯಾಗಿದೆ "

ಕೇಶವನ ಪ್ರಶಂಸೆಗೆ ನಾಚಿ, ದುಲಾರಿ ಮೌನವಾಗಿದ್ದಳು

ಏಕಾಗ್ರ ಚಿತ್ತದಿಂದ ಕೃಷ್ಣಚಂದ್ರ ಊಟವನ್ನಾರಂಭಿಸಿದ್ದನು ಕೇಶವನ ಮಾತು ಕೇಳಿ ನಗುತ್ತ ಅವನು ದುಲಾರಿಯನ್ನು ಲಕ್ಷಿಸಿ ನುಡಿದನು. ''ಅಡಿಗೆ ಹೇಗೆ ಆಗಿದೆ, ಎಂಬುದನ್ನು ನಾನು ಬಾಯಿಂದ ಆಡಿ ತೋರಿಸುವುದಿಲ್ಲ. ಅದಕ್ಕೆ ಪ್ರತ್ಯಕ್ಷ ಪ್ರಮಾಣ ಕೊಡುತ್ತೇನೆ. ಒಂದು

ಸಲ ನಮ್ಮ ಪ್ರೊಫೆಸರರು ಹೇಳುತ್ತಿದ್ದರು ಏನೆಂದರೆ, ಸಣ್ಣ ಹುಡುಗರಿಗೆ ಪುಸ್ತಗಳ ಉಪಯೋಗವಿದೆಯೋ ಇಲ್ಲವೋ ? ಇದಕ್ಕೆ ಬಲವತ್ತರ ಪ್ರಮಾಣ ಬೇಕಾದರೆ, ತುಸು ನೋಡಬೇಕು ಒಂದು ತಾಸಿನಲ್ಲಿಯೇ ಹುಡುಗರು ಪುಸ್ತಕಗಳನ್ನು ಹರಿದು ಕಿವುಚಿ ಬಿಸಾಕುವರೋ, ಇಲ್ಲವೋ ? ಅದರಂತೆ ಊಟ ತುಸು ವೇಳೆಯಲ್ಲಿ ತೀರಿಹೋದರೆ ಆಗ ತಿಳಿಯಬೇಕು ಅಡಿಗೆ ಚನ್ನಾಗಿ ಆಗಿದೆ ಎಂದು.''

ನಗುತ್ತ ಕೇಶವನೆಂದ "ಅಂದ ಮೇಲೆ—ವರ್ಣಿಸಲಿಕ್ಕೆ, ಮತ್ತು ಊಟಕ್ಕೆ ಎರಡೂ ರೀತಿಯಲ್ಲಿ ಅಡಿಗೆ ಚನ್ನಾಗಿ ಆಗಿದೆ ಊಟದಲ್ಲಿ ನಾನೂ ಪ್ರಮಾಣಿಸಿಕೊಡುತ್ತೇನೆ ದುಲಾರೀ ಆದರೆ ಕೃಷ್ಣಚಂದ್ರನಷ್ಟು ಬೇಗ ಅಲ್ಲ."

ಕೃಷ್ಣಚಂದ್ರ ನಗುತ್ತ ನುಡಿದ "ಇಷ್ಟೇನೂ ಮಹತ್ತಾಗಿ ಅಲ್ಲ ' ಎಂದವನೆ ಒಂದು ಇಡಿ ಪೂರಿಯನ್ನು ಬಾಯಿಗೆ ಹಾಕಿದ

ದುಲಾರಿಯು ಬೇಗ ಬೇಗ ಇನ್ನಿಷ್ಟು ಪೂರಿಗಳನ್ನು ಕೃಷ್ಣಚಂದ್ರನ ಎಲೆಯಲ್ಲಿ ಬಡಿಸಿದಳು ಆಗ ಕೃಷ್ಣಚಂದ್ರ ಬಾಯಿ ತೆರೆದು, ಅಸ್ಪಷ್ಟವಾಗಿ ಏನಾಡಿಕೊಂಡನೋ, ಅದು ತಿಳಿಯುವಂತಿರಲಿಲ್ಲ ಮಾತ್ರ ಒಂದೊಂದಾಗಿ ಇಡಿ ಪೂರಿಗಳನ್ನೇ ಬಾಯಿಗೆ ತುಂಬಸುತ್ತಿದ್ದ ಅಷ್ಟೆ

ಕಳ್ಳನೋಟದಿಂದ ಕೇಶವ ಕೃಷ್ಣಚಂದ್ರನನ್ನು ದಿಟ್ಟಿಸುತ್ತ ಹೇಳಿದನು. ಹಳ್ಳಿಪಳ್ಳಿಗಳ ನಿಂದೆಯನ್ನು ನಾವು ಬಹಳ ಮಾಡುತ್ತಿದ್ದೆವು ಆದರೆ ಒಂದೇ ದಿನದ ಹವೆಯ ಬದಲಾವಣೆಗೆ ಹಸಿವು ಎಷ್ಟು ಹೆಚ್ಚಾಗುವದಲ್ಲ ?

ದುಲಾರಿ ಲಜ್ಜೆಯಿಂದಾಡಿದಳು. 'ಹಾಗೆಲ್ಲಿ? ಇದೇನೂ ಹೆಚ್ಚಲ್ಲ''

ಕೃಷ್ಣಚಂದ್ರನ ಮುಖ ಅರಳಿ ಗಂಭೀರವಾಗಿತ್ತು. ಆತ ದುಲಾರಿಯ ಕಡೆಗೆ ತಿರುಗಿ ಹೇಳಿದ. "ನೀವು ಅವನ ಮಾತಿಗೆ ಸಂಕೋಚಪಟ್ಟುಕೊಳ್ಳುವ ಕಾರಣವಿಲ್ಲ ಭಗವಂತ ಅಜೀರ್ಣ ಕಳಿಸಿದಾಗ, ಅವನದೇ ಕೃಪೆಯಿಂದ ಅದು ನನ್ನ ವಿಳಾಸಕ್ಕೆ ಮುಟ್ಟಲಿಲ್ಲ ಹಾದಿ ತಪ್ಪಿಹೋಯಿತೇನೋ. ನಾನು ಹೀಗೇ ಊಟಮಾಡುವವ. ನೀವು ಲಖನೌದಲ್ಲಿ ನನಗೆ ಔತಣವನ್ನು ಕೊಟ್ಟರೆ, ಇದಕ್ಕೂ ಕಮ್ಮಿ ನಾನು ಊಟ ಮಾಡುವದಿಲ್ಲ ''

ಬರಿ ನಗೆಯಿಂದಲೇ ಈ ಮಾತಿಗೆ ಉತ್ತರಿಸಿ, ಬೇರೆ ಊಟದ ಪದಾರ್ಥಗಣನ್ನು ತರಲು, ದುಲಾರಿ ಬೇರೆ ಕಡೆಗೆ ಹೋದಳು

ಕೇಶವನು ಕೃಷ್ಣಚಂದ್ರನ ಬರಿದಾದ ಎಲೆ ನೋಡಿ ಹೇಳಿದನು "ಏನಯ್ಯಾ, ಈ ಸಾರೆಯೂ ಮುಗಿಸಿಬಿಟ್ಟೆಯಾ ?"

"ಹೌದಣ್ಣಾ ನಿಜವಾಗಿ ಬಹಳ ಹಸಿವಾಗಿದೆ ನೀನು ಹೇಳಿದುದೇ ಕಾರಣ ಸರಿ ಹವೆ ಬದಲಾವಣೆಯಾಗಿದೆ"

ಕೇಶವನೆಂದ "ಇದೇನೂ ಸರಿಯಾಗಲಿಲ್ಲ"

"ಏನ , ಊಟವೋ ?"

"ಅಲ್ಲ ಅಡಿಗೆ ಮಾಡಿದವರು"

ಕೇಶವನ ಮಾತು ಕೇಳಿ ಕೃಷ್ಣಚಂದ್ರನು ಮಿದುವಾಗಿ ನುಡಿದ 'ಚಿಃ, ಬೇಕಾದರೆ ಹೀಗನ್ನು. ಅಡಿಗೆಯಕಿಂತ ಮಾಡಿದಾಕೆ ಹೆಚ್ಚು ಚೆನ್ನು ಎಂಥ ರೂಪವೋ, ಹಾಗೆಯೇ ಬುದ್ಧಿ ನಿಜವಾಗಿ ಶಿವಾರಿಪುರದ ಕೆಸರಿನಲ್ಲಿ ಇದೊಂದು ಕಮಲ"

ಉಲ್ಲಸದಿಂದ ಕೇವಶನಾಡಿದ "ನಿಜವೇ ಇಲ್ಲವಾದರೆ ನಿನ್ನಂಥ ಪೆದ್ದಭಟ್ಟನ ಬಾಯಿಂದ ಕಾವ್ಯಭಾಷೆ ಹೇಗೆ ?"

ಪಾತ್ರೆಯಲ್ಲಿ ಖೀರು–ಪಕ್ವಾನ್ನಗಳನ್ನು ತೆಗೆದುಕೊಂಡು ದುಲಾರಿ ಬಂದು ನೋಡುತ್ತಾಳೆ ಕೃಷ್ಣಚಂದ್ರನ ಎಲೆ ತೆರವು. ಈಗ ಹೊಸದು ಹಾಕಿದಂತೆ, ಅವರ ಎದುರಿನಲ್ಲಿಯೇ ಪಾತ್ರೆ ಇಟ್ಟು, ದುಲಾರಿ ಅವಸರದಿಂದ ಕೃಷ್ಣಚಂದ್ರನಿಗೆ ಇನ್ನಷ್ಟು ಪೂರಿಗಳನ್ನು ಹಾಕಿದಳು ಅಲ್ಲದೆ ತರಕಾರಿಗಳನ್ನೂ ಬಡಿಸಿದಳು

ಕೃಷ್ಣಚಂದ್ರನು ಕೈಚಾಚಿ ಬೇಡ ಬೇಡವೆನ್ನುತ್ತ ಹೇಳಿದನು 'ನಿಮಗೆ ನಾನೊಂದು ಮಾತು ಹೇಳಬೇಕು ನನಗೊಂದು ಕೆಟ್ಟ ಅಭ್ಯಾಸ ಉಂಟು ನಾನು ಬಹಳ ಬೇಗ ಬೇಗ ಊಟ ಮಾಡುತ್ತೇನೆ ಮತ್ತು ಎಲೆಯಲ್ಲಿ ಏನೂ ಚೆಲ್ಲುವದಿಲ್ಲ ಇದನ್ನು ಕಂಡು ಮೇಲಿಂದ ಮೇಲೆ ಹಾಕುತ್ತ ಹೋದರೆ ನೋಡಬೇಕು. ನಿಮ್ಮ ಪೂರಿ ತೀರುವವೋ ? ನನ್ನ ಶಕ್ತಿ ಮುಗಿಯುವದೋ ? ಈಗ ಬಡಿಸಿದ ಪೂರಿಗಳನ್ನು ತರಕಾರಿಯೊಡನೆ

ತಿನ್ನಲೋ? ಅಥವಾ ಖೀರಿನ ಸಂಗಡ ತಿನ್ನಲು ಬೇರೆ ಪೂರಿ ಹಾಕುವಿರೋ? ಸಾಕು. ಇನ್ನೇನೂ ಬೇಡ ಹೇಗಾದರೂ ಇವನ್ನಷ್ಟು ಮುಗಿಸುತ್ತೇನೆ

ಇವನ ಮಾತಿಗೆ ಕೇಶವ ನಗುತ್ತಿದ್ದ "ಖೀರು ಸುರಿಯುವಾಗ, ಪೂರಿ ಒಡಿಸಲೇ ಬೇಕಾಗುವದು ಈ ನಿಯಮವನ್ನು ನಿನಗಾರು ಹೇಳಿಕೊಟ್ಟರು ?"

ಕೃಷ್ಣಚಂದ್ರನು ಕೇಶವನ ಕಡೆಗ ಹೊರಳಿ ನಗುತ್ತಲೇ ನುಡಿದನು. "ನನ್ನ ರುಚಿ"

ಊಟ ಮುಗಿದ ಮೇಲೆ ರಾಮಚರಣರ ಸಂಗಡ ತುಸು ಮಾತುಕತೆ ಮಾಡದನು ದುಲಾರಿಯು ಅವರಿಬ್ಬರಿಗೆ ಮಲಗುವ ವ್ಯವಸ್ಥ ಮಾಡಿ ಹೇಳಿಹೋದಳು

ರಾಮಚರಣರು ಮಲಗುವ ಕೊಟಡಿಯು ಬದಿಯಲ್ಲಿಯೇ ಅವರಿಗೆ ಹಾಸಿಗೆ ಸಿದ್ಧವಾಗಿದ್ದವು ಸನಿ ಸನಿಯದಲ್ಲಿಯೇ ಎರಡು ಮಂಚಗಳು ಅವುಗಳ ಮೇಲೆ ಸ್ವಚ್ಛವಾದ ಹಾಸಿಗೆ, ಚಾದರ, ತಲೆದಿಂಬು, ಎಲ್ಲಿಯೂ ಹೊಲಸು ಕಾಣುವ ಹಾಗಿರಲಿಲ್ಲ ಬದಿಯಲ್ಲಿಯೇ ಒಂದು ವರ್ತುಲಾಕೃತಿ ಸಣ್ಣ ಮೇಜಿನ ಮೇಲೆ ಒಂದು ಸುಂದರವಾದ ದೀಪ ಉರಿಯುತ್ತಿದ್ದಿತು ಅದರ ಮಂದ ಪ್ರಕಾಶ ಹಿತಕರವಾಗಿತ್ತು ಇತ್ತ ಕಡೆಗೆ ಒಂದು ಕಾಜಿನದು, ಒಂದು ಹಿತ್ತಾಳೆಯದು, ಎರಡು ಲೋಟಾ, ಕಳಗೆ ಮಣ್ಣಿನ ಹೂಜೆಯಲ್ಲಿ ಕುಡಿಯುವ ನೀರು

ಕೊಟಡಿಯಲ್ಲಿ ಪ್ರವೇಶ ಮಾಡಿದೊಡನೆ ಈ ಸಹಜ ಹಾಗು ಸುಂದರ ವ್ಯವಸ್ಥೆಯಲ್ಲಿ ಎರಡು ಸುಭಗ–ಕೋಮಲ ಕೈಗಳ, ನಿಷ್ಠೆಯ ಅನುಭವ ಪಡೆದು ಉಭಯತರು ಪ್ರಸನ್ನರಾದರು ದಿನವೆಲ್ಲ ರೂಢಿಯಿಲ್ಲದ ಪರಿಶ್ರಮ ದಿಂದ ಒಳಲಿದ ಅವರಿಗೆ– ಈ ಶಾಂತ ವಿಶ್ರಮಕಲ್ಪನೆಯಿಂದ ಒಳ್ಳೇ ತೃಪ್ತಿಯಾಯಿತು

ಕೊಟಡಿಯ ಹೊರಗೆ ನಿಂತು ದುಲಾರಿ ಕೇಳಿದಳು, "ಇನ್ನೇನಾದರೂ ಬೇಕೇನು ?"

ಸ್ನೇಹಭರಿತನಾಗಿ ಕೇಶವನೆಂದ "ಬೇಕು ನಿನಗೆ ವಿಶ್ರಾಂತಿ ಬೇಕು. ದಿನವೆಲ್ಲ ನಮ್ಮ ಸಲುವಾಗಿ ದುಡಿದು ಹಣ್ಣಾಗಿ ಹೋಗಿರುವೆ.

ಇನ್ನು ಹೋಗಿ ವಿಶ್ರಾಂತಿ ಪಡೆ'' ತರುವಾಯ ವ್ಯಗ್ರತೆಯಿಂದ ವಿಚಾರಿಸಿದನು "ನಿನ್ನ ಊಟವಾಯಿತೇ? ದುಲಾರಿ"

ಮೆಲ್ಲನೆ ದುಲಾರಿ ಹೇಳಿದಳು ''ಇನ್ನೂ ಇಲ್ಲ.''

''ಚೀ, ನಿನ್ನ ಊಟವಾದಮೇಲೆ ನಮಗೆ ಮಲಗುವ ವ್ಯವಸ್ಥೆ ಮಾಡಿಕೊಟ್ಟಿದ್ದರೂ ಸಾಗುತ್ತಿತ್ತು''

''ಅದರಲ್ಲೇನು? ನನಗೇನೂ ದಣಿವಾಗಿಲ್ಲ''

"ಆಗಲಿ ಇನ್ನು ತಡಮಾಡಬೇಡ. ನೀನು ಹೋಗು"

ದುಲಾರಿ ಹೊರಟು ಹೋಗಲು, ಕೃಷ್ಣಚಂದ್ರನು ಹಾಸಿಗೆ ಮೇಲೆ ಕೈಕಾಲು ಚಾಚಲು ಎಷ್ಟಿದ್ದ ಶಕ್ಯವೋ—ಅಷ್ಟು ಚಾಚಿ ಉರುಳಿಕೊಂಡು ಅಂದನು ''ಅಪ್ಪಾ''

ಲೋಟದಲ್ಲಿ ನೀರು ಹಾಕಿಕೊಳ್ಳುತ್ತ ಕೇಶವನೆಂದ ''ನಾಳೆ ಯಾವ ಗಾಡಿ ಅನುಕೂಲವಾಗಬಹುದು ಕೃಷ್ಣಾ?"

ಆ ಕಡೆಗೆ ಮಗ್ಗುಲಾಗಿ ಕೃಷ್ಣಚಂದ್ರ ಹೇಳಿದನು ''ಈಗ ಆ ವಿಚಾರ ಬೇಡ ನಾಳಿನ ಮಾತು ನಾಳೆಗೆ ಈಗ ಮಾತು ಬೇಡ ಮಲಗುವಾ ಯಾಕೋ ನಿದ್ರೆ ಬರುವ ಹಾಗಿದೆ''

ನೀರು ಕುಡಿದು, ಕಿಟಕಿಯನ್ನು ತೆರೆದು ದೀಪವನ್ನಾರಿಸಿ ಹಾಸಿಗೆಯ ಮೇಲೆ ಬಂದು ಕೇಶವನು ಮಾತಾಡಿಸಿದನು. ''ಏನಯ್ಯಾ, ಕೃಷ್ಣ ಮಲಗಿಬಿಟ್ಟೆಯಾ?'' ಕೃಷ್ಣಚಂದ್ರ ಆಗಲೇ ಒಂದು ಕನಸು ಕಾಣುತ್ತಿದ್ದನು ಇಂಥ ಕನಸು, ಜಾಗ್ರತೆಯಲ್ಲಿ ಯಾರಿಗೂ ಬೀಳಲು ಸಾಧ್ಯವಿಲ್ಲ

ಬೆಳಗಿನಲ್ಲಿ ಎದ್ದು ಹೊರಗೆ ಒಂದು ಕೃಷ್ಣಚಂದ್ರ ನೋಡುತ್ತಾನೆ ದುಲಾರಿ ಮತ್ತು ನಿಲಿನಾಳ ತಾಯಿ ಇಬ್ಬರೂ ಮನೆಗೆಲಸದಲ್ಲಿ ತೊಡಗಿದ್ದಾರೆ ದುಲಾರಿಯು ಒಂದು ಸಾಧಾರಣ ತರದ ರವಕೆ, ಮತ್ತು ಒಂದು ಅಗಲ ಕಂಪು ಅಂಚಿನ ಪತ್ತಲ ಉಟ್ಟುಕೊಂಡಿದ್ದಾಳೆ ಕೈಗಳಲ್ಲಿ ಬಳೆ, ಕೊರಳಲ್ಲಿ ಹಾರ ಇನ್ನೂ ಸೂರ್ಯೋದಯವಾಗಿರಲಿಲ್ಲ ಉದಯನಾಗಲಿರುವ ರವಿಯ ಹೊಂಬಣ್ಣದ ಕಿರಣಗಳಿಂದ ರಂಜಿತವಾಗಿ, ಬಾನುಭೂಮಿ ಆರಕ್ತಕಾಂತಿ ತಳೆದಿದ್ದವು ಅದೇ ರಶ್ಮಿಜಾಲಗಳಲ್ಲಿ ಥಳ ಥಳಿಸುತ್ತಿರುವ ದುಲಾರಿಯ ನಿರ್ಮಲ ಕಿಶೋರಾಕೃತಿಯನ್ನು ಕಂಡು, ಕೃಷ್ಣಚಂದ್ರ

ಇನ್ನೊಂದು ಬಾರಿ ಮುಗ್ಧನಾದನು ಅದೇ ನಿದ್ರೆಯಿಂದ ಎದ್ದು ಬಂದ ಅವನ ಕಣ್ಣುಗಳಿಗೆ ಈ ರೀತಿ ಭಾಸವಾಯಿತು ಉಷೆಯು ಮೂರ್ತಿಮತಿಯಾಗಿ ಅಂಗಣದಲ್ಲಿ ಇಳಿದಿರಬಹುದೇ ?

ಇವನನ್ನು ನೋಡಿ ಸಿಲಿಯಾಳ ತಾಯಿ ಹೇಳಿದಳು "ಬಾಬೂ, ಮೋರೆ ತೊಳೆಯುವ ನೀರು ಇತ್ತ ಕಡೆಗೆ"

ದುಲಾರಿ ಕೃಷ್ಣಚಂದ್ರನ ಒಳಿಯಲ್ಲಿ ಬಂದು ಮಾತಾಡಿಸಿದಳು 'ರಾತ್ರಿ ಸರಿಯಾಗಿ ನಿದ್ರೆಯಾಯಿತೇ ?"

ಪ್ರಶಾಂತಭಾವದಿಂದ ಕೃಷ್ಣಚಂದ್ರ ಉತ್ತರಿಸಿದನು "ನೀವು ಹೊರಟು ಹೋದ ಮೇಲೆ, ಎರಡೇ ಮಿನಿಟಿಗೆ ನನಗೆ ನಿದ್ರೆ ಹತ್ತಿರಬಹುದು ಇದೇ ಎದ್ದು ಬಂದಿದ್ದೇನೆ ಇನ್ನು ನನಗೇನಾದರೂ ಕಡಿಮೆಯಾಗಿದ್ದರೆ ಅದಾವುದೂ ಗೊತ್ತೇ ಆಗಲಿಲ್ಲ " ಎಂದವನೇ ನಗತೊಡಗಿದನು

ದುಲಾರಿ ನುಡಿದಳು "ಏನಾದರೂ ಅನನುಕೂಲವೆನಿಸಿದ್ದರೆ ತಿಳಿಸಬೇಕು "

ನಗುತ್ತ ಕೃಷ್ಣಚಂದ್ರನೆಂದ "ದ್ವಿಧಾ ಸಂಕೋಚ, ಇವು ಎಂಥ ವಸ್ತುಗಳೋ ನಮ್ಮಿಬ್ಬರಲ್ಲಿ ಯಾರಿಗೂ ಗೊತ್ತಿಲ್ಲ ಈ ಸಂಬಂಧದಲ್ಲಿ ತಾವು ನಿಶ್ಚಿಂತರಾಗಬೇಕು ಇಷ್ಟು ಕೈಕಟ್ಟಿ ನಮ್ಮ ಆದರೋಪಚಾರ ನಡೆಸಿರುವಾಗ ನಾವು ಏನು ಕಡಿಮೆ ಎಂದು ಹೇಳೋಣ?"

ದುಲಾರಿಯ ಮುಖದಲ್ಲಿ ಸವಿನಗೆಯೊಂದು ತೋರಿತು. ಮೆಲ್ಲನೆ ಆಕೆ ಆಡಿದಳು "ತಂದೆ ಬೇನೆಯವರು, ಈ ಊರಲ್ಲಿ ಬೇಕೆನಿಸುವ ಸಾಮಾನು ದೊರೆಯುವದಿಲ್ಲ ಇಚ್ಛೆ ಇದ್ದರೂ ನಿರುಪಾಯವಾಗಿದೆ.'

"ನಿಮಗೆ ಸಾಮಾನು ಸಿಕ್ಕುವದಿಲ್ಲ ಎಂಬುದನ್ನು ನಾವಂತೂ ಈ ವ್ಯವಸ್ಥೆ ನೋಡಿ ಒಪ್ಪಲಾರವು "

ದುಲಾರಿಯ ಮುಖ ಕೆಂಪೇರಿತು. ಒಂದು ಸಲ ಕೃಷ್ಣಚಂದ್ರನನ್ನು ನೋಡಿ, ಮರುಕ್ಷಣದಲ್ಲಿಯೇ ಮೋರೆ ಕೆಳಗೆ ಮಾಡಿ ಕೇಳಿದಳು. "ತಾವು ನನಗೆ ನೀವು, ಎಂದೇಕೆ ಹೇಳುವಿರಿ?"

ಕೃಷ್ಣಚಂದ್ರನಿಗೂ ಈ ವಿಚಾರ ಬಂದಿರಲಿಲ್ಲವೆಂದಲ್ಲ. ಆದರೆ

ಕೇಶವನಷ್ಟು ದುಲಾರಿಯ ಪರಿಚಯ ಇವನಿಗಿರಲಿಲ್ಲ. ಅಲ್ಲದೇ ವಯಸ್ಕಳಾದ ದುಲಾರಿಯೊಡನೆ ಹಾಗೆಲ್ಲ ಮಾತಾಡುವದು ಯೋಗ್ಯವೂ ಅಲ್ಲವೆಂದು ಅವನ ಭಾವನೆ

"ಇದರಲ್ಲಿ ನೀವು ಬೇರೆ ಏನೂ ತಿಳಿದುಕೊಳ್ಳಬಾರದು. ಏಕವಚನ ಉಪಯೋಗಿಸಲು, ನನಗೆ ಯಾವಾಗ ಸಂಕೋಚವೆನಿಸುವದಿಲ್ಲವೋ, ಆಗ ನಾನೇ ಸ್ವತಃ "ನೀನು ಎಂದು ಹೇಳುತ್ತೇನೆ ಆಯಿತೋ ?"

"ತಮಗೆ ಚಹ ತರಲಿಯಾ?"

"ಕೇಶವ ಇನ್ನೂ ಎದ್ದಿಲ್ಲ ಎದ್ದಕೂಡಲೇ ಇಬ್ಬರೂ ಕೂಡಿಯೇ ಕುಡಿಯುತ್ತೇವ"

ಮೇಲೆ ಹೋಗಿ ಕೃಷ್ಣಚಂದ್ರ ನೋಡಿದಾಗ ಕೇಶವನಿಗೆ ಎಚ್ಚರವಾಗಿದ್ದಿತು ಆದರೆ ಹಾಸಿಗೆ ಬಿಟ್ಟಿರಲಿಲ್ಲ ಹಾಗೇ ಹೊರಳಾಡುತ್ತಿದ್ದನು.

ಕೃಷ್ಣಚಂದ್ರನನ್ನು ನೋಡಿ ಕೇಳಿದ "ರಾತ್ರಿ ಎಲ್ಲ ಎಚ್ಚರವಾಗಿಯೇ ಇದ್ದೆಯೋ ?"

"ರಾತ್ರಿಯೆಲ್ಲ ಎಚ್ಚರವಾಗಿದ್ದವರು ಇಷ್ಟು ಬೇಗ ಏಳುವರೋ ? ಎಚ್ಚರದಿಂದ ಇದ್ದವರು ಮಾತ್ರ, ಇಷ್ಟು ಹೊತ್ತೇರಿದರೂ ಹಾಸಿಗೆಯಲ್ಲೇ ಬಿದ್ದುಕೊಂಡಿರುತ್ತಾರೆ"

"ಚನ್ನಾಗಿದೆ" ಎಂದವನೇ ಕೇಶವ ನಗುತ್ತ ಎದ್ದು ಕುಳಿತ ನಂತರ ಒಂದೆರಡೇನೋ ಮಾತಾಡಿ ಹೊರಗೆ ಹೋದನು.

ಸಿಲಿಯಾಳ ತಾಯಿ ಜೋಳ ಬೀಸುತ್ತಿದ್ದಳು ಕೇಶವ ಒಂದದ್ದು ನೋಡಿ ಹೇಳಿದಳು, "ಮಗಳೇ, ಬಾಬು ಎದ್ದಿರುತ್ತಾರೆ"

ಅಡಿಗೆ ಮನೆಯಲ್ಲಿ ದುಲಾರಿ ಹಾಲು ಕಾಯಿಸುತಿದ್ದಳು ಹೊರಗೆ ಬಂದು ಕೇಶವನಿಗಂದಳು "ರಾತ್ರಿ ನಿದ್ರೆ ಸರಿಯಾಗಿ ಹತ್ತಿತೋ?"

ನಗುತ್ತ ತಲೆ ಹಾಕಿ ಕೇಶವ ನುಡಿದ "ಅಖಂಡ ರಾತ್ರಿ ನಿನ್ನ ವ್ಯವಸ್ಥೆಯಲ್ಲಿ ಕೊರತೆ ಏನೂ ಇರಲಿಲ್ಲ ದುಲಾರೀ"

ಆದರೂ ಕೇಶವ ಮತ್ತು ಕೃಷ್ಣಚಂದ್ರರ ಯಥೋಚಿತ ಸತ್ಕಾರವಾಗಲಿಲ್ಲವೆಂದು, ದುಲಾರಿ ಮನದಲ್ಲಿಯೇ ಮುದುರಿಕೊಂಡಿದ್ದಳು ತಂದೆಯಂತೂ ರೋಗಿ ಅಡ್ಡಾಡುವಂತಿಲ್ಲ ಬಂದ ಅತಿಥಿಗಳ ಭಾರವನ್ನು

ತೆಗೆದುಕೊಳ್ಳುವವರು ಮನೆಯಲ್ಲಿ ಮತ್ತಾರೂ ಇರಲಿಲ್ಲ ಅತಿಥಿಗಳೆಂದರೆ ಲಖನೌ ಶಹರದಲ್ಲಿರುವ ಸಿರಿವಂತರು ಇವೆಲ್ಲ ವಿಚಾರ ಆಕೆ ಮಾಡಿದ್ದಳು ಎಲ್ಲದಕ್ಕೂ ಕಠಿಣವಾದುದೆಂದರೆ ಆ ಯುವಕ ಅತಿಥಿಗಳ ಎಲ್ಲ ಸತ್ಕಾರ ತಾನೇ ಮಾಡಬೇಕಾಗಿಬಂದುದು ಓರ್ವ ಷೋಡಶ ವರ್ಷದ ಕಿಶೋರಿ ಇಬ್ಬರು ಅವಿವಾಹಿತ ತರುಣರ ಎದುರಿನಲ್ಲಿ ಮೈಮರೆತು, ನಾಚಿಕೆ ಸರಿಸಿ ಕಾರ್ಯ ಮಾಡಿ ಪಾರಾಗುವದೆಂದರೆ ಸುಲಭ ಮಾತಲ್ಲ ಅವರ ಅವರ ಎದುರಿಗೆ ಹೋಗುವದು, ಮಾತುಕತೆಯಾಡುವದನ್ನು, ಮಾಡದೇ ಕಾರ್ಯ ಸಾಗುವಂತಿರಲಿಲ್ಲ ಸರಿಯಾಗಿ ಸತ್ಕಾರ ಆಗಿದ್ದರೂ ಆಕೆಗೇನೋ ಸಂಕೋಚ ಕಾರಣ ದುಲಾರಿಯಾಡಿದಳು "ನಮ್ಮಲ್ಲಿ ಯಾತರ ವ್ಯವಸ್ಥೆ ?—ನಿಮಗೆ ಬಹಳ ತೊಂದರೆಯಾಯಿತು"

ದುಲಾರಿಯ ಮಾತು ಕೇಳಿ ಕೇಶವನ ತುಟಿಗಳಲ್ಲಿ ಶಾಂತ ಸ್ನಿಗ್ಧನಗೆ ಚಕ್ಕನೆ ಮಿಂಚಿತು ಅವನು ತಲೆ ಅಲ್ಲಾಡಿಸಿ ಇಲ್ಲವೆಂದು ಸೂಚಿಸುತ್ತ ಗರ್ಜಿಸಿ ಹೇಳಿದನು "ಇಲ್ಲ ನನಗೇನೂ ಕಷ್ಟವಾಗಿಲ್ಲ ನಿನ್ನೆಯಿಂದ ನಿನ್ನನ್ನು ನೋಡಿ, ನನ್ನ ಅನುಭವಕ್ಕೆ ಬರುತಿರುವ ಆನಂದವು, ಮಾತಿಗೆ ದೂರವಾಗಿದೆ ಬಹುಶಃ ನಿನಗೆ ನೆನಪಿರಲಿಕ್ಕಿಲ್ಲ ನನಗೆ ಯಾರೂ ಒಡಹುಟ್ಟಿದ ತಂಗಿ ಇಲ್ಲ ಒಬ್ಬಾಕೆ ಅಜ್ಜಿಯ ಮಗಳು ಇದ್ದಾಳ ಲಖನೌದಲ್ಲಿ ತನ್ನ ಅತ್ತೆ ಮನೆಯಲ್ಲಿರುತ್ತಾಳೆ ಯಾವಾಗಾದರೊಮ್ಮೆ ಅಲ್ಲಿ ಹೋದರೂ ಈ ತರದ ಆನಂದ ನನಗೆ ಸಿಕ್ಕುವದಿಲ್ಲ ಯಾವ ರಸಾಸ್ವಾದಕ್ಕೆ ನಾನು ಇಷ್ಟು ದಿನ ವಂಚಿತನಾಗಿದ್ದೆನೋ, ಅದನ್ನು ನಾನು ನಿನ್ನಿಂದ ಅನುಭವಿಸ ತೊಡಗಿದ್ದೇನೆ ಈ ರಸವು ಸ್ವಾದುವಾಗಿದೆ ಇದರಲ್ಲಿ ಇನ್ನಾವ ರಸವೂ ಕೂಡಿಲ್ಲ ಯಾವಾಗ ನೀನು ನನ್ನ ತಂಗಿಯಾದೆಯೋ, ಆಗಿನಿಂದ ನನ್ನ–ನಿನ್ನ ಸಂಬಂಧ ಕೇವಲ ಪೃಥವಾದುದಾಯಿತು ಇಷ್ಟೇ ಅಲ್ಲ ಅದು ಮಧುರ-ಸ್ನೇಹದ್ದೂ ಸರಿಯೇ-ಬಲ್ಲೆಯಾ ?"

ತಲೆತಗ್ಗಿಸಿ ದುಲಾರಿ ಅಷ್ಟೊತ್ತಿನವರೆಗೆ, ಕೇಶವನ ಅದ್ಭುತ ಮಧುರ ಮಾತುಗಳನ್ನು ಕೇಳುತ್ತಿದ್ದಳು. ಆಕೆಗೆ ಆಗ ಅನುಭವ ಬರತೊಡಗಿದುದೇನೆಂದರೆ–ಇವು ಬರಿ ಶಬ್ದಗಳಲ್ಲ ತೇಜವೋ, ಶಕ್ತಿಯೋ, ತಂತಾನೆ ಆವಳ ಅಂತಃಕರಣದಲ್ಲಿ ಪ್ರವೇಶಮಾಡತೊಡಗಿದ್ದಿತು ಪುಲಕ ಮತ್ತು ಆವೇಶದಿಂದ ದುಲಾರಿಯ ಶರೀರ, ತುಸು ಕಂಪಿಸ ತೊಡಗಿತ್ತು

ಕೇಶವನ ಮಾತು ಮುಗಿದ ಕೂಡಲೇ, ಆಕ ತಲೆ ಎತ್ತಿ ನುಡಿದಳು "ತಿಳಿದೆ" ಆಕೆಯ ಮುಖ ಕೆಂಪಡರಿತ್ತು ತುಟಿಗಳಲ್ಲಿ ನಾಚಿಕೆಯ ಮೃದು ಹಾಸ್ಯರೇಖೆ ಮೇಲೆದ್ದು ಬಂದಿತ್ತು ಸಾವಕಾಶ ಹೇಳಿದಳು "ಇಂದಿನಿಂದ ನೀವು ನನ್ನ ಅಣ್ಣ"

ಸ್ನೇಹಪೂರ್ವಕವಾಗಿ ಕೇಶವ ಆಕೆಯ ತಲೆಯಮೇಲೆ ಕೈಯಾಡಿಸಿದನು. ಸಿಲಿಯಾಳತಾಯಿಯ ಹೃದಯ ಎಷ್ಟು ಸರಳವೆಂದು ಕಾಣುತಿದ್ದಿತೋ, ಮನಸ್ಸು ಅಷ್ಟೇ ವಕ್ರವಾಗಿತ್ತು ಯಾವ ಮಾತಾದರೂ ಸಹಜವಾಗಿ ಆಕೆಗ ತಿಳಿಯುತ್ತಿರಲಿಲ್ಲ ಕೇಶವ–ಮತ್ತು ದುಲಾರಿಯರು ಮಾತಾಡುತ್ತಿರುವದನ್ನು ದೂರದಿಂದ ನೋಡಿದ ಆಕೆ ಮನಸ್ಸಿನಲ್ಲಿ ಮಾಡಿಕೊಂಡ ಕಲ್ಪನೆ ಸರ್ವಥಾ ವಿಪರೀತವೆನಿಸುವಂಥದು ಉತ್ಸಾಹವಶಳಾದ ಆಕೆಯಿಂದ ಬೀಸುವ ಕೆಲಸ ಸಹ ಸರಿಯಾಗಿ ನಡೆದಿರಲಿಲ್ಲ ಕೇಶವನು ಅಲ್ಲಿಂದ ಹೋಗುವದೇ ತಡ, ದುಲಾರಿಯ ಬಳಿ ಒಂದೇ ಬಿಟ್ಟಳು "ಮಗಳೇ, ಇವರೆಯೋ ನಿನ್ನವರಾಗುವವರು?"

ದುಲಾರಿಯ ಮುಖ ಕೆಂಪಗಾಯಿತು ತೀವ್ರತೆಯಿಂದುಸುರಿದಳು "ಛಿಃ ಇವರು ನನ್ನ ಅಣ್ಣಂದಿರಾಗಬೇಕು"

"ಇವರೆಲ್ಲಿಯ ಅಣ್ಣ, ಅನ್ನಾ?"

ತುಸು ಹಿಂದೆಳೆಸಿ ದುಲಾರಿ ನುಡಿದಳು "ದೂರದ ಸಂಬಂಧ"

ಈ ಉತ್ತರದಿಂದ ಸಂತುಷ್ಟಳಾಗದೆ ಸಿಲಿಯಾಳ ತಾಯಿ ಕೇಳಿದಳು "ಗೋತ್ರಜರೇನೂ ಅಲ್ಲವಷ್ಟೇ" ಸಿಲಿಯಾಳತಾಯಿ, ಕೇಶವನು ಇವರ ಗೋತ್ರದವನಲ್ಲವೆಂದು ಹೇಗೆ ತಿಳಿದುಕೊಂಡಿದ್ದಳೋ ಹೇಳಲು ಸಾಧ್ಯವಿಲ್ಲ

"ಅಲ್ಲ"

ಆಗ ಸಿಲಿಯಾಳ ತಾಯಿ ತುಸುವೇಳೆ ಸುಮ್ಮನೆ ನಿಂತಳು ಒಮ್ಮೆಲೇ ಹೇಳಿದಳು ನಿನ್ನ ಮನೆಯವರಾಗುವಹಾಗಿದ್ದರೆ ಚನ್ನಾಗಿತ್ತು"

ವ್ಯಗ್ರಭಾವದಿಂದ ದುಲಾರಿ ಆಡಿದಳು "ಛಿಃ, ಕಕ್ಕೀ ಹಾಗನ್ನಬೇಡ ನಿನಗೆ ಶಾಪ ತಟ್ಟೀತು"

ಸಿಲಿಯಾಳ ತಾಯಿ ಪಾಪಪುಣ್ಯದ ವಿಚಾರಮಾಡಲು ಸಮರ್ಥಳಾಗಿರಲಿಲ್ಲ. ಒಂದು ಕ್ಷಣ ಮಾತ್ರ ಸುಮ್ಮನ ನಿಂತುಕೊಂಡಳು. ನಂತರ ಬೀಸ ತೊಡಗಿದಳು.

## (೮)

ಐದು ದಿನಗಳಾದವು. ಪಂಡಿತ ರಾಮುಚರಣರು ಲಖನೌಕ್ಕೆ ಬಂದು ಹಜರತಗಂಜದ ಮನೆಯಲ್ಲಿ ವಾಸಿಸಿದ್ದಾರೆ ರಾಮುಚರಣರಿಗೆ ಅನುಕೂಲ್ಯ ಕಲ್ಪಿಸಿಕೊಡುವುದರಲ್ಲಿ ಕೇಶವನು ಎಷ್ಟೋ ದಿನ ನಿಮಗ್ನನಾಗಿದ್ದನು ಈಗ ಎಲ್ಲವೂ ಸರಿಯಾದ ಕಾರಣ ಅಲ್ಲಿಗೆ ದಿನಾಲು ಹೋಗುವ ಅವಶ್ಯಕತೆ ಇರಲಿಲ್ಲ. ಅಗತ್ಯವಾದ ಪದಾರ್ಥಗಳನ್ನೆಲ್ಲ ಅಣಿ ಮಾಡಿಕೊಟ್ಟಿದ್ದಾನೆ ನೌಕರ–ಚಾಕರರು ತಂತಮ್ಮ ಕೆಲಸಬೊಗಸೆ ಅರಿತುಕೊಂಡಿದ್ದಾರೆ. ರಾಮು ಚರಣರ ಚಿಕಿತ್ಸಾಭಾರ ಒಬ್ಬ ಅನುಭವೀ ಡಾಕ್ಟರರಿಗೆ ಒಪ್ಪಿಸಲ್ಪಟ್ಟಿದೆ ಅಲ್ಲದೆ ಎಲ್ಲದರ ಮೇಲ್ವಿಚಾರಕ್ಕೆ ರಾಮುಚರಣರ ಮಗಳು ಕುಶಲ ದುಲಾರಿ ಇದ್ದಾಳೆ. ಹೀಗಿರುವಾಗ ಅವರ ಮನೆಗೆ ಹೋಗುವದೂ, ತಿರುಗಾಡ ಹೋಗುವದೂ ಸಮಾನವಾಗಿದ್ದವು. ಎಂದು ವಿಚಾರಿಸಿ ಬೆಳಗಿಸಲ್ಲೆದ್ದು ಕೇಶವನು, ಓದುವ ಕೊಟಡಿಯಲ್ಲಿ ಕುಳಿತು, ವ್ಯಸ್ತವಾದ ತನ್ನ ಮನಸ್ಸನ್ನು ಅಭ್ಯಾಸದಲ್ಲಿ ತೊಡಗಿಸಿದ್ದಾನೆ. ಅಷ್ಟರಲ್ಲಿ ಅನಂತ ಒಳಗ ಬಂದು ಖುರ್ಚಿಯ ಮೇಲೆ ಕುಳಿತುಕೊಂಡನು.

ಒಂದೆರಡು ಆಚೆ ಈಚೆಯ ಮಾತು ನಡೆದಮೇಲೆ ಅನಂತನೆಂದ "ಕೇಶವಾ! ನಿಮ್ಮ ಅತ್ತಿಗೆ ನನ್ನನ್ನು ಬಹಳ ಪೇಚಿನಲ್ಲಿ ಹಾಕಿಬಿಟ್ಟಿದಾಳಲ್ಲ.'

ನಸುನಕ್ಕು ಕೇಶವನೆಂದ. ''ಇದೇನು ಹೊಸ ಮಾತು ಅಲ್ಲ, ಅಣ್ಣಾ ಎಂದೋ ಅದು ಆಗಿಹೋಗಿದೆ." ಬಹುಶಃ ಕೇಶವನು ಮಾತಿನ ಸಂದರ್ಭ ಅರಿತಿದ್ದನೇನೋ?

"ಈಸಲ ಹೆಚ್ಚಿನದೊಂದು ಪ್ರಸಂಗ–ನಿನ್ನ ನೆರವಿಲ್ಲದೆ ಬಗೆಹರಿಯು ವಂತಿಲ್ಲ

ಪೆನ್ಸಿಲು ತಿರುಗಿಸುತ್ತ ಕೇಶವ ನುಡಿದ. "ಹೇಳು ಅದೇನು ?

"ಮಾಲತಿಯ ವಿವಾಹಕ್ಕಾಗಿ ನಿನ್ನನ್ನು ಆಗ್ರಹ ಪಡಿಸಲಿಕ್ಕೆ ಹೇಳಿದ್ದಾಳೆ"

ಪ್ರಸನ್ನಮುಖನಾದ ಕೇಶವನಾಡಿದ. "ಅದಂತೂ ಸರಿ. ಇದಕಾಗಿ ಆಗ್ರಹವೇಕೆ ? ನಾನು ಈ ದಿನವೇ ವರ ಶೋಧ ಮಾಡುತ್ತೇನೆ."

ಅನಂತ ಹಿಂದು ಮುಂದಾಗಿ ಹೇಳತೊಡಗಿದ 'ಹಾಗಲ್ಲ ಆಕೆಯ ಅಭಿಪ್ರಾಯವೆಂದರೆ ನೀನೇ ಮಾಲತಿಯನ್ನು ಲಗ್ನವಾಗಬೇಕು."

ನಸುನಗುತ್ತ ಕೇಶವ ಪನ್ಸಿಲ ತಿರುಗಿಸ ಹತ್ತಿದ "ಅತ್ತಿಗೆಗೆ ಇದೊಂದು ಹುಚ್ಚೇನೋ? ಆಕೆ ಸ್ವತಃ ತಿಳಿಸುದುದೇ ನನಗೆ ಸಾಕಾಗಿತ್ತು. ಬೇರೆಯವರ ಮುಖಾಂತರ ಹೇಳಿಸುವದೇಕೋ? ನಾನು ಆಕೆಯನ್ನು ವಂದನೀಯಳೆಂದು ಭಾವಿಸಿಕೊಂಡಿದ್ದೇನೆ"

ಮನದಲ್ಲಿ ಪ್ರಸನ್ನನಾಗಿ ಅನಂತ ಹೇಳಿದ 'ಅದನ್ನೆಲ್ಲ ಆಕೆ ಬಲ್ಲಳು ಈಗ ಆ ಮಾತಿಲ್ಲ ಈಗ ತಿಳಿ. ನಾನೂ ನಿನ್ನ ಅಭಿಪ್ರಾಯ ಕೇಳಬೇಕಾಗಿದೆ'

ಸಹಜ ಮಾತಿನಂತೆ ಕೇಶವ ನುಡಿದನು 'ಅತ್ತಿಗೆ ನಿನಗೆ ತಿಳಿಸಿರುವದಕ್ಕಿಂತ ಹೆಚ್ಚಿಗೆ ಮತ್ತೇನೂ ನಾನು ಹೇಳುವ ಅವಶ್ಯವಿಲ್ಲ ಅದಕ್ಕೆ ನನ್ನ ಒಪ್ಪಿಗೆ ಇಲ್ಲ

ಅಪ್ರಸನ್ನತೆಯಿಂದ ಅನಂತ ನುಡಿದ "ಮಾಲತಿಯ ಮನಸ್ಸಿಗೇ ಬರದಿದ್ದರೆ ನಾನು ಏನು ಹೇಳುವದಕ್ಕೂ ಇಚ್ಛಿಸುವದಿಲ್ಲ"

ತಲೆ ಎತ್ತಿ ಕೇಶವ ಹೇಳತೊಡಗಿದನು. "ನೋಡಣ್ಣಾ. ನೀನು ಕೇಳುವ ಮಾತೇ ಈ ಪ್ರಸಂಗದಲ್ಲಿ ಏಳುವದಿಲ್ಲ ರೂಪ ಮತ್ತು ಗುಣಗಳಲ್ಲಿ ಮಾಲತಿ ನನಗೆ ಒಪ್ಪಿಗೆ ಇಲ್ಲವೆಂದು ನಾನಂದರೂ, ನಿನಗೆ ವಿಶ್ವಾಸವೆನಿಸುವದಿಲ್ಲ ಆದರೂ ನಾನು ಏಕೆ ಒಪ್ಪಿಕೊಳ್ಳುವದಿಲ್ಲವೆಂಬದನ್ನು ತಿಳಿಯಬೇಕೆಂದು ನೀನು ಅಪೇಕ್ಷಿಸುವೆ ನಾನು ಒಪ್ಪದ ಕಾರಣ ಅನೇಕವಾಗಿವೆ. ಒಂದೆಂದರೆ— ಇಷ್ಟು ದಿನಗಳವರೆಗೆ ಉಂಟಾದ ಸಂಬಂಧವನ್ನು ಬೇರೊಂದು ರೀತಿಯಿಂದ ಒಮ್ಮೆಲೇ ಬದಲಿಸಬೇಕಾಗುವದು ಎರಡನೆಯ ಕಾರಣ ಹೇಳಿದರೆ ನಿನಗೂ ನಗೆ ಬಂದೀತು ಹೆಂಡತಿಯ ತಂಗಿ ನಾದಿನಿಯಾಗುತ್ತಾಳೆ ತಮ್ಮ ಷಡ್ಡಕನಾಗುತ್ತಾನೆ ಬೇಕಾದರೆ ತುತ್ತು ಮಾಡಿ ಮಾಲತಿ ನಿನಗೆ ಉಣಿಸಲು ಈಗ ಶಕ್ಯವಿದೆ. ನಾಳೆ ನಿನ್ನ ನೆರಳು ಕಂಡೊಡನೆ ಆಕೆಗೆ ಗಂಗಾ ಸ್ನಾನಕ್ಕೆ ಹೊರಡಬೇಕೆಂದೆನಿಸೀತು" ಇಷ್ಟು ಹೇಳಿ ಕೇಶವ ನಗಲಾರಂಭಿಸಿದನು

"ಇವೆಲ್ಲ ಅಷ್ಟು ಸಮಂಜಸ ವಿಚಾರಗಳಲ್ಲ ಮತ್ತೇನಾದರೂ ಕಾರಣಗಳುಂಟೋ?"

ಬೇರೊಂದು ಕಾರಣ, “ ಇದನ್ನು ನಾನು ಮೊದಲೇ ಹೇಳ ಬೇಕಾಗಿತ್ತು ಲಗ್ನ ಮಾಡಿಕೊಳ್ಳುವ ಇಚ್ಛೆಯೇ ನನಗಿಲ್ಲ ”

“ಇನ್ನೇನು ?”

‘‘ನನ್ನ ವಿಚಾರವೆಂದರೆ—ಇಂಥ ಸಂಬಂಧಗಳನ್ನು ಮಾಡುವದು ಯೋಗ್ಯವಲ್ಲ ಯಾವ ಸಂಬಂಧದಿಂದ ಆತ್ಮೀಯರ ಸಂಖೆ ಬೆಳೆಯುವ ದಿಲ್ಲವೋ ಅವು ವಿಚಾರಿಸಿ ನೋಡು. ಬೇರೊಂದು ಕಡೆಗೆ ಮಾಲತಿಯ ಲಗ್ನವಾದರ, ನಾನು ನಿನ್ನ ತಮ್ಮನಾಗಿ ಉಳಿದೇ ಉಳಿಯುತ್ತೇನೆ ಮಾಲತಿ ಗಂಡ ನಿನ್ನ ಷಡ್ಡಕನಾಗುತ್ತಾನೆ ನನ್ನೊಡನೆ ಆಕೆಯ ಲಗ್ನವಾದರೆ?— ಅಲ್ಲವೇ ?

ಅದೆಷ್ಟೋ ವೇಳೆ ಅನಂತ ಕೇಶವನ ಮೋರೆ ನೋಡೇ ನೋಡಿದ ಆಮೇಲೆ ನುಡಿದನು ‘ಇವೆಲ್ಲ ಬಾಲಿಶ ಮಾತುಗಳು. ನನಗೇನೂ ತಿಳಿಯ ಲಾರವು. ನೀನೇನೋ, ನಿನ್ನ ಅತ್ತಿಗೆ ಏನೋ? ನೋಡಿಕೊಳ್ಳಿರಿ ” ಎಂದವನೇ ಹೊರಡಲನುವಾದನು

ಕೇಶವನೆಂದ ‘ಅಣ್ಣಾ, ಒಂದು ಮಾತು ಅತ್ತಿಗೆಗೆ ಹೇಳಿಬಿಡು. ಅದರಿಂದ ನಾನೂ ಮಾಲತಿಯ ಹಿತಚಿಂತಕನೆಂದು ಆಕ ತಿಳಿಯಲಿ. ಒಂದು ವೇಳೆ ಮಾಲತಿಯ ಲಗ್ನ, ನನಗಿಂತ ಕಡಿಮೆ ಸ್ಥಿತಿ ಯೋಗ್ಯತೆಯ ವರನ ಸಂಗಡ ಆಗುವದೆಂದು ಕಂಡುಬಂದರೆ, ಆ ಲಗ್ನ ಮುರಿದು ನಾನು ಸ್ವತಃ ಲಗ್ನವಾಗುತ್ತೇನೆ ಆದರೆ ಸತ್ಪಾತ್ರಗಳಿಗೆ ಏನೂ ಕೊರತೆ ಇಲ್ಲವಲ್ಲ ನೀನೇನಾದರೂ ವೆಚ್ಚದ ವಿಚಾರದಿಂದ ಮನೆಯಲ್ಲಿಯೇ ಯೋಚಿಸಿದ್ದೀ. ಆದರೆ ನೀನು ಒಂದು ಕಾಸೂ ಕೊಡಬೇಕಾಗಿಲ್ಲ ನಾನೂ ಮತ್ತು ಅತ್ತಿಗೆ ಅದನ್ನು ನೋಡಿಕೊಳ್ಳುತ್ತೇವೆ ಮಾಲತಿಯ ಲಗ್ನ ಮಾಡಿ, ತಂದೆ ಲಗ್ನದ ಅಪೇಕ್ಷೆ ಪೂರ್ಣ ಮಾಡಿಕೊಳ್ಳಬೇಕೆಂದಿದ್ದೇನೆ. ಮಾಲತಿ, ನಾನು ಪರಾಶ್ರಿತಳೆಂದು ತಿಳಿಯದಂತೆ ಲಗ್ನ ರೀತಿಯಿಂದ ಮಾಡುತ್ತೇವೆ’

ನಗುತ್ತ ಅನಂತ ಹೇಳಿದನು ‘‘ಹುಚ್ಚರು ಆಸ್ಪತ್ರೆಯಲ್ಲೇ ಇರುವ ರೆಂದುಕೊಂಡಿದ್ದೆ ಹೊರಗೂ ಇರುತ್ತಾರೆ ”

ಅನಂತ ಹೊರಟುಹೋದನು.

ನಗುನಗುತ್ತ ಕೇಶವ ಯಾವದೋ ಪುಸ್ತಕ ಓದಲಾರಂಭಿಸಿದನು.

## (೯)

ಇದಾದ ತರುವಾಯ ಮೂರು ದಿನ ಕಳೆದವು. ಕೇಶವನಿಗೆ ರಾಮಚರಣರ ಮನೆಗೆ ಹೋಗುವದು ಆಗಿರಲೇ ಇಲ್ಲ. ಇವತ್ತು ಬೆಳಗಿನಲ್ಲಿಯೇ ಮಧ್ಯಾಹ್ನ ಹೋಗುವದೆಂದು ನಿಶ್ಚಯ ಮಾಡಿಕೊಂಡ. ದರ್ಶನ ಶಾಸ್ತ್ರದ ಒಂದು ಪುಸ್ತಕ ತೆರೆದು ಓದುತ್ತ ಕುಳಿತಿರುವಾಗ ಬಾಗಿಲಿನಿಂದ ದನಿ ಬಂದಿತು "ಕೇಶವಣ್ಣಾ"

ಹಿಂತಿರುಗಿ ಸ್ನೇಹದಿಂದ ಹೇಳಿದ 'ಬಾ ಒಳಗೆ'

ಬಾಗಿಲು ತೆರೆದು ಮಾಲತಿ ಹಾಲಿನ ಲೋಟ ಹಿಡಿದು ಒಳಗೆ ಬಂದಳು. ಆ ಶೀತ ಕಾಲದಲ್ಲಿ ಬಿಸಿ ಹಾಲಿನಿಂದ ಉಗಿ ಎದ್ದು, ಮಾಲತಿಯ ಮೋರೆಯ ಸುತ್ತ ಮಂಜು ಮುಸುಕಿದ ಹಾಗಿತ್ತು.

ನಗುತ್ತ ಕೇಶವ ನುಡಿದ 'ನೀನು ಹಾಲು ತಂದೆ, ಮಾಲತೀ ಕಾಳಿ ಎಲ್ಲಿದ್ದಾಳೆ? ಕಾಳಿಯು ಮನೆಯ ದಾಸಿ.

"ನಿನ್ನೆ ರಾತ್ರಿ ಆಕೆಗೆ ಜ್ವರ ಬಂದಿದೆ. ಇನ್ನೂ ಮೇಲಕ್ಕೆದ್ದಿಲ್ಲ"

"ಹಾಗಾದರೆ ನೀನೇ ಕಾಸಿದೆಯೋ?"

"ಹೂ"

ಲೋಟವನ್ನು ಕೈಯಿಂದೆತ್ತಿ ಕೇಶವ ಒಂದು ಗುಟುಕು ಕುಡಿದನು. ಮಾಲತಿ ಕೇಳಿದಳು

'ಸಕ್ಕರ ಹೆಚ್ಚಾಗಿರುವದೇ?"

"ಇಲ್ಲ" ಕೇಶವ ಹೇಳಿದ "ಒಂದು ವೇಳೆ ಹೆಚ್ಚಾಗಿದ್ದಿತೆಂದು ತಿಳಿ. ಅದರಿಂದಾಗುವ ನಷ್ಟವೇನು? ಮನುಷ್ಯ ಜೀವನವೇನು ಅಷ್ಟು ಹೆಚ್ಚಿನದೇ? ಹಾಲಿನಲ್ಲಿ ಸಕ್ಕರೆ ಹೆಚ್ಚಾಗಿದೆ. ಅಥವಾ ಎಲೆಗೆ ತುಸು ಸುಣ್ಣ ಕಡಿಮೆಯಾಗಿದೆ. ಆದರೆ ಅದನ್ನು ಗ್ರಹಿಸಲಾರನೇ? ನೋಡಲಿಕ್ಕೆ ಇವೆಲ್ಲ ಸಣ್ಣ ಮಾತು. ವಿಚಾರಕ್ಕೆ ಮಾತ್ರ ಸಣ್ಣವಲ್ಲ. ಇಂಥ ಉಪಾದಾನಗಳಿಂದ ಕೂಡಿ ನಮ್ಮ ಚರಿತ್ರ ಸಿದ್ಧವಾಗುತ್ತದೆ. ಈಗ ಈ ಸಕ್ಕರೆಯಲ್ಲಿ ಹಾಲಿನ ಯಾವ ಸಾಧಾರಣವಾದ ರೂಪ, ತೋರುತಿರುವದೋ, ಅದರದೇ ವಿರಾಟ ರೂಪವೆಂದರೆ—ಅನ್ನ ವಸ್ತ್ರಾದಿಗಳನ್ನು ನೋಡಬಹುದು. ಮನುಷ್ಯನಲ್ಲಿ

ಉತ್ಪನ್ನವಾಗಲಿರುವ ಕ್ರಿಮಿಗಳಿಂದಲೇ ರೋಗ-ರುಜಿನಗಳುಂಟಾಗುವವು. ಇದು ನಿಶ್ಚಿತವೆಂದು ತಿಳಿ. ಅವುಗಳ ಉತ್ಪತ್ತಿ ಹೊರಗಿನಿಂದಾದುದಲ್ಲ ಮಾನವ ತನ್ನಲ್ಲಿಯೇ ಎಲ್ಲ ಹುಟ್ಟಿಸಿಕೊಳ್ಳುತ್ತಾನೆ ಕಾರಣ ತನ್ನ ಹಿತದ ದೃಷ್ಟಿಯಿಂದ ಮನುಷ್ಯನ ಕರ್ತವ್ಯವೆಂದರೆ— ತಾನೇ ತನ್ನನ್ನು ನಿಗ್ರಹಿಸಿ ಕೊಳ್ಳಬೇಕು ತನ್ನಲ್ಲಿ ದುಷ್ಟ ಕ್ರಿಮಿಗಳು ಜನಿಸದಂತೆ ನೋಡಿಕೊಳ್ಳ ಬೇಕು ಹೀಗೆ ನೋಡದಿದ್ದರೆ ಬೇನೆ ಬೀಳಬೇಕಾಗುವದು. ನಾನೇನು ಇದನ್ನೆಲ್ಲ ಹೇಳಿದೆನೋ ಅದರ ಅಭಿಪ್ರಾಯ ನೀನು ಕೊಟ್ಟ ಹಾಲಿನಲ್ಲಿ ಸಕ್ಕರೆ ಮಿಕ್ಕಿದೆ ಎಂದೇನೂ ಅಲ್ಲ ನಿನ್ನೆ ಸಾಯಂಕಾಲ ಅತ್ತಿಗೆಯ ಸಂಗಡ ಕೆಲವು ಮಾತಾಗಿದ್ದವು. ಈ ಹಾಲು ಸಕ್ಕರೆ ನೆಪದಿಂದ ಅವೆಲ್ಲ ನೆನ ಪಾದವು ಆದರ ಇವೆಲ್ಲ ಅತ್ತಿಗೆ ಮಾತಿಗೆ ಸಂಬಧಿಸಿದವುಗಳೇ ಮಾತ್ರ ಅಲ್ಲ ನನ್ನ ಅತ್ತಿಗೆ ಮಾತುಗಳು ನಿನಗೆ ಗೊತ್ತಿರಲಿ-ಗೊತ್ತಾಗದಿರಲಿ ನನ್ನ ಮಾತಿನ ಭಾವವನ್ನು ನೀನು ಗ್ರಹಿಸು. ಅವುಗಳನ್ನು ಜೀವನದಲ್ಲಿ ಇಳಿಸುವ ಯತ್ನ ಮಾಡು ನಿನಗಾಗಿ ನೀನೇ ದುಃಖ ಮತ್ತು ದುಷ್ಟಕ್ರಿಮಿಗಳನ್ನು ಸೃಷ್ಟಿಸಿಕೊಳ್ಳಬೇಡ

ಹಾಲು-ಸಕ್ಕರೆ ವಿಷಯದ ಉತ್ತರಕ್ಕೆ ಇಷ್ಟು ದೊಡ್ಡ ಉಪನ್ಯಾಸ-ಉಪದೇಶ ಕೇಳಲಿಕ್ಕ ಮಾಲತಿ ಸಿದ್ಧಳಿರಲಿಲ್ಲ. ಆಕೆ ಇದರ ರಹಸ್ಯ ತಿಳಿಯದೇ ಹಾಗೆ ನೋಡುತ್ತ ನಿಂತಿದ್ದಳು.

ಮಾಲತಿಯ ಮಾನಸಿಕ ಸ್ಥಿತಿ ತಿಳಿದು ಕೇಶವ ನಗುತ್ತ ಹೇಳಿದನು "ಹಾಲಿನಲ್ಲಿ ತುಸು ಹೆಚ್ಚು ಸಕ್ಕರ ಹಾಕಿಬಿಟ್ಟರೆ, ಹಾಲಿನ ರುಚಿ ಕೆಟ್ಟು ಹೋಗುವದು ಎಂದು ತಿಳಿಯುವದು ಅದೊಂದು ಭ್ರಮ ಹಾಗೆಂದು ಹೆಚ್ಚು ಸಕ್ಕರೆ ಬೆರೆಸುವದು ಅನುಚಿತ ಆದರೆ ಚಿಂತಿಸುವ ಕಾರಣವೇನೂ ಇಲ್ಲ-ನೀನು ಸರಿಯಾಗಿ ಸಕ್ಕರೆ ಬೆರೆಸಿರುವಿ ನನಗಂತೂ ಬಹಳ ರುಚಿ ಎನಿಸಿತು "

ಮಾಲತಿ ಹಿಂಜಾರಿಸುತ್ತ ನುಡಿದಳು. 'ಆದರೆ ಇದನ್ನೆಲ್ಲ ನೀನು ಯಾತಕ್ಕಾಗಿ ಹೇಳಿದೆ, ಎಂಬುದನ್ನು ನಾನು ತುಸು ಕೂಡ ತಿಳಿಯಲಿಲ್ಲ ಕೇಶವಣ್ಣಾ"

ನಗುತ್ತಲೇ ಕೇಶವನಾಡಿದ. "ತಿಳಿದುಕೊಂಡಷ್ಟೆ ಸಾಕು. ಹೆಚ್ಚು

ತಿಳಿಯುವ ಅವಶ್ಯಕತೆ ಈಗೇನಿಲ್ಲ ಅವಶ್ಯಬಿದ್ದಾಗ ಸರಿಯಾಗಿ ತಿಳಿಸಿ ಕೊಡುತ್ತೇನೆ.''

ಮಾಲತಿ ಮಾತಾಡಬೇಕೆನ್ನುವಷ್ಟರಲ್ಲಿ ರಾಮಕಲಿ ಪ್ರವೇಶಿಸುತ್ತ ನುಡಿದಳು "ನಿಮ್ಮದೇನೋ ಚೀಟಿ ಬಂದಿರುವದು" ಕೇಶವನು ಚೀಟಿ ತೆಗೆದುಕೊಂಡು ನೋಡುತ್ತಾನೆ ಪಾಕೀಟಿನ ಮೇಲೆ ಅಪರಿಚಿತ ಅಕ್ಷರ ದಿಂದ ಅವನ ಹೆಸರು, ವಿಳಾಸ ಮುಂತಾದವು ಒಡೆದು ನೋಡಿದನು ಎರಡು ಸಾಲಿನಲ್ಲಿ ಪತ್ರ ಮುಗಿದು ಹೋಗಿತ್ತು. ಕೆಳಗೆ ದುಲಾರಿಯ ರುಜು

ರಾಮಕಲಿ ಕೇಳಿದಳು "ಯಾರದದು ಪತ್ರ!"

ದುಲಾರಿಯದು, ಎಂದು ಹೇಳಿ ಕೇಶವನು ಚೀಟಿಯನ್ನು ರಾಮಕಲೀ ಕೈಯ್ಯಲ್ಲಿ ಕೊಟ್ಟನು ಚೀಟಿಯಲ್ಲಿ ಬರದಿತ್ತು. "ಪ್ರಿಯವರ, ಈದಿನ ಸಮಯ ದೊರತಾಗ ಬಂದು ತಾತನಿಗ ಭೆಟ್ಟಿಯಾಗಿರಿ ಅವನ ಅಪ್ಪಣೆ ಯಿಂದ ಈ ಚೀಟಿ ಬರೆದಿದ್ದೇನೆ ನಿಮ್ಮ ದುಲಾರಿ

ರಾಮಕಲಿ ಅಂದಳು. ''ನಿನ್ನೆ ನೀವು ಹೋಗಿದ್ದಿರಾ?''

''ಮೂರು ದಿನಗಳಿಂದ ಹೋಗಿಲ್ಲ''

''ನಾನೂ ಹೋಗದೆ ಎರಡು ಮೂರು ದಿನಗಳಾದವು ಬಹುಶಃ ಅವರೂ ಹೋದಂತಿಲ್ಲ ಏನೋ ಒಬ್ಬ ಹುಡುಗೆ ನಮ್ಮ ಆಶ್ರಯಕ್ಕೆ ಬಂದಿದ್ದಾಳೆ ನಾವು ನಿಶ್ಚಿಂತೆಯಿಂದ ಇದ್ದೇವ. ಇದು ಸರಿಯಾಗಲಿಲ್ಲ ನೀವು ಈಗಲೇ ಹೋಗಿಬನ್ನಿರಿ''

"ಮಧ್ಯಾಹ್ನ ಹೋಗಬೇಕೆಂದು ಮಾಡಿದ್ದೆ ಚೀಟಿ ಕಳಿಸಿರುವರೆಂದ ಮೇಲೆ, ಈಗಲೇ ಹೋಗುತ್ತೇನೆ."

ಅರ್ಧ ಗಂಟೆಯಲ್ಲಿ ಕೇಶವ ರಾಮಚರಣರ ಬಳಿಗೆ ಬಂದನು ತಿವಾರಿ ಪುರಗಂದ ಬರುವದಕ್ಕೆ, ಹತ್ತು ದಿನಗಳ ಮುಂಚೆ ರಾಮಚರಣರಿಗೆ ಮೋತಿ ಲಾಲನ ಕಡೆಯ ಪತ್ರ ತಲುಪಿತ್ತು ಲಖನೌಕೆ ಬಂದ ಮೇಲೆ ಅವನಿಗ ಪತ್ರ ಬರೆದಿದ್ದರು ಆದರೆ ಅವನು ಬೆಟ್ಟಿಗೂ ಬರಲಿಲ್ಲ ಪತ್ರದ ಉತ್ತರ ವನ್ನೂ ಕಳಿಸಿರಲಿಲ್ಲ. ಅವನು ಲಖನೌದಲ್ಲಿ ಇರುವನೋ, ಇಲ್ಲವೋ, ಪ್ರಕೃತಿ ಹೇಗೆ? ಇದನ್ನೆಲ್ಲ ತಿಳಿಯಲು ಮೋತೀಲಾಲನ ವಿಳಾಸ ಹೇಳಿದರು.

ರಾಮಚರಣರು ಹೇಳಿದರು. "ದುಲಾರಿಯ ಸಂಗಡ ಅವನ ವಿವಾಹ

ವಾಗುವ ವಿಷಯವೆಲ್ಲ ನಿನಗೆ ಗೊತ್ತಾಗಿದೆ ಕಾರಣ ಇದನ್ನೆಲ್ಲ ವಿಚಾರಿಸು. ವಿವಾಹದ ಸ್ಥಳ, ಮುಹೂರ್ತ, ತಿಥಿ—ಮುಂ ಇನ್ನು ಒಂದು, ನಿನ್ನ ಗೆಳೆಯ ಕೃಷ್ಣನಿಗೆ ಯಾವಾಗದರೊಮ್ಮೆ ಬರಹೇಳು ಹುಡುಗ ಚನ್ನಾಗಿದ್ದಾನೆ ಅವನ ನಡತೆ ನನಗೆ ಒಪ್ಪಿಗೆಯಾಗಿದೆ ”

ಗೆಳೆಯನ ಪ್ರಶಂಸ ಕೇಳಿ ತನ್ನಲ್ಲಿಯೇ ಕೇಶವ ಸಂತುಷ್ಟನಾದನು. ಎರಡೂ ಕಾರ್ಯ ಮಾಡುವೆನೆಂದು ತಿಳಿಸಿ, ಮೋತಿಲಾಲನ ವಿಳಾಸ ಬರೆದು ಕೊಂಡು ಅಲ್ಲಿಂದ ಹೊರ ಹೊರಟನು

ಅಮೀನಾಬಾದದ ಸನಿಯದಲ್ಲಿ ಒಂದು ಇಕ್ಕಟ್ಟಾದ ಬೀದಿಯಲ್ಲಿ ಆ ಮನೆ ಇತ್ತು. ಆಗಲೇ ಸಂಜೆಯಾಗಿದ್ದಿತೆಂದರೂ ಸರಿ ಕೃಷ್ಣಚಂದ್ರ ಕೇಶವರು ಒಂದು ಇಕ್ಕಟ್ಟಿನ ಕತ್ತಲೆಯುಳ್ಳ ಬೀದಿ ಹೊಕ್ಕರು ಮನೆಯ ಮೊಗಸಾಲೆಗೆ ಬಂದರು ಬಲಕ್ಕೆ ಮೇಲೇರುವ ಮೆಟ್ಟಿಲುಗಳಿದ್ದವು ಎಡಕ್ಕೆ ಯಾರೋ ಒಬ್ಬರು ಒಂದೆರಡು ಕಂದೀಲು ಇಟ್ಟುಕೊಂಡು, ಅವುಗಳನ್ನು ಸ್ವಚ್ಛಗೊಳಿಸುತ್ತ ಕೂತಿದ್ದರು ಒಂದು ಕೈದೀಪ ಉರಿಯು ತ್ತಿದ್ದಿತು ಕೇಶವನು ಅವನಿಗೆ ಮೋತಿಲಾಲನ ಕೋಟಡಿ ಯಾವುದೆಂದು ವಿಚಾರಿಸಿದನು

ಆಗ ಅವನು ಒಂದು ಒಡೆದುಹೋದ ಗ್ಲಾಸಿನ ರಿಪೇರಿ ಮಾಡು ತ್ತಿದ್ದನು. ತನ್ನ ಒಗಹರಿಯದ ಕಾರ್ಯದಿಂದ ತಲೆ ಮೇಲಕ್ಕೆತ್ತಿ ಹೇಳಿದನು “ನನಗೆ ಗೊತ್ತಿಲ್ಲ ಬಾಬೂ ನಾನೂ ಹೊಸಬ.''

ಅಲ್ಲಿ ಹೆಚ್ಚು ನಿಲ್ಲುವದು ವ್ಯರ್ಥವೆಂದು ತಿಳಿದು ಅವರಿಬ್ಬರು ಮೆಟ್ಟಿ ಲೇರತೊಡಗಿದರು ಅಲ್ಲಿ ಬಹಳ ಕತ್ತಲೆ ಇತ್ತು. ಎಷ್ಟೆಂದರೆ— ಈ ಮೆಟ್ಟಲು ಮೇಲಕ್ಕೆ ಹೋಗಿವೆಯೋ ? ಕಳಗೆ ಪಾತಾಳಕ್ಕೆಲ್ಲಿಯಾದರೂ ಸಾಗಿವೆಯೋ ? ಸರಳವಾಗಿವೆಯೋ ? ವಕ್ರವಾಗಿವೆಯೋ ? ತಿಳಿಯುವಂತಿರ ಲಿಲ್ಲ ಕೃಷ್ಣಚಂದ್ರನೆಂದ “ಇಲ್ಲಿ ಕತ್ತಲೆ ಬಹಳವಾಗಿದೆ ತುಸು ದೀಪ ತೋರಿಸಿರಿ ”

ಕೂಡಲೇ ಆ ವ್ಯಕ್ತಿ ಕೈದೀಪ ಎತ್ತಿಕೊಂಡು ಅವರ ಸನಿಯದಲ್ಲಿಯೇ ಒಂದುಬಿಟ್ಟನು. ಕೇಶವನು ತಳಮಳಿಸಿ ಕೂಗಿಕೊಂಡನು. “ಸಾಕಯ್ಯಾ. ನಮಗೆ ದೀಪ ಬೇಡ. ಹೊಗೆಯಿಂದ ಪ್ರಾಣ ಹೋಗುತ್ತದೆ ”

ಆ ಮಬ್ಬು ಹೊಗೆಯಿಂದ ಕೂಡಿಕೊಂಡ ಬೆಳಕಿನಿಂದಲೂ ಎಷ್ಟೋ ಉಪಯೋಗವಾಯಿತು ಮೆಟ್ಟಲುಗಳ ತುಸು ಅನುಮಾನ ತಿಳಿದಕೂಡಲೇ ಇಬ್ಬರೂ ಮೆಲ್ಲಗೆ, ಎರಡನೇ ಅಂತಸ್ತಿಗೆ ಬಂದು ಮುಟ್ಟಿದರು ಶೋಧದಿಂದ ಮೋತೀಲಾಲನ ಕೊಟಡಿ ಹುಡುಕಿದರು

ಯಾರೋ ಒಬ್ಬ ಯುವಕ ಮೇಜಿನ ಬಳಿಯಲ್ಲಿ ಕೂತು ಓದುತ್ತಿದ್ದನು. ಕೇಶವನ ಮಾತಿನಿಂದ ಅವನು ಎದ್ದು ನಿಂತನು. ಮತ್ತು ಆಗಂತುಕರನ್ನು ಒಳಕ್ಕೆ ಕರೆದನು.

ಒಳಗೆ ಹೋದಮೇಲೆ ಕೇಶವ ತನ್ನ ಪ್ರಶ್ನೆಗಳನ್ನು ಕೇಳಿದನು

ಯುವಕನೆಂದ "೮—೧೦ ದಿನಗಳಾದವು ಅವರು ತಮ್ಮ ಮನೆಗೆ ಹೋಗಿದ್ದಾರೆ ಅವರ ವಿವಾಹ ಇದೇ ಫಾಲ್ಗುಣದಲ್ಲಿ ನಿಶ್ಚಿತವಾಗಿದೆ ಅದರ ಸಿದ್ಧತಗೆ ಹೋಗಿದ್ದಾರೆ ನಾಳೆ ಬೆಳಗಿನಲ್ಲಿ ಬರುವರು ನೀವು ಬಂದಿದ್ದೆಲ್ಲಿಂದ?"

ಕೃಷ್ಣಚಂದ್ರ ಉತ್ತರಿಸಿದ "ಅವರ ವಿವಾಹವಾಗುವ ಸ್ಥಳದಿಂದಲೇ ನಾವು ಬಂದಿದ್ದೇವ "

ಈ ಮಾತಿನಿಂದ ಆ ಯುವಕನ ಉತ್ಸುಕತೆ ಇಮ್ಮಡಿಸಿ ಕೇಳಿದನು "ಹಾಗಾದರೇನು ಸುಲ್ತಾನಪುರದಿಂದ ಬಂದಿರಾ?"

'ಇಲ್ಲ ಯಾಕೆ?'

ಹಿಂತೆಗೆಯುತ್ತ ಯುವಕನಾಡಿದ " ರಾಜಬಹದೂರ ಬಾಬೂ ಸುಲ್ತಾನಪುರದಲ್ಲಿ ವಕೀಲಿ ಮಾಡುತ್ತಿಲ್ಲವೇ?"

"ಅವರು ಯಾರು?"

ಯುವಕ ಆಶ್ಚರ್ಯದಿಂದ ಒಂದುಸಾರೆ ಕೇಶವನ ಕಡೆಗೆ, ಒಂದು ಸಾರೆ ಕೃಷ್ಣಚಂದ್ರನ ಕಡೆಗೆ ಟಕಮಕ ನೋಡಿ ನುಡಿದನು "ಅವರ ಮಗಳ ಸಂಗಡ ಪ್ರೊಫೆಸರರ ವಿವಾಹವಾಗುವದಿದೆ'

ಯುವಕನ ಮಾತು ಕೇಳಿ ಕೇಶವನು ಮಿತ್ರನ ಮೋರೆಯನ್ನು ಭೇದಕ ದೃಷ್ಟಿಯಿಂದ ನೋಡಿ ನುಡಿದನು. "ನಾವು ಸ್ವತಃ ಅವರ ಭೆಟ್ಟಿಯಾಗಬೇಕಾಗಿರುವದರಿಂದ ಇವೆಲ್ಲ ಮಾತುಗಳಿಂದ ಪ್ರಯೋಜನವಿಲ್ಲ ನಾಳೆ ಯಾವಾಗ ಬಂದರೆ ಅವರ ಭೆಟ್ಟಿಯಾಗಬಹುದು?'

"ಅವರು ಬೇಗನೆ ಬರಬಹುದು ತಾವು ಹತ್ತು ಗಂಟೆಗೆ ಮೊದಲು ಬನ್ನಿ."

ಬೀದಿಯಲ್ಲಿ ಕೇಶವನೆಂದ "ಏನಾಯಿತು ಅಭಿಪ್ರಾಯ?" ಯುವಕನ ಮಾತೂ ಶಕ್ಯವೆಂದು ಕಾಣುವದು ಆದರೂ ಮೋತಿಲಾಲ ನಿಜ ಸಂಗತಿ ಇಲ್ಲಿ ಪ್ರಕಾಶ ಮಾಡಿರಲಿಕ್ಕಿಲ್ಲ.'

"ಇರಬಹುದು. ಏನೋ ನನಗೊಂದು ಚಿಂತೆ ಇಲ್ಲಿ ಏನೋ ತುಸು ಗೊಂದಲವಿರಬೇಕು."

ಸ್ವಾಭಾವಿಕವಾಗಿ ಕೃಷ್ಣಚಂದ್ರ ಹೇಳಿದನು "ಸ್ವತಃ ಅವನ ಸಂಗಡ ಮಾತಾಡದ ವಿನಾ ಸುಳ್ಳೇ ಅನುಮಾನ ಮಾಡುವದರಲ್ಲಿ ಅರ್ಥವಿಲ್ಲ"

ನಗುತ್ತ ಕೇಶವ ನುಡಿದ "ಅನುಮಾನವೇ ಚರಮಸತ್ಯವೆಂದು ನಾನು ಪ್ರಮಾಣ ಹಿಡಿಯುವದಿಲ್ಲ ಆದರೂ ಅನುಮಾನದಿಂದಲೇ ಜ್ಞಾನದ ಶೋಧವೆಂಬುದನ್ನು ನೀನು ಒಪ್ಪುವೆಯೋ, ಇಲ್ಲವೋ?"

"ಒಪ್ಪಿಕೊಂಡರೂ ಜ್ಞಾನ ಬಹಳ ನಿಕಟವಾಗಿದೆ ಕಲವೇ ಗಂಟೆಗಳಲ್ಲಿ ದೊರಯುತ್ತದೆ ಎಂದ ಮೇಲೆ ಅನುಮಾನ ಕಟ್ಟಿಕೊಂಡು ವಿವ್ಹಲರಾಗಲೇನು ಅವಶ್ಯ?"

"ಅದೇ ಸರಿ ಈದಿನ ರಾತ್ರಿ ರಾಮುಚರಣರನ್ನು ಒರಿ ಅನುಮಾನದಿಂದ ಕನ್ನಗೊಳಿಸುವದು ಸರಿಯಲ್ಲ ನಾಳೆ ಬೆಳಗಿನಲ್ಲಿ ನಿಜಜ್ಞಾನ ಪಡೆದುಕೊಂಡು ಸನ್ನಿಧಿ ಸೇರುವಾ

## (೧೦)

ಮರುದಿನ ಬೆಳಗಿನಲ್ಲಿ ಕೇಶವ-ಕೃಷ್ಣಚಂದ್ರರು ಮೋತಿಲಾಲನ ಮನೆಗೆ ಬಂದಾಗ, ಇನ್ನೂ ಆ ಮನೆಯಲ್ಲಿ ಎಲ್ಲ ಕಡೆ ಬೆಳಕು ಸಹ ಬಿದ್ದಿರಲಿಲ್ಲ ಎಲ್ಲಾದರೂ ಮೋತಿಲಾಲ ಹೋಗಿಬಿಟ್ಟಾನೆಂಬ ಭಯದಿಂದ ಇವರು ಅಷ್ಟು ಬೇಗ ಬಂದದ್ದು. ಓರ್ವ ಅಪರಿಚಿತ ಯುವಕನು, ಮೋತಿಲಾಲನ ಕೋಟಡಿಯಲ್ಲಿ ಮೇಜಿನ ಬಳಿಗೆ ಕುಳಿತು ಬರೆಯುತೊಡಗಿದ್ದನು ಬಾಗಿಲಿನಲ್ಲಿ ಬಂದ ಆಗಂತುಕನನ್ನು ಕಂಡು ಅವನು ಮೇಲಕ್ಕೆದ್ದು ಮಾತಾಡಿದನು. 'ಬರಬೇಕು ನಿನ್ನೆ ಸಾಯಂಕಾಲ ನೀವೇ ಬಂದಿದ್ದಿರೋ?"

ಕೇಶವನೆಂದ "ಅಹುದು ನಿಮ್ಮ ಹೆಸರು ಮೋತೀಲಾಲರಲ್ಲವೇ?"

"ಹಾಂ"

ಆಗ ಕೇಶವನು ತಮ್ಮ ಪರಿಚಯ ಹೇಳಿದನು ಮತ್ತು ಬಂದ ಕಾರಣ ವನ್ನು ವಿಶದಪಡಿಸಿದನು.

ಕೇಶವನ ಮಾತು ಕೇಳಿ, ತುಸು ಸುಮ್ಮನಿದ್ದು ಮೋತೀಲಾಲ ನುಡಿ ದನು "ಪಂಡಿತ ರಾಮಚರಣರ ಚೀಟಿ, ಈಗ ನಾನು ಬಂದಕೂಡಲೇ ಕೈಗೆ ಸಿಕ್ಕಿರುವದು. ಇದೀಗ ಅವರ ಚೀಟಿಯ ಉತ್ತರವನ್ನೇ ಬರೆಯುತ್ತಿದ್ದೆ ನೀವು ಅವರಿಗೆ ಹೇಳಬಹುದು ಇಂದೇ ಅವರಿಗೆ ಉತ್ತರ ದೊರೆಯುತ್ತದೆ"

ಮೋತೀಲಾಲನ ಉತ್ತರದಿಂದ ಅಂತರಂಗದ ಗುಟ್ಟು ತುಸು ಕೂಡ ಕೇಶವನು ಗುರುತಿಸಲಿಲ್ಲ ಕಾರಣ ನಿನ್ನೆ ಸಾಯಂಕಾಲದಲ್ಲಿ ಬಂದ ಸಂದೇಹ ವನ್ನು ನಿವಾರಿಸಿಕೊಳ್ಳದೇ ಅವನಿಗೆ ಸಮಾಧಾನವೆನಿಸಲಿಲ್ಲ ಇಲ್ಲಿಗೇ ಮಾತು ಮುಗಿಸದೇ ಅವನು ಮುಂದರಿಸಿದ "ನೋಡಿ, ಯಾವ ನಿಮಿತ್ತ ಅವರು ನಿಮ್ಮ ಭೆಟ್ಟಿಗೆ ಇಷ್ಟು ಆತುರರಾಗಿರುವರೋ ಆ ಸಂಬಂಧವಾಗಿ ಎಲ್ಲ ಮಾತುಗಳನ್ನು ಚೀಟಿಯಲ್ಲಿ ಬರೆದಿರುವದು ಶಕ್ಯವಿಲ್ಲ"

ಸ್ವಲ್ಪ ವಿಚಾರಿಸಿ ಮೋತೀಲಾಲ ನುಡಿದನು "ಪಂಡಿತ ರಾಮ ಚರಣರಿಗೆ ನೀವು ಏನಾಗಬೇಕು? ಅವರ ಪರಿಸ್ಥಿತಿ ನಿಮಗೆಷ್ಟು ಗೊತ್ತಾಗಿದೆ? ಇದು ನನಗೆ ತಿಳಿದರೆ, ಮಾತಾಡಲಿಕ್ಕೆ ನನಗೆ ಹೆಚ್ಚು ಅನುಕೂಲ ವೆನಿಸುವದು

ಕೇಶವ ರಾಮಚರಣರ ಕೂಡ ತಮಗಿದ್ದ ಆತ್ಮೀಯ ಸಂಬಂಧ ತಿಳಿ ಸಿದನು ಹಾಗೂ ಮೋತೀಲಾಲನು ದುಲಾರಿಯನ್ನು ಲಗ್ನವಾಗಿ, ಸಮಾಜ ರೂಢಿಯ ಗೋಡೆಯನ್ನು ಸಡಿಲುಮಾಡುತ್ತಿದ್ದಾನೆ, ಎಂಬ ವಿಷಯಕ್ಕೆ ಅವನಿಗೆ ಧನ್ಯವಾದಗಳನ್ನರ್ಪಿಸಿದನು ಮತ್ತು ಹೇಳಿದನು "ಯುಕ್ತ ಪ್ರಾಂತದ ಹಿಂದೂ ಸಮಾಜದಲ್ಲಿ ನಿಮ್ಮ ಹೆಸರು ಆದರದಿಂದ ಉಚ್ಚರಿಸ ಲ್ಪಡುವದು ಈಗ ಮನುಷ್ಯ ತನ್ನ ಸ್ವಾಭಾವಿಕ ಅಧಿಕಾರದಿಂದ ವಂಚಿತ ನಾಗಿದ್ದಾನೆ ನೀವು ಆ ಸ್ವಾಭಾವಿಕ ಅಧಿಕಾರ ಸ್ಥಾಪಿಸುತ್ತಿರುವಿರಿ. ಇದ ಕ್ಕಾಗಿ ಹಿಂದೂ ಸಮಾಜದಲ್ಲಿ ನೀವು ಗೌರವಕ್ಕೆ ಯೋಗ್ಯರು."

ತೇಜಸ್ವಿಯಾದ ಕೇಶವನ ಮಾತುಗಳನ್ನು ಕೇಳಿ ಮೋತೀಲಾಲನ

ಮುಖಕಾಂತಿ ಹೀನವಾಗಿಹೋಯಿತು ಆದರೂ ಒಳ್ಳೇ ಜಾಗ್ರತೆಯಿಂದ ಉತ್ತರಿಸಿದನು "ನೀವೇನೋ ನನಗೆ ಸನ್ಮಾನ ಮಾಡುತ್ತೀರಿ ಆದರೆ ದುಃಖದ ಮಾತು ನಾನು ಅದಕ್ಕೆ ಪಾತ್ರನಿಲ್ಲ ಅಷ್ಟೇ ಅಲ್ಲ ನಾನು ರಾಮಚರಣರ ಮಗಳೊಡನೆ ವಿವಾಹವಾಗುವದು ಸಾಧ್ಯವಿಲ್ಲ ಬೇರೊಂದು ಕಡೆಗೆ ನನ್ನ ವಿವಾಹ ನಿಶ್ಚಯವಾಗಿದೆ "

ಮಾತು ಕೇಳಿ ತುಸು ಕೂಡ ಆಶ್ಚರ್ಯ ಪ್ರಕಟಿಸದೆ ಕೇಶವನಂದ "ನಿನ್ನೆ ಸಾಯಂಕಾಲ ನಿಮ್ಮ ಕೂಟಡಿಯಲ್ಲಿ, ಇವೇ ಏನೋ ತುಸು ಮಾತು ಕೇಳಿದ್ದೆವು ಆದರೆ ಇಂಥ ಮಹತ್ವದ ಅನುಚಿತ ಮಾತು ನಿಮ್ಮ ಬಾಯಿಂದ ಕೇಳಿಕೊಳ್ಳದ ವಿನಾ ಅದರ ಮೇಲೆ ಸ್ವಲ್ಪ ಕೂಡ ನಮಗ ವಿಶ್ವಾಸವಿಡುವದಾಗುವದಿಲ್ಲ "

ಮೋತೀಲಾಲ ನಗುತ್ತ ಹೇಳಿದನು "ಒಮ್ಮೊಮ್ಮೆ ಸಾಮಾನ್ಯ ಮಾತುಗಳು ಸಹ, ಅದ್ಭುತ ಹಾಗೂ ಅನುಚಿತವೆಂದು ಭಾಸವಾಗುತ್ತವೆ ಅದಕ್ಕಾಗಿ ನಿಮ್ಮನ್ನು ದೂಷಿಸುವಂತಿಲ್ಲ "

ಈ ವರೆಗೆ ಕೃಷ್ಣಚಂದ್ರನು ಸುಮ್ಮನಿದ್ದ ಮೋತೀಲಾಲನ ಮೋಸಗಾರಿಕೆಯ ಮಾತು ಕೇಳಿ, ಅವನು ಒಳಗೇ ಉರಿದುಹೋಗಿದ್ದನು ಅಲ್ಲದೇ ಕೇಶವನ ನಿರ್ಭರ್ತ್ಸನೆಗೆ, ನಿರ್ಲಜ್ಜತೆಯ ಉತ್ತರ ಕೇಳಿಯಂತೂ ಸುಮ್ಮನಿರುವದಾಗಲಿಲ್ಲ ಕ್ರುದ್ಧನಾಗಿ ಅಂದನು 'ನನಗೆ ನೀವು ದೋಷ ಕೊಡುವದಿಲ್ಲವೆಂಬುದನ್ನು ಕೇಳಿ ನಾವು ಧನ್ಯರಾದೆವು! ಆದರೂ ಇದು ಸಾಧಾರಣ ಮಾತು, ಎಂಬುದನ್ನು ನೀವು ಸಿದ್ಧಮಾಡಲೇ ಬೇಕಾಗುವದು

ಕೃಷ್ಣಚಂದ್ರನ ಕಡೆಗ ಹೊರಳಿ ಮೋತೀಲಾಲ ನೋಡೇನೋಡಿದನು ನಂತರ ಮಾತಾಡಿದನು "ನನ್ನ ವಿಷಯಕ್ಕೆ ಹೇಗೆ ಬೇಕೋ ಹಾಗೆ ನೀವು ಭಾವಿಸಿಕೊಳ್ಳಬಹುದು, ಆದರೆ-ನನ್ನ ಕಾರ್ಯದ ವಿಷಯದಲ್ಲಿ ನಿರ್ಣಯ ಮಾಡುವ ಅಧಿಕಾರ ನನ್ನದೇ ನಾನು ನನ್ನ ವಿಷಯ ಯಾವುದೂ ತಿಳಿಸುವದಿಲ್ಲವೆಂದು ಇರುವಾಗ, ತಿಳಿಯಬೇಕೆಂದು ನೀವು ಯತ್ನಿಸುವದು ಅರ್ಥವಿಲ್ಲ "

ಕೃಷ್ಣಚಂದ್ರನ ಕೋಪ ಹೆಚ್ಚಿಹೋಯಿತು ಭಂಡನ ಬಾಯಿಂದ ಬ್ರಹ್ಮಜ್ಞಾನ. ಅಸಹ್ಯ ಕ್ರೋಧವಶನಾಗಿ ಹೇಳತೊಡಗಿದನು "ನಿಮ್ಮ

ವಿಷಯ ತಿಳಿಯಬೇಕೆಂದು ನನಗೆ ಎಷ್ಟೂ ಇಚ್ಛೆಇಲ್ಲ ಆದರ ಒಬ್ಬ ಬ್ರಾಹ್ಮಣ ಕನ್ಯೆಯನ್ನು ಪುಸಲಾಯಿಸುವದು, ಹಾಗೂ ಸ್ವಾರ್ಥ-ದಾಶೆಯಿಂದ ಆಕೆಯ ತ್ಯಾಗ ಮಾಡುವದು, ಇದು ಹೇಗೆ ಸಾಧಾರಣ ಮಾತೋ ತಿಳಿಯಬೇಕೆಂದು ನನಗೆ ಇಚ್ಛೆಯೂ ಉಂಟು, ಅಧಿಕಾರವೂ ಉಂಟು ”

ಈ ಸಲ ಮೋತೀಲಾಲನ ಮುಖವೂ ಕ್ರೋಧರಂಜಿತವಾಯಿತು ಅನಂತರ “ ನೀವಾಡಿದ ಮಾತಿಗ ಯೋಗ್ಯ ಉತ್ತರ ಕೊಡುತ್ತಿದ್ದೆ ಆದರ-ನೀವು ನನ್ನ ಮನೆಯಲ್ಲಿದ್ದೀರಿ ಎಂಬುದನ್ನು ನಾನು ಮರತಿಲ್ಲ ” ಕೇಶವನಿಗೆ ನುಡಿದನು “ ಇನ್ನೂ ನೀವೇನು ಹೇಳುವಿರೋ ಅದನ್ನು ನಾನರಿಯ ಆದರೆ ಬೇರೆಯವರ ಮನೆಯ ಮೆಟ್ಟಲೇರಿ, ಈ ತರಹದ ಅಪಮಾನಗೊಳಿಸುವದು ಯೋಗ್ಯವಲ್ಲವೆಂದು ನಿಮ್ಮ ಜೊತೆಯವರಿಗಷ್ಟು ಹೇಳಿ ”

ಎದ್ದು ನಿಂತು ಕೇಶವನೆಂದ “ ಅಪಮಾನ ಮಾಡುವದೂ ಅವಶ್ಯವಿಲ್ಲ ತಿಳಿಯುವುದೂ ಅವಶ್ಯವಿಲ್ಲ ಪಂಡಿತ ರಾಮಚರಣರು ಹೇಳಿದನ್ನು ನಾವು ಹೇಳಿ ಮುಗಿಸಿಬಿಟ್ಟೆವು ಇನ್ನು ನೀವೇನು ಹೇಳುತ್ತೀರೋ ಹೇಳಿಬಿಡಿ ”

ಮೋತೀಲಾಲ ನುಡಿದ “ ಈ ದಿನವೇ ಅವರ ಪತ್ರಕ್ಕ ಉತ್ತರ ಬರುವದೆಂದು ನೀವು ಹೇಳಬಹುದು ” ವಿಚಾರಿಸಿ ಪುನಃ ಹೇಳಿದನು “ ಇದರ ಸಂಬಂಧವಾಗಿ ದುಲಾರಿಯು ನನಗೊಂದು ಪತ್ರ ಕೊಟ್ಟಿದ್ದಳು ಅದರ ಚರ್ಚೆಯು ರಾಮಚರಣರ ಪತ್ರದಲ್ಲಿ ಎಷ್ಟೋ ಸಲ ಬರುತ್ತದೆ ಆದರೆ ಕೆಲವು ಕಾರಣಗಳ ಮೂಲಕ ಆ ಚೀಟಿಯನ್ನು ನಾನು ಅವರಿಗೆ ಕಳಿಸುವದಿಲ್ಲ ನೀವು ಆ ಚೀಟಿ ಓದಿಕೊಂಡರೆ-ವಿವರ ತಿಳಿದು ನಿಶ್ಚಿಂತರಾಗುವಿರಿ ” ಎಂದವನೇ ಲಟರಪ್ಯಾಡಿನಿಂದ ಒಂದು ಪತ್ರ ತೆಗೆದನು

ದುಲಾರಿಯ ಒಪ್ಪಿಗೆಯಿಲ್ಲದೇ ಆಕೆಯ ಪತ್ರ ಓದಲು ಕೇಶವನು ಸಿದ್ಧನಿರಲಿಲ್ಲ

ಮೋತಿಲಾಲ ನುಡಿದ “ ಇದೊಂದು ಸಾಧಾರಣ ಪತ್ರವಾಗಿದ್ದರ ನಾನು ಯಾರಿಗೂ ಕೊಡುತ್ತಿರಲಿಲ್ಲ ಅಲ್ಲದೇ ಈ ಪತ್ರ ಯಾರಾದರೂ ಓದಿದರ ದುಲಾರಿಯದೇನೂ ಹಾನಿ ಇಲ್ಲ ಓದಲು ನಿಮಗೆ ಸಂಕೋಚವಿದ್ದರ-ನಾನು ಓದಿ ಹೇಳುತ್ತೇನ

“ ಶ್ರದ್ಧಾಸ್ಪದ, ತಮ್ಮ ಪತ್ರ ಮುಟ್ಟಿತು ತಮ್ಮ ಉಪದೇಶ

ಮತ್ತು ಪ್ರೇರಣೆಯಂತೆ, ಎಲ್ಲ ಮಾತುಗಳ ವಿಷಯಕ್ಕೆ ಸಾಧ್ಯವಾದಷ್ಟು ವಿಚಾರಿಸಿದ್ದೇನೆ ಈ ವಿಷಯದಲ್ಲಿ ನಿಮ್ಮ ಸುಖದುಃಖ ವಿಚಾರಿಸುವ ಅವಶ್ಯಕತೆ ನನಗೆ ಉಳಿಯಲಿಲ್ಲ ಯಾವ ವಿಚಾರದಿಂದ ನಾನು ತಮ್ಮ ಮೊದಲಿನ ಪ್ರಸ್ತಾಪವನ್ನು ಒಪ್ಪಿಕೊಂಡಿದ್ದೆನೋ, ಅದರ ಫಲಸ್ವರೂಪವೆಂದು ಈಗಿನದನ್ನೂ ಒಪ್ಪುತ್ತೇನೆ ಈ ಮಾತನ್ನು ತೀವ್ರವಾಗಿ ನಮ್ಮ ತಂದೆಗೆ ತಿಳಿಸುವದರಿಂದ ನಷ್ಟವೇನೂ ಇಲ್ಲ ಆದರೂ ತುಸು ತಡೆದು ತಿಳಿಸಬೇಕು. ಮೊದಲೇ ಬೇನೆಯಿಂದ ಒಳಲಿದವನಿಗೆ, ನನ್ನ ವಿವಾಹದ ಚಿಂತೆಯೂ ಕೂಡಿದರೆ ಒಳಿತಾಗಲಾರದು ನಿಮ್ಮ ದುಲಾರಿ" ಈ ಚೀಟಿಯಿಂದ ನೀವೇ ಯೋಚಿಸಿರಿ ಇದರಲ್ಲಿ ಆಗುವ ದುಲಾರಿಯ ಲಾಭ-ಹಾನಿಗಳೇನು?"

ಕೇಶವನಂದ "ಬರೀ ಈ ಚೀಟಿಯಿಂದ ವಿಚಾರಮಾಡಬರುವಂತಿಲ್ಲ. ಯಾಕೆಂದರೆ ಇದರಲ್ಲಿ ದುಲಾರಿ ತನ್ನ ಮಾತನ್ನೇನೂ ಬರದಿಲ್ಲ ಆದರೆ ಅದೆಲ್ಲ ಏಕೆ? ನಾವು ಹೋಗುತ್ತೇವೆ ನಿಮ್ಮದೇನು ಹೇಳಿಕೆಯೋ ಅದನ್ನು ರಾಮಚರಣರಿಗೆ ಹೇಳಿಬಿಡುವೆವು"

ಬೀದಿಗೆ ಬಂದು ಉತ್ತೇಜಿತ ಸ್ವರದಲ್ಲಿ ಕೃಷ್ಣಚಂದ್ರನಾಡಿದನು. "ಇಷ್ಟು ಓದಿ, ಬರೆದರೂ ಮನುಷ್ಯ ಶುದ್ಧ ಪಶು"

ಕೇಶವ ನುಡಿದ "ಪಶುವಿನ ಸಂಗಡ ನೀನು ವ್ಯರ್ಥ ಗುದ್ದಾಡಿದೆ ಕೃಷ್ಣಾ ಪಶುಗಳು ಇಷ್ಟು ನೀಚತನ ಮಾಡುತ್ತವೆ ಎಂಬುದು ನಿನ್ನ ಅನುಮಾನ ಅಷ್ಟೇ ನಿನ್ನ ಬಳಿಯಲ್ಲಿ ಯಾವ ಪ್ರಮಾಣವೂ ಇಲ್ಲ"

"ಅದೇನೋ ಸರಿ"

ಇಬ್ಬರೂ ಮೋತೀಲಾಲ ಮತ್ತು ದುಲಾರಿಯ ಸಂಬಂಧದಲ್ಲಿ ಅನೇಕ ತರದ ಯೋಚನೆ ಮಾಡುತ್ತ ಸಾಗಿದ್ದರು

ಚಳಿಯ ದಿನದಲ್ಲಿ ಇಕ್ಕಟ್ಟಾದ ಲಖನೌ ಪಟ್ಟಣವು ಬೆಳಗಾಗಿದ್ದರೂ ಮಂಜಿನ ದುಪ್ಪಟಿ ಹೊದೆದು ಹೇಗೋ ಬಿದ್ದುಕೊಂಡಹಾಗಿತ್ತು. ಬೀದಿಗಳಲ್ಲಿ ಇನ್ನೂ ಟಾಂಗಾ, ಮೋಟಾರು ಮುಂತಾದ ತೊಂದರೆ ಇರಲಿಲ್ಲ ಉಭಯತರು ವಿಚಾರಮಗ್ನರಾಗಿ ಕಾಲುದಾರಿಯಿಂದ ನಡೆದಿದ್ದರು.

ಕೇಶವ ಮನದಲ್ಲಿ ಯೋಚಿಸುತ್ತಿದ್ದನು. ಈ ಕಠೋರ ಸಮಾಚಾರ ಕೇಳಿ ರೋಗಿ ರಾಮಚರಣರ ಅವಸ್ಥೆ ಏನಾಗಬಹುದು? ಎಲ್ಲ ಸಮಾಜವನ್ನು

ಉಪೇಕ್ಷಿಸಿ ಅವರು ಒಮ್ಮೆ ಈ ಸ್ಥಳ ನಿಶ್ಚಯ ಮಾಡಿದ್ದರು ಈಗ ಅವರು ಸಮಾಜದ ಎದುರಿಗೆ ನತಮಸ್ತಕರಾಗಿ ಹೇಗೆ ಹೇಳಬೇಕು ? ' ತಪ್ಪಾಯಿತು, ಕ್ಷಮಿಸಿರಿ ' ಎಂದು.

ಅತ್ತ ಕೃಷ್ಣಚಂದ್ರನು ಆಲೋಚಿಸುತ್ತಿದ್ದನು ಮೋತೀಲಾಲನ ಈ ನಿಷ್ಠುರ ಕೃತಿ, ದುಲಾರಿಯ ಹೃದಯವನ್ನು ಹೇಗೆ ವಿದೀರ್ಣ ಮಾಡಿತಲ್ಲ, ಆದರೂ ರೋಗಿಯಾದ ತಂದೆಯ ಸೇವೆಯಲ್ಲಿ ಎಷ್ಟು ಜಾಗರೂಕಳಾಗಿದ್ದಾಳೆ, ಭಲೆ, ತನ್ನ ಅಂತರಂಗದ ಹಾಹಾಕಾರದ ಒಂದು ರೇಖೆಯನ್ನು ಕೂಡ ಮೋರೆಯ ಮೇಲೆ ತೋರಗೊಡುವದಿಲ್ಲ

ಸಹಸಾ ನೀರವತೆಯನ್ನು ಭಂಗಿಸಿ ಕೇಶವನಾಡಿದನು " ಏನು ದುಲಾರಿಯ ವಿಷಯ ಯೋಚಿಸುತ್ತೀಯ ? "

ಬೆಚ್ಚಿಬಿದ್ದಂತೆ ಕೃಷ್ಣಚಂದ್ರ ಹೇಳಿದ " ಅದನ್ನೇ ಯೋಚಿಸುತ್ತಿದ್ದೆ ಮೋತೀಲಾಲ ಎಂಥ ಅನ್ಯಾಯ ಮಾಡಿಬಿಟ್ಟ "

" ಇದರಿಂದ ಮೋತೀಲಾಲನ ಮೇಲೆ ನಿನಗೆ ಕೋಪವೋ ? "

" ಹಾಗಿರದಿದ್ದರೂ ಆದರವು ಉಳಿದಿಲ್ಲ "

" ನಾನು ತಿಳಿದಿದ್ದೆ. ನೀನು ಪ್ರಸನ್ನನಾಗಿದ್ದೀ. "

" ಯಾತರ ವಿಷಯಕ್ಕೆ "

" ಎರಡೂ ವಿಷಯಗಳಲ್ಲಿ—ಮೋತೀಲಾಲ ದುಲಾರಿಯನ್ನು ಬಿಟ್ಟ ಇದಕಾಗಿ ಮೋತೀಲಾಲನ ವಿಷಯದಲ್ಲಿ, ಮತ್ತು ದುಲಾರಿ ತ್ಯಕ್ತಳಾದಳು ಇದಕಾಗಿ ಆಕೆಯ ಮೇಲೆ

ಕೇಶವನ ಬೆನ್ನ ಮೇಲೆ ಒಂದು ಗುದಿಕೆ ಏಟು ಹಾಕುತ್ತ ಕೃಷ್ಣಚಂದ್ರ ಹೇಳಿದ. " ಮೂರ್ಖ, ನೀನು ಬಹಳ ನೀಚನಾದೆ ಒಬ್ಬರ ಬಾಯಿಂದ ತುತ್ತು ಬಿದ್ದಿತೊ, ಇಲ್ಲವೋ ಹೋ ಎಂದು ಬಾಯಿಬಿಟ್ಟು ಓಡುತ್ತಿದ್ದೀಯೆ "

ನಗುತ್ತ ಕೇಶವ ನುಡಿದ " ನಾನೋ, ನೀನೋ ? "

ಈ ಮಾತುಗಳಲ್ಲಿ ತುಸು ಸತ್ಯವೂ ಇತ್ತು ಮೋತೀಲಾಲನ ಕೊಟಡಿಯಲ್ಲಿ ಯಾವಾಗ ಕೃಷ್ಣಚಂದ್ರ ಕ್ರೋಧವನ್ನು ಪ್ರಕಟಿಸಿದ್ದನೋ, ಆ ಕ್ರೋಧದ ಅಂತರಾಳದಲ್ಲಿ ಒಂದು ಮಸುಕಾದ ಹರ್ಷರೇಖೆ ಮೇಲೆದ್ದು ಬಂದದ್ದು ಕಾಣುತ್ತಿತ್ತು. ಆದರೆ ಆ ಹರ್ಷದ ಉಗಮವೆಲ್ಲಿ, ಅದು ಯಾತಕ್ಕಾಗಿ,

ಇದೆಲ್ಲ ಆಗ ಅಜ್ಞಾತದಲ್ಲಿತ್ತು. ಏನೋ ಅದರ ಅಸ್ತಿತ್ವವಷ್ಟು ಭಾಸವಾಗುವಂತಿತ್ತು. ಆದರೆ ಕೇಶವನು ನಗೆಯ ಚಿಟಿಕೆ ಹಾಕಿ ಅವನ ಸುಪ್ತ ಭಾವವನ್ನು ಜಾಗೃತಗೊಳಿಸಿಬಿಟ್ಟ. ಕೃಷ್ಣಚಂದ್ರನ ಕಂಗಳ ಮುಂದೆ ಲಖನೌದ ಸ್ಥಳದಲ್ಲಿ ತಿವಾರಿಪುರದ ದೃಶ್ಯವು ಒಂದು ಕ್ಷಣ ಮಾತ್ರ ಚಿತ್ರದಂತೆ ಸುಳಿದು ಹೋಯಿತು. ಕೃಷ್ಣಚಂದ್ರ ಮೊಗಸಾಲೆಯಲ್ಲಿದ್ದಾನೆ. ದುಲಾರಿ ಅಡಿಗೆ ಮನೆಯಲ್ಲಿ ಕುಳಿತು ಗೋದೀಹಿಟ್ಟು ನಾದುತ್ತಿದ್ದಾಳೆ. ಆಗ ಕೃಷ್ಣಚಂದ್ರನ ಕಂಗಳಲ್ಲಿ ಯಾವ ಸೌಂದರ್ಯ ಮಲಗಿ ನಿದ್ರಿಸುತಿತ್ತೋ, ಅದು ಆಶಾ-ಪ್ರಭಾತದ ಮೊದಲ ಕಿರಣ ಬಿದ್ದೊಡನೆ ಬೆಳಕಿಗೆ ಬಂದಿತು.

ದಾರಿ ಹೊರಳುವ ಸ್ಥಳ ಬಂದಕೂಡಲೇ ಕೃಷ್ಣಚಂದ್ರನೆಂದ, "ಇನ್ನು ಹೋಗೋಣ ಮತ್ತೆ ಮಧ್ಯಾಹ್ನ ಕೂಡುವಾ"

ಕೃಷ್ಣಚಂದ್ರನ ಕೈ ಕುಲುಕಿಸಿ ಕೇಶವ ನುಡಿದನು "ನೀನು ಪಂಡಿತ ರಾಮಚರಣರಿಗೆ ಸಂದೇಶ ಮುಟ್ಟಿಸಲು ಬರುವದಿಲ್ಲವೋ? ಅವರು ನಿನ್ನನ್ನು ನೆನೆಯುತ್ತಿದ್ದಾರೆ"

ಏನಾದರೂ ಕೇಶವ ಬಿಡನೆಂದು ತಿಳಿದು ಹೇಳಿದನು "ನಾಳೆಯಿನ್ನು ಬಂದೆ"

ನಗುತ್ತ ಕೇಶವನೆಂದ "ಈಗಲೇ ಇಷ್ಟು ಲಜ್ಜೆ ಏನೋ?"

ಅವನೂ ನಗುತ್ತಲೇ ಆಡಿದ "ನಿನ್ನ ನಿರ್ಲಜ್ಜತೆಯನ್ನು ನೋಡಿ!"

## (೧೧)

ಮುಖ ತೊಳೆದುಕೊಂಡು ರಾಮಚರಣರು ಮಂಚದ ಮೇಲೆ ಕುಳಿತು ಜಪ ಮಾಡುತ್ತಿದ್ದರು. ದುಲಾರಿ ಒಂದು ಲೋಟ ಹಾಲು ತಂದು ನುಡಿದಳು "ಅಪ್ಪಾ, ಹಾಲು ತಂದಿದ್ದೇನೆ"

ರಾಮಚರಣ ಹೇಳಿದರು "ಅಲ್ಲೇ ಮೇಜಿನ ಮೇಲಿಡು- ತಡೆದು ತೆಗೆದುಕೊಳ್ಳುತ್ತೇನೆ" ಎಂದವರೇ ನೆನಪಾಗಿ ಮಗಳನ್ನು ನೋಡುತ್ತ ಕೇಳಿದರು "ದುಲಾರೀ, ಮೋತೀಲಾಲರ ಚೀಟಿ ಏನಾದರೂ ಬಂದಿರುವದೋ?"

ಲೋಟವಿಡುತ್ತ ದುಲಾರಿ ಅಂದಳು "ಅದೇನೂ ಇಲ್ಲ"

"ನಿನ್ನೆ ಕೇಶವನಿಗೆ ಹೋಗಿಬರಲು ತಿಳಿಸಿದ್ದೆ ಅವನೇನಾದರೂ ಬಂದುಹೋದನೇನು ?"

"ಇಲ್ಲ ಯಾರೂ ಬಂದಿಲ್ಲ"

ರಾಮಚರಣರು ಕೇಶವನಿಗೆ ಮೋತೀಲಾಲನ ಸುದ್ದಿಯನ್ನು ತಿಳಿದು ಕೊಂಡು ಬರಹೇಳಿದ್ದಾರೆ ಇದನ್ನು ಕೇಳಿದ ಕೂಡಲೇ ದುಲಾರಿಗೆ ಎದೆ ಝಲ್ಲೆನಿಸಿತು ಒಂದು ವೇಳೆ-ನಿಜ ಸಮಾಚಾರವನ್ನು ಕೇಶವ ಹೇಳಿಬಿಟ್ಟರೆ ತಂದೆಗೆಷ್ಟು ವ್ಯಥೆಯಾಗಬಹುದು? ಎಂದು ವಿಚಾರಿಸಿ ಅವಳು ಚಿಂತಾ ಕ್ರಾಂತಳಾದಳು ಮುಂದಾಗುವ ಆ ವ್ಯಥೆಯ ವೇಗ ಕಡಮೆ ಮಾಡುವ ಉದ್ದೇಶದಿಂದ ಅದೇ ವಿಷಯ ಮಾತಾಡಲೆಳಸಿದಳು "ಅಪ್ಪಾ"

ಆಳವೂ ಗಂಭೀರವೂ ಆದ ಮಗಳ ವಾಣಿಯಿಂದ ಚಕಿತರಾಗಿ ರಾಮ ಚರಣರಂದರು "ಏನು ಮಗಳೇ ?"

"ಈ ಸಂಬಂಧವನ್ನು ಅವರಿಗೆ ಒತ್ತಾಯಪಡಿಸುವ ಅವಶ್ಯವಿಲ್ಲ"

"ಯಾರಿಗೆ ?"

ಕೊನೆಗೆ ಸರಲವಾಗಿ ನುಡಿದಳು "ಮಾಸ್ತರ ಸಾಹೇಬರಿಗೆ"

ಇನ್ನಷ್ಟು ಆಶ್ಚರ್ಯದಿಂದ ರಾಮಚರಣರು ಕೇಳಿದರು "ಏನೋ ತಾಯಿ, ನಿನ್ನ ಮಾತು ತಿಳಿಯಲಾರವು ಅವರಿಗೆ ಯಾವ ಸಂಬಂಧದಲ್ಲಿ ಒತ್ತಾಯಪಡಿಸುವ ಅವಶ್ಯವಿಲ್ಲ ?"

ದುಲಾರಿಯ ಮೋಗ ಕೆಂಪಡರಿತು ಆದರೆ ಸಂಕೋಚ-ಚಾಂಚಲ್ಯ ಗಳನ್ನು ಕರ್ತವ್ಯಜಾಗೃತಯಿಂದ ಹತ್ತಿಕ್ಕಿ ಧೈರ್ಯ ತಾಳಿ ಹೇಳಿದಳು "ಅವರು ತಮ್ಮ ವಿಚಾರ ಬದಲಿಸಿದ್ದಾರೇನೋ? ಎಂದ ಮೇಲೆ ಈ ವಿವಾಹದ ವಿಷಯಕ್ಕೆ ಅವರಿಗೆ ಆಗ್ರಹಪಡಿಸಲೇನು ಅವಶ್ಯ ?"

ಇದನ್ನು ಕೇಳಿ ರಾಮಚರಣರ ಮೋರೆ ಉಡುಗಿತು ಉದ್ವಿಗ್ನರಾಗಿ ಕೇಳಿದರು "ಇದೇನಮ್ಮ, ಅವರೇನಾದರೂ ನಿನ್ನ ಮುಂದೆ ಆಡಿದ್ದಾರೋ ?"

"ಹೂಂ ಹೇಳಿದ್ದಾರೆ. ಆದರೆ ವಿವರ ಮಾತ್ರ ನನಗೂ ತಿಳಿದಿಲ್ಲ" ಹೃದಯದ ಶಕ್ತಿಯನ್ನೆಲ್ಲ ಒಟ್ಟುಗೂಡಿಸಿ ನುಡಿದಳು. "ಆದರೆ,

ಅಪ್ಪಾ, ವಿವರ ತಿಳಿಯುವದಾದರೂ ಯಾತಕ್ಕೆ? ನಾನು ಅವರಿಗೆ ಬರೆದು ಸಹ ತಿಳಿಸಿದ್ದೇನೆ. ನಿಮ್ಮ ಇಷ್ಟವೆಂದು "

ದುಲಾರಿ ಮೋತೀಲಾಲನಿಗೆ ಕೊಟ್ಟ ಉತ್ತರದಲ್ಲಿ ಸ್ವಾಭಿಮಾನದ ವಿನಾ ಇನ್ನೇನೂ ಇಲ್ಲವೆಂದು ರಾಮುಚರಣರು ತಿಳಿದುಬಿಟ್ಟರು ಈ ಸ್ವಾಭಿಮಾನದ ಗರ್ಭದಲ್ಲಿ ಪ್ರೀತಿಯ ಮಂಗಳ ವೇದನೆ ಎಷ್ಟು ಅಡ ಗಿದೆ, ಎಂಬುದನ್ನು ಅನುಮಾನಿಸುತ್ತ ರೋಗಿ ರಾಮುಚರಣರ ಕಣ್ಣು ಗಳಿಂದಲೂ ಕಿಡಿ ಹಾರಿದವು ಬಾಯಿಂದ ಒಂದು ಶಬ್ದವೂ ಬರಲಿಲ್ಲ ಪತ್ತಿಕ್ಕಿದ ಕ್ರೋಧದಿಂದ ಶರೀರ-ಮನಗಳು ಹುಚ್ಚರಂತಾದವು ಸಮಾಜ ದೊಡನೆ, ಎಡಬಿಡದೆ ಸಂಗ್ರಾಮ ಮಾಡಿ, ಕ್ಷತ-ವಿಕ್ಷತನಾಗುವವನಿಗೆ ಈ ಪುರಸ್ಕಾರವೇ!

ರಾಮುಚರಣರ ಈ ಅವಸ್ಥೆ ನೋಡಿ ದುಲಾರಿಗೂ ಅತ್ಯಂತ ದುಃಖ ವಾಯಿತು ತನ್ನ ದುಃಖಕ್ಕಿಂತ ತಂದೆಯ ದುಃಖ ಹತ್ತು ಪಾಡಿ ಹೆಚ್ಚಾಯಿ ತಲ್ಲ ಎಂದು ಬಲುಗಂದಿದಳು ತಂದೆಯ ಮಂಚದ ಮೇಲೆ ಎರಡೂ ಕೈಯೂರಿ ಬಾಗಿ ದುಲಾರಿ ನುಡಿದಳು "ಅಪ್ಪಾ, ಇದಕ್ಕೆ ದುಃಖಪಡುವ ದೇಕೆ? ಅವರಿಗಾಗಿ ನಾವು ಒಪ್ಪಿಕೊಂಡದ್ದು ಇದೂ ಸಾರ ಅವರ ಮಾತು ಒಪ್ಪಿಕೊಂಡುಬಿಡೋಣ"

ತಂದೆಯ ಮರಣದಿಂದ ವ್ಯಾಕುಲವಾದ ಶೋಕಾತುರ ಸಂತಾನಕ್ಕೆ ಯಾವಾಗ ತಾಯಿ ಸಾಂತ್ವನಪಡಿಸುತ್ತಿರುವಳೋ, ಆಗ ಮಕ್ಕಳ ಹೃದಯ ಹಿಂಡಿಹೋಗುತಿರುವದು ಹಾಗೆ ದುಲಾರಿಯ ಬಾಯಿಂದ ಸಾಂತ್ವನದ ಮಾತು ಕೇಳಿ ರಾಮುಚರಣರು ಬಹು ದುಃಖಿತರಾದರು

ದುಲಾರಿಯ ತಲೆಯ ಮೇಲೆ ಸಹಾನುಭೂತಿಯಿಂದ ಕೈಯಿಟ್ಟು ರಾಮುಚರಣ ಹೇಳಿದರು "ಮಗಳೇ, ನೀನು ಅವನನ್ನು ಕ್ಷಮಿಸಿಬಿಟ್ಟೆಯಾ?"

ತಂದೆಯ ಸ್ನೇಹಭರಿತ ಕಂಗಳನ್ನು ದಿಟ್ಟಿಸಿ ದುಲಾರಿ ನುಡಿದಳು "ನೀನು ಕ್ಷಮಿಸಿಬಿಟ್ಟರೆ ನಾನೂ ಕ್ಷಮಿಸುವೆ ನೀನೇ ಹೇಳುತಿರುವೆ ಅಪ್ಪಾ ಎಲ್ಲಾ ಸುಖದುಃಖಗಳಲ್ಲಿ ಭಗವಂತನ ಕೃಪಾಹಸ್ತವಿರುವದೆಂದು ಅವರಿಂದ ಹೊರತಾದುದೆಂದು ಇದನ್ನೇಕೆ ತಿಳಿಯಬೇಕು?

ಇರುವ ಈ ಏಕಮಾತ್ರ ಪುತ್ರಿಯೊಡನೆ ರಾಮಚರಣರ ಸ್ನೇಹದ ತಂದೆ-ಮಗಳಂತಿಷ್ಟೇ ಇರಲಿಲ್ಲ ಪರಸ್ಪರಾವಲಂಬನ ಹಾಗೂ ಸ್ನೇಹದಿಂದ ಇಬ್ಬರಲ್ಲಿಯೂ ಇಂದ ಸಂಕೋಚಹೀನತೆ ಬೆಳೆದು ಬಂದಿತ್ತು ಅದು ತಾಯಿ ಮತ್ತು ಮಗಳಲ್ಲಿ ಕಾಣಬರುವಂಥಹುದು ರಾಮಚರಣರು ಕೇವಲ ತಂದೆಯಷ್ಟೇ ಅಲ್ಲ , ತಾಯಿಯೂ ನಿಜವೇ

ಮಗಳ ಮಾತು ಕೇಳಿ ರಾಮಚರಣ ಪ್ರಗಾಢ ಸ್ನೇಹಸ್ವರದಿಂದಾಡಿದರು 'ಇಲ್ಲಮ್ಮಾ, ಹೊರತಾದುದೆಂದು ಎಂದೂ ತಿಳಿಯುವದಿಲ್ಲ ಈ ಘಟನೆಯಲ್ಲಿಯೂ ಭಗವಂತನ ಕೃಪಾ-ಹಸ್ತ ಇದ್ದೇ ಇದೆ ಇದರಿಂದ ಮಂಗಲವೇ ಆಗುವದು ಅಮಂಗಲವೆಂದಿಗೂ ಅಲ್ಲ " ಎಂದು ಹೇಳಿ ಮಗಳ ತಲೆಯ ಮೇಲೆ ಎರಡೂ ಕೈಗಳನ್ನಿಟ್ಟು, ಕಣ್ಣು ಮುಚ್ಚಿ ರಾಮಚರಣರು ತಮ್ಮ ಮನದಲ್ಲಿಯೇ, ಏಕಾಗ್ರ ಭಾವದಿಂದ ಆಶೀರ್ವದಿಸತೊಡಗಿದರು

ಪೂರ್ವದಿಕ್ಕಿನ ಕಿಟಕಿಯಿಂದ ಸೂರ್ಯನ ಬಾಲಕಿರಣಗಳು ಕೊಟಡಿಯಲ್ಲಿ ಪ್ರವೇಶ ಮಾಡತೊಡಗಿದ್ದವು ಅವೇನು ಹೊಸ ಪ್ರಕಾಶದ ಮಾರ್ಗವನ್ನು ತೋರುತ್ತಿರಬಹುದೇ ?

ಮೆಟ್ಟಲುಗಳಲ್ಲಿ ಯಾರದೋ ಕಾಲಸಪ್ಪಳ ಕೇಳಿದಂತಾಗಿ ರಾಮಚರಣರಂದರು "ಬಹುಶಃ ಕೇಶವ ಬಂದಿರಬಹುದು "

ದುಲಾರಿ ಹೊರಗೆ ಬಂದು ನೋಡುತ್ತಾಳೆ-ಕೇಶವ ಅವನ ಹಿಂದೆ ಕೃಷ್ಣಚಂದ್ರ ಬರುತ್ತಿದ್ದಾರೆ

ಸಹಸಾ ದುಲಾರಿಯನ್ನು ಎದುರಿಗೆ ನೋಡಿದೊಡನೆ ಉಭಯತರಿಗೂ ಹೇಗೆಹೇಗೋ ಆಯಿತು ಇಲ್ಲಿ ಬಂದಾಗ ಮೊದಲು ದುಲಾರಿ ಭೆಟ್ಟಿಯಾಗಬಹುದೆಂದು ಅವರೆಣಿಸಿರಲಿಲ್ಲ ದುಲಾರಿಗೆ ಏನು ಹೇಳಬೇಕು, ಹೇಗೆ ಹೇಳಬೇಕು , ಇದನ್ನೆಲ್ಲ ನಿರ್ಣಯಿಸಲು ಅವರು ಅಸಮರ್ಥರಾದರು

ನಗುತ್ತ ದುಲಾರಿ ಸ್ವಾಗತಿಸಿದಳು "ಬರಬೇಕು ಅಪ್ಪ ತಮ್ಮದೇ ದಾರಿ ಕಾಯುತ್ತಿದ್ದಾನೆ " ದುಲಾರಿಯ ನಗೆಯಿಂದ ಉಭಯತರ ತೊಡಕು ಬಿಚ್ಚಲಾರಂಭಿಸಿತು.

ಕೇಶವ ಇನ್ನೂ ಮಾತಾಡಲಿಲ್ಲ ಸಹ ದುಲಾರಿ ಒಳಗೆ ನಡೆದುಬಿಟ್ಟಳು

ತಂದೆಯ ಮಂಚದ ಬಳಿಯಲ್ಲಿ ಎರಡು ಕುರ್ಚಿಗಳನ್ನು ಹಾಕುವಷ್ಟರಲ್ಲಿ ಅವರು ಪ್ರವೇಶ ಮಾಡಿದರು ಆಕೆ ಅಲ್ಲಿಂದ ಹೊರಗ ಹೋದಳು

ಅಸಹ್ಯವೂ ಕರುಣವೂ ಆದ ಈ ಸಂಗತಿಯನ್ನು ದುಲಾರಿಯ ಸಮಕ್ಷ ಹೇಳುವಂತಾಗಲಿಲ್ಲ, ಎಂದು ಕೇಶವನು ತುಸು ಸಮಾಧಾನಪಟ್ಟನು "ನಾವು ಮೋತೀಲಾಲನಿಗೆ ಭೆಟ್ಟಿಯಾಗಿ ಬಂದಿದ್ದೇವೆ" ಮುಂದೇನು ಹೇಳಬೇಕೋ ತಿಳಿಯದಂತಾಗಿ ಅವನ ಮಾತು ನಿಂತುಹೋದವು

ಕಾರ್ಮೋಡಗಳ ಮಧ್ಯದಲ್ಲಿ ಪಕ್ಕನೆ ಕೋಲ್ಮಿಂಚು ಕಾಣಿಸಿದರ ಮನಸ್ಸಿನ ಸ್ಥಿತಿ ಹೇಗಾಗುವದೋ, ರಾಮಚರಣರ ಮನಸ್ಸಿನಲ್ಲಿ ಕೆಲವೇಳೆ ಅದೇ ಸ್ಥಿತಿಯಾಯಿತು ಮರುಕ್ಷಣ ಸುದಾರಿಸಿಕೊಂಡು ಸಹಜವಾಗಿ ಹೇಳಿಬಿಟ್ಟರು "ನಿಮಗೆ ವ್ಯರ್ಥ ತೊಂದರೆ ಕೊಟ್ಟೆನು ಅವನೊಡನೆ ಇನ್ನು ಮೇಲೆ ಯಾವ ತರಹದ ಸಂಬಂಧವೂ ನಮ್ಮದಿಲ್ಲ" ಎಂದು ಹೇಳಿ ತುಸು ಮೊದಲು ನಡೆದ ತಮ್ಮ ಮತ್ತು ದುಲಾರಿಯ ಸಂವಾದವನ್ನು ತಿಳಿಸಿದರು

ಲಕ್ಷ್ಯವಿಟ್ಟು ಕೇಳಿ ಕೇಶವ ನುಡಿದ "ನಾವು ದುಲಾರಿಯ ಆ ಚೀಟಿ ನೋಡಿದ್ದೆವು ಆ ಚೀಟಿಯಿಂದ ದುಲಾರಿಯ ಹೃದಯ ಪರಿಚಯ ನಮಗಾಗಿದೆ ಇಂಥ ಸಂಯಮವು ಉಚ್ಚ ಶಿಕ್ಷಣ ಪಡೆದ ಪುರುಷರಿಗೂ ಭೂಷಣಪ್ರಿಯವೆನಿಸುವದು"

ಕೃಷ್ಣಚಂದ್ರನೆಂದ "ಇದರ ರಹಸ್ಯಾದರೂ ಮೋತೀಲಾಲನಲ್ಲಿದ್ದರೆ ?—ನನಗನಿಸುವದೇನೆಂದರೆ, ಮೋತೀಲಾಲ ದುಲಾರಿಗೆ ಎಂದೂ ಯೋಗ್ಯನಲ್ಲ. ಅದಕಾಗಿ ಭಗವಂತ ಹೀಗೆ ಮಾಡಿದ್ದಾನೆ ಇದರಲ್ಲಿ ಹಳಹಳಿಸುವಂಥದೇನೂ ಆಗಲಿಲ್ಲ."

ಬಹುಶಃ ಇನ್ನೂ ಕೃಷ್ಣಚಂದ್ರ ಬಡಬಡಿಸುತ್ತಿದ್ದನೇನೋ ? ಕೇಶವನ ಮೋರೆ ನೋಡಿ ಸುಮ್ಮನಾದನು ಕೇಶವನ ಕಂಗಳಲ್ಲಿ ಒಂದು ರಹಸ್ಯಮಯ ನಗೆ ಆಟವಾಡುತ್ತಿತ್ತು. ಅದರ ಅರ್ಥ ತಿಳಿಯಲು ಕೃಷ್ಣಚಂದ್ರನಿಗೆ ತಡವಾಗಲಿಲ್ಲ. ಅವನು ನಾಚಿದನು

ರಾಮಚರಣರಾಡಿದರು "ನೀನಂದ ಮಾತು ನಿಜವೇ ಕೃಷ್ಣಾ. ಆದರೆ ನಮ್ಮ ಜ್ಞಾನವು ಬಹು ಸಂಕೀರ್ಣ, ನಮ್ಮ ದೃಷ್ಟಿ ಬಹು ಕ್ಷೀಣ

ಕಾರಣ ಅಮಂಗಲದಲ್ಲಿಯೂ ಮಂಗಲ ಅಡಗಿರುವದು ನಮ್ಮ ಕಣ್ಣಿಗೆ ಕಾಣುವದಿಲ್ಲ"

ಇದೇ ಸಮಯದಲ್ಲಿ ದುಲಾರಿ ಕೋಣೆಯಲ್ಲಿ ಪ್ರವೇಶಿಸಿದಳು ಆಕೆಯ ಕೈಯಲ್ಲಿ ಕೆಲವು ಖಾದ್ಯ ಪದಾರ್ಥ ಹಾಗೂ ಎರಡು ಲೋಟ ಹಾಲು ಇದ್ದವು ಅವುಗಳನ್ನು ಮೇಜಿನಮೇಲಿಟ್ಟು, ಆ ಮೇಜನ್ನು ಕೇಶವ–ಕೃಷ್ಣಚಂದ್ರರ ನಡುವೆ ಸರಿಸಿದಳು ದುಲಾರಿಯ ಆಗಮನದಿಂದ ಮಾತು ಅಲ್ಲಿಗೇ ನಿಂತು ಹೋದವು ರಾಮಚರಣರು ದಿಂಬಿನ ಸಹಾಯದಿಂದ ಒರಗಿಕೊಂಡು ಕುಳಿತರು ಕೇಶವನಿಗೆ ಈ ಮೌನ ಸರಿಯೆನಿಸಲಿಲ್ಲ ಅವನೆಂದ, "ದುಲಾರಿ, ನೀನು ತಂದ ಉಪಹಾರ ಇಬ್ಬರಿಗೇನೋ ಸಾಕಷ್ಟು ಇದೆ ನಿಜ ಆದರೆ ಒಬ್ಬ ಕೃಷ್ಣಚಂದ್ರನಿಗ ಮಾತ್ರ ಹೆಚ್ಚಲ್ಲ ನಾನು ಮನೆಯಿಂದ ಉಪಹಾರ ಮಾಡಿಯೇ ಬಂದಿದ್ದೇನ ಇದನ್ನೆಲ್ಲ ಅವನೇ ತೆಗೆದುಕೊಳ್ಳಲಿ"

ದುಲಾರಿ ನುಡಿದಳು "ಹಾಗಾದರೆ, ನಿನಗೆ ಬೇರೆ ಇನ್ನಷ್ಟು ತರುತ್ತೇನ"

ಕೃಷ್ಣಚಂದ್ರ ತುಸು ಕಾತರನಾಗಿ ಹೇಳಿದ "ನಾನು ಅಷ್ಟು ಹೊಟ್ಟೆಬಾಕನೆಂದು ಅವನ ಮಾತಿನಿಂದ ನೀವು ಸಹಜ ನಿರ್ಣೈಸಿಬಿಟ್ಟಿರಾ? ಇಷ್ಟು ಖಾದ್ಯ, ಎರಡು ಲೋಟ ಹಾಲು ಒಬ್ಬನ ಆಹಾರವೆಂದು ಭಾವಿಸಬಹುದೇ?"

ನಾಚಿಕೆಗೊಂಡು ನಸುನಗುತ ದುಲಾರಿ ಆಡಿದಳು "ಹಾಗೇನೂ ಇಲ್ಲ ಆದರೆ–ಇದು ಎಲ್ಲಿ–ತುಸು ಇದೆ"

ನಗುತ್ತ ಕೇಶವ ಮಾತಾಡಿದನು "ಇದರಲ್ಲಿ ತಿಳಿದುಕೊಳ್ಳುವದು, ಅಥವಾ ತಿಳಿಯದಿರುವ ಸಂಬಂಧವೇನು? ಇದು ಅನುಭವದ ಮಾತಾಗಿದೆ. ಬಿಹಾರಿಪುರದಲ್ಲಿ ಪೂರಿ ತಿಂದದ್ದು ಈಗಾದರೂ ದುಲಾರಿಗೆ ನೆನಪಿರಬೇಕು. ನೂರು ತಟ್ಟೆ ಪೂರಿ ತಿಂದು, ನೀರಿನ ಸಂಗಡ ತಿನ್ನಲಿಕ್ಕೆ ಬೇಡಿದ ಕತೆ ಮರೆತುಬಿಟ್ಟೆಯಾ ದುಲಾರೀ?"

ದುಲಾರಿ ನಗುತ್ತ ನುಡಿದಳು. "ಇಲ್ಲ. ನೀನು ಬಹಳ ಬೆಳಿಸಿ ಹೇಳುತ್ತೀ'

ತುಸು ಉತ್ತೇಜಿತನಾಗಿ ಕೃಷ್ಣಚಂದ್ರ ನುಡಿದ "ಅವನು

ಬೇಕಾದ್ದು ಹೇಳಿಕೊಳ್ಳಲಿ ಆದರೆ ಖೀರಿನ ಸಂಗಡ ಪೂರಿ ತಿನ್ನುವದರಲ್ಲಿ ಏನು ಅನುಚಿತ? ಭೋಕ್ತಾ ಪುರುಷರಾದ ಎಲ್ಲಾ ಸಿರಿವಂತರು ಖೀರಿನ ಸಂಗಡ ಪೂರಿ ತಿನ್ನುತ್ತಾರ '

ಖಾದ್ಯ ಪದಾರ್ಥಗಳ ವಿಷಯದಲ್ಲಿ ಗೆಳೆಯರಿಬ್ಬರಿಗೂ ಜಗಳ, ಅವರ ನಡುವ ದುಲಾರಿಯ ಈ ಅವಸ್ಥ ನೋಡಿ ರಾಮಚರಣರು ತಮ್ಮೊಳಗೇ ಪ್ರಸನ್ನರಾಗಿದ್ದರು ಅವರು ಹೇಳಿದರು "ನೀನು ನಿಜ ಹೇಳಿದೆ ಕೃಷ್ಣಾ ಭೋಕ್ತಾ ಪುರುಷರು ಖೀರಿನ ಸಂಗಡ ಪೂರಿ ತಿನ್ನುವದು ನಿಜ ಅದೇನೂ ಅನುಚಿತವಲ್ಲ ಮತ್ತು ಅದರಲ್ಲಿ ನಾಚಿಕೆಪಡುವಂಥ ವಿಷಯವೂ ಇಲ್ಲ ತಿನ್ನಲಾಗದಿದ್ದರ ಮಾತ್ರ ನಾಚಿಕ ಕೇಶವನು ನಿನಗೇನು ಪ್ರಶಸ್ತಿ ಕೊಟ್ಟಿರುವನೋ, ಅದರ ಪರೀಕ್ಷೆ ಒಂದು ದಿನ ನನ್ನ ಮುಂದ ನಡೆಯಲಿ'' ಮಗಳ ಮುಖ ನೋಡಿ ಹೇಳಿದರು ''ಇಂದೇನಾದರೂ ವ್ಯವಸ್ಥೆ ಮಾಡುವಿಯಾ?"

ತುಸು ವಿಚಾರಿಸಿ ದುಲಾರಿ ನುಡಿದಳು ''ಹುಂ ಇಂದು ರಾತ್ರಿ ಆಗಲಿ"

ರಾಮಚರಣರು ಉಭಯತರಿಗೆ ರಾತ್ರಿ ಔತಣವಿತ್ತರು. ಮೋತೀಲಾಲನ ಪ್ರಸಂಗದಿಂದ ಎಲ್ಲರಿಗಾದ ಮನೋವ್ಯಥೆ ಈ ಹಾಸ-ಪರಿಹಾಸದಿಂದ ಕಳೆದು ಹೋಯಿತು ಈಗ ಎಲ್ಲರೂ ಪ್ರಸನ್ನರಾಗಿದ್ದರು

## (೧೨)

ಕೆಲ ದಿನಗಳನಂತರ ರಾಮಕಲಿ ಮೂರನೇ ಪ್ರಹರದಲ್ಲಿ ತನ್ನ ಕೊಟಡಿಯಲ್ಲಿ ಕುಳಿತು ರಾಮಾಯಣ ಓದುತ್ತಿದ್ದಾಳೆ ಲಕ್ಷ್ಮಣನು ಸೀತಾದೇವಿಯ ಆಜ್ಞೆಯಿಂದ ಮಾಯಾಮೃಗದ ಬೆನ್ನಟ್ಟಿ ಹೋಗಿದ್ದಾನೆ ಆಗ ಸಾಧುವೇಷದಿಂದ ರಾವಣನು ಬಂದು ಭಿಕ್ಷೆಗಾಗಿ ನಿಂತುಕೊಂಡನು. ಕೇಶವನು ಒಳಗೆ ಬಂದು ಕೂಗಿದ್ದು ಇದೇ ಸಮಯ ''ಅತ್ತಿಗೆ''

ರಾಮಕಲಿ ಪುಸ್ತಕದಿಂದ ಮೊಗವೆತ್ತಿ ಮುಗುಳುನಗೆಯಿಂದ ಕೇಳಿದಳು ''ಏನು, ಹೊಂಬಣ್ಣದ ಮೃಗ ತಂದುಬಿಟ್ಟಿರಾ?''

ಕೇಶವನೂ ನಗುತ್ತಿದ್ದನು "ನಿಜವಾಗಿ ತಂದಿದ್ದೇನೆ ಬನ್ನಿ, ನೋಡುವಾ"

"ಇಲ್ಲೇ ತೆಗೆದುಕೊಂಡು ಬನ್ನಿರಿ ಗೆರೆ ದಾಟಿ ಹೊರಗೆ ಹೋಗಲು ಭಯವಾಗುತ್ತದೆ"

ಕೇಶವನು ತುಸು ತೊಡಕಿನಲ್ಲಿ ಸಿಲುಕಿದಂತಾಡಿದನು "ಹಾಗಲ್ಲ ಅತ್ತಿಗೆ ನನ್ನ ಓರ್ವ ಮಿತ್ರ ಮಾಲತಿಯನ್ನು ನೋಡಬಂದಿದ್ದಾನೆ ಅವನು ವಿದ್ಯಾ-ಬುದ್ಧಿ-ಗುಣಗಳಲ್ಲಿ ನನಗಿಂತ ತುಸು ಕಡಮೆ ಎನಿಸಿದರೆ, ನೀನು ಹೇಳಿದಂತೆ ಕೇಳುತ್ತೇನೆ'

ರಾಮುಕಲಿ ಕೇಶವನಿಗೆ ಮಾಲತಿಯನ್ನು ಲಗ್ನವಾಗಲು ಹೇಳಿ ನೋಡಿದ್ದಳಷ್ಟೇ? ಆದರೆ ಕೇಶವನು ಆಕೆಯ ಮಾತು ಕೇಳಿರಲಿಲ್ಲ ಇದರಿಂದ ರಾಮುಕಲಿಯ ಸ್ವಾಭಿಮಾನ ನೊಂದುಕೊಂಡಿತ್ತು ಮೆಲ್ಲಗೆ ಅದು ಮಾಯಬಂದಿತ್ತು ಪುನಃ ಆತ ಬಡಿದೆಬ್ಬಿಸಿದ ಆ ಸ್ವಾಭಿಮಾನದ ಗಡಸಿನಿಂದಲೇ ಹೇಳಿದಳು "ನನಗೆ ಅವಶ್ಯವಿಲ್ಲ"

ಕೇಶವ ನಗುತ್ತ ನುಡಿದನು 'ನಾನು ನನ್ನೊಡನೆ ಒರ ಹಚ್ಚಿ ಹೇಳಿದ್ದೇನೆಂದು ನೀನು ಏಳುವದಿಲ್ಲವೋ? ಒಳ್ಳೇದು, ಸರಿಮಾಡಿ ಹೇಳುತ್ತೇನೆ ನೋಡಲಿಕ್ಕೆ ಅಣ್ಣನಂತೆ ಸುಂದರ, ಓದು-ಬರಹ ಅವನಿಗಿಂತ ಹೆಚ್ಚು ಮತ್ತು ದ್ರವ್ಯದಿಂದ ಮೂರು ಸಾರೆ ಅಣ್ಣನನ್ನು ಕೊಂಡು ತೆಗದುಕೊಳ್ಳುತ್ತಾನೆ ಹೊರಗೆ ಮೋಟಾರು ನಿಂತುಕೊಂಡಿದೆ ನೋಡಿದರೆ ಎಲ್ಲಾ ತಿಳಿಯುವದು 'ಸಾಯಿಲೆಂಟ ಮಿನರ್ವಾ' ಹದಿನೆಂಟು ಸಾವಿರ ರೂಪಾಯಿ ಬೆಲೆ

ಸುಳ್ಳು ಕೋಪದಿಂದ ರಾಮುಕಲಿ ನುಡಿದಳು "ಅವರ ಉಪಮೆಯನ್ನು ಕೊಡುತ್ತೀರಿ, ಇದರಿಂದ ನಾನು ಮರುಳಾಗುವೆನೆಂದು ತಿಳಿಯುತ್ತೀರಾ?"

ಕೇಶವನ ಮುಖದಲ್ಲಿ ನಗೆ ಇತ್ತು. "ಮರುಳಾಗದಿರುವದೇ ಯೋಗ್ಯ ಪತಿವ್ರತೆಯರ ಲಕ್ಷಣವೇ ಅದು"

ರಾಮುಕಲಿಯ ಮುಖ ಅರಳಿತ್ತು. "ಮಾತಿನಲ್ಲಿ ನಿಮ್ಮನ್ನು ಜಯಿಸುವವರು ಯಾರು? ಮಾತಿನ ಮಲ್ಲರು ನೀವು"

"ಅದಕಾಗಿಯೇ ಮಾತು ಬೆಳಸದೇ ಅಣ್ಣನಿಗೆ ತೀವ್ರ ತಿಳಿ-ಬಿಡು. ಹೇಳು—ಪ್ಯಾರೇಶಂಕರ ಪಾಂಡೇಯವರ ಮಗ ಕೃಪಾಶಂಕರ ನರ ಕೇಳಿದ ಕೂಡಲೇ ಅವನಿಗೆ ಎಲ್ಲಾ ಗೊತ್ತಾಗುತ್ತದೆ. ಆಗ ತಿಳಿಯಲಿಕ್ಕೆ ನನಗೂ ತಡವಾಗುವದಿಲ್ಲ"

ಹೋಗಹೋಗುತ್ತ ನುಡಿದನು: "ಸ್ವಲ್ಪ ಎಲೆ ಹೊರಗೆ ಕಳಿಸಿ ಕೊಡು. ಆ ಬಣ್ಣದಡಿಕೆಯ ಪುಡಿ ಇನ್ನೂ ಇರುವದಷ್ಟೇ? ನಿನ್ನ ಕೈಯಿಂದ ಊಟ ಮಾಡುವ ಲೋಭ ಅದರಿಂದ ಇನ್ನಷ್ಟು ಅಧಿಕವಾಗುತ್ತದೆ"

ಹೊರಳಿ ಅಣಕಿಸುತ್ತ ರಾಮಕಲಿ ಆಡಿದಳು "ಒಳ್ಳೆ ಒಳ್ಳೆ ಒಳಿಯುವವರು ನೀವು"

ನಗನಗುತ್ತ ಕೇಶವ ಹೊರಟುಹೋದ.

ಆ ಸಮಯದಲ್ಲಿ ಅನಂತನು ಒದಿಯ ಮತ್ತೊಂದು ಕೋಟಡಿಯಲ್ಲಿ ಜಮಾ-ಖರ್ಚು ಮೇಳಗೂಡಿಸುವದರಲ್ಲಿ ಮಗ್ನನಾಗಿದ್ದನು. ಜಮೆಯ ಕಿಂತ ಖರ್ಚಾದದ್ದು ಹೆಚ್ಚಾಗಿದ್ದಿತ್ತು. ಆದರೂ ರೋಖು ಹಣ ಕೈಯಲ್ಲಿ ಉಳಿದಿತ್ತು. ಇದೆಲ್ಲಿಯೂ ಅವನಿಗೆ ತಿಳಿಯದಾಗಿದೆ. ಆಗಲೇ ರಾಮಕಲಿ ಒಳಗೆ ಪ್ರವೇಶಿಸಿ ಹೇಳಿದಳು. "ಯಾರೋ ಪ್ಯಾರೇಶಂಕರ ಪಾಂಡೇಯವರ ಮಗ ಕೃಪಾಶಂಕರ ಮಾಲತಿಯನ್ನು ನೋಡಬಂದಿದ್ದಾರೆ"

ಕೇಶವ ಹೇಳಿದ ಮಾತೆಲ್ಲ ನಿಜವಾಗಿದ್ದವು. ರಾಮಕಲಿಯ ಮಾತು ಕೇಳಿ ಅನಂತ, ಅನಂತನ ಮಾತು ಕೇಳಿ ರಾಮಕಲಿ ಆನಂದ-ವಿಸ್ಮಯದಲ್ಲಿ ಮುಳುಗಿಹೋದರು. ಕೃಪಾಶಂಕರನೆಂದರೆ ಸ್ವರ್ಗೀಯ ಪ್ಯಾರೇಶಂಕರ ಪಾಂಡೇಯವರ ಏಕಮಾತ್ರ ಪುತ್ರ. ಪ್ರತಿವರ್ಷವೂ ಒಂದೂವರ ಲಕ್ಷ ಆದಾಯ ಬರುವ ಶ್ರೀಮಂತ. ಅಲ್ಲದೆ ವಿಶ್ವವಿದ್ಯಾಲಯದ ಜಗಮಗಿಸುವ ಒಂದು ರತ್ನ. ಅರ್ಥಾತ್ ಲಕ್ಷ್ಮೀ-ಸರಸ್ವತಿ ಇವರಿಬ್ಬರ ಕೃಪೆಗೂ ಪಾತ್ರ.

ಅನಂತ ನುಡಿದ "ಬಹಳ ಪುಣ್ಯದಿಂದ ಮಾಲತಿಯ ಈ ವಿವಾಹ ವಾಗಬೇಕು. ನಾನು ಹೊರಗೆ ಹೋಗುತ್ತೇನೆ. ನೀನು ಮಾಲತಿಯನ್ನು ಸಿಂಗರಿಸು"

‘ ಮಾಲತಿಯನ್ನು ಸಿಂಗರಿಸಿ ತೋರಿಸುವ ಅವಶ್ಯವಿಲ್ಲ. ಮನಸ್ಸಿಗೆ ಬರುವದಿದ್ದರೆ, ಹಾಗೇ ಬರುತ್ತಾಳೆ ”

ಅನಂತ ನಗುತ್ತ ನುಡಿದನು “ ನಿನ್ನ ಮಾತಿನಿಂದ ತಿಳಿಯಬರುವದೇನೆಂದರೆ, ನಿಮ್ಮಿಬ್ಬರಲ್ಲಿ ಇದೊಂದು ದುಃಸಾಹಸವೇ ತಲೆಹಾಕಿದ ಹಾಗಿದೆ. ಈ ನನ್ನ ಕಣ್ಣುಗಳು ಮಹಡಿಯಿಂದ ಮುಚ್ಚುಮರೆಯಾಗಿ ಯಾವ ವಸ್ತುವನ್ನು ಸೆರಗುಕೊಟ್ಟು ನೋಡಿದವೋ, ಹಾಗೆ ಜಗತ್ತಿನ ಎಲ್ಲ ವಸ್ತುಗಳೂ ಇರುವವೆಂದು ನಿನ್ನ ಅಭಿಪ್ರಾಯವೋ ? ”

ರಾಮಕಲಿ ನಾಚಿಕೆಯಿಂದಾಡಿದಳು “ಅದೇನೂ ಅಲ್ಲ. ಕಳವಿನ ವಸ್ತುಗಳು ರುಚಿಯಾಗಿರದಿದ್ದರೂ, ರುಚಿಸುತ್ತವವು. ಕಳ್ಳನೋಟದಿಂದ ನೋಡುತ್ತಿದ್ದ ಕಾರಣ ವಸ್ತು ಚೆನ್ನಾಗಿ ಕಂಡಿತಷ್ಟೇ. ಅದರಲ್ಲಿ ವಸ್ತು-ಗುಣಾಗ್ರಣೀನೂ ಇರಲಿಲ್ಲ ”

ಅನಂತನು ಸ್ನೇಹದಿಂದ ಪತ್ನಿಯ ಕಪೋಲಗಳನ್ನು ಹಿಡಿದು ಅಲ್ಲಾಡಿಸುತ್ತ ನುಡಿದ “ಹಾಗಲ್ಲ, ಅಯ್ಯಾ, ಹಾಗಲ್ಲ. ಜಗತ್ತಿನ ವಸ್ತುಗಳೆಲ್ಲ ಸಮಾನವಾಗಲಾರವು. ಕೆಲವು ವಸ್ತು ಹೀಗೇ ಸುಂದರವಾಗಿ ಕಾಣುತ್ತವ. ಇನ್ನು ಕೆಲವದನ್ನು ಹೊನ್ನಿನಿಂದ ಮುಚ್ಚಿ ಸಿಂಗರಿಸಿದರೂ ಸುಂದರ ಕಾಣುವದೇ ಇಲ್ಲ ”

ರಾಮಕಲಿ ನಗುತ್ತ ನುಡಿದಳು “ಅದೆಲ್ಲ ನೀವು ನನ್ನ ಮೇಲಿಟ್ಟಿರುವ ಪ್ರೀತಿ. ಹಾಗೆಂದು ನಾನು ಸುಂದರಿ ಕಾಣುತ್ತೇನೆ. ಅದೇಕೆ ಮಾಲತಿ ನನಗಿಂತ ಎಷ್ಟೋ ಹೆಚ್ಚಿನ ಸುಂದರಿ ”

ವ್ಯಂಗ ಮಿಶ್ರಿತ ಗರ್ವ ಕೂಡಿದ ದನಿಯಿಂದ ಅನಂತನಾಡಿದ “ಇಷ್ಟರಿಂದಲೇ ತಿಳಿದುಕೋ. ನಾನೆಷ್ಟು ಶುದ್ಧ ಪುರುಷ! ಹೆಂಡತಿಗಿಂತ ನಾದಿನಿಯನ್ನು ಹೆಚ್ಚು ಸುಂದರಳೆಂದು ತಿಳಿಯಲಿಲ್ಲ. ಇಂಥ ಮನುಷ್ಯರು ಜಗತ್ತಿನಲ್ಲಿ ವಿರಲ. ”

ನಗುತ್ತ ರಾಮಕಲಿ ನುಡಿದಳು “ಒಳ್ಳೇ ಮಹಾತ್ಮರು ನೀವು. ಅದಕ್ಕಾಗಿಯೇ ಮಹಡಿಯಲ್ಲಿ ಮರೆಗೆ ನಿಂತು ನೋಡುತ್ತಿದ್ದಿರೇನೋ! ಆಗ ನಾನು ಹೆಂಡತಿಯೂ ಇರಲಿಲ್ಲ. ಮಾಲತಿ ನಾದಿನಿಯೂ ಆಗಿರಲಿಲ್ಲ ’

‘ ಆಗದಿದ್ದರೇನು ? ಅದು ಆಗಿಹೋಯಿತಲ್ಲ !

ಉಭಯತರಲ್ಲಿ ಇನ್ನೂ ಹೀಗೇ ರಸಭರಿತ ಮಾತುಗಳು ಎಷ್ಟೊತ್ತು ಸಾಗುತ್ತಿದ್ದವೋ ಯಾರಿಗೆ ಗೊತ್ತು? ಅನಂತ ಯಾರದೋ ಕಾಲ ಸಪ್ಪಳ ಕೇಳಿ ಹೊರಳಿದರು ಅಷ್ಟರಲ್ಲಿ ಕೇಶವ ಬಂದು ಹೇಳಿದನು 'ಅಣ್ಣಾ, ಕೃಪಾಶಂಕರರು ಬಹಳ ಹೊತ್ತು ನಿಲ್ಲುವಂತಿಲ್ಲ ಕಾರಣ ನೀನು ತುಸು ಭೆಟ್ಟಿ ತೆಗೆದುಕೋ"

ಲಗುಬಗೆಯಿಂದ ಅನಂತ ನುಡಿದನು "ಹಾಂ ನಾನು ಹೊರಟು ನಿಂತಿದ್ದೆ" ಎಂದವನೇ ಈ ಸಂಬಂಧದ ವಿಷಯದಲ್ಲಿ ತನ್ನ ಪೂರಾ ಸಮ್ಮತಿಯನ್ನು ತೋರಿಸಿ, ಕೂಡಿ ಬರುವಂತೆ ಯತ್ನಿಸುವದಕ್ಕಾಗಿ ಹೊರಗೆ ಹೊರಟು ಹೋದನು

"ಅತ್ತಿಗೆ, ನಿನಗೆ ಈ ಸಂಬಂಧ ಒಪ್ಪಿಗೆಯೋ, ಇಲ್ಲವೋ? ನಿಜ ಹೇಳು"

"ಒಪ್ಪಿಗೆ ಏನೋ ಇದೆ ನಿಜ ಕೇಳಬೇಕೆಂದು ಇಚ್ಛಿಸುವಿರಾ? ನೀವು ಏನು ಹೇಳಿದರೂ ನಾನು ಒಪ್ಪಿಕೊಳ್ಳಲಾರೆ"

"ಮಾಲತಿಯ ಲಗ್ನವಂತೂ ಮೊದಲು ಆಗಲಿ ನಿಜವಾಗಿ ನಿನಗೆ ಮುಂದೆ ಔಷಧ ಕೊಡಿಸಬೇಕಾಗುವದು ನಿನ್ನ ತಲೆ ಕೆಟ್ಟುಹೋಗಿದೆ"

ನಗುತ್ತ ರಾಮಕಲ ನುಡಿದಳು 'ನನ್ನ ಮಾತಿನಲ್ಲಿ ವಿಶ್ವಾಸವಿಲ್ಲದವರು ಯಾಕ ಕೇಳುತ್ತೀರಿ?"

"ನಿನ್ನ ಮಾತಿನಲ್ಲೇನೋ ವಿಶ್ವಾಸವಿಡುತ್ತೇನೆ ಎಂದೇ-ನಿನ್ನ ತಲೆ ಸರಿಯಾಗಿಲ್ಲೆಂದು ಹೇಳುವದು ಸಾಕು, ಈ ಸಮಯದಲ್ಲಿ ಇವೆಲ್ಲ ಮಾತುಗಳು ತುಸು ಮಾಲತಿಯನ್ನು ಸಿಂಗಾರ ಮಾಡಲ್ಲ"

ರಾಮಕಲಿ ನಗುತ್ತಲೇ "ಸಿಂಗಾರವಾಗಿದ್ದಾಳ ನೀವು ಹೋಗಿ ಬೇಕಾದರೆ ನೋಡಿರಲ್ಲ!"

ಸರಿಯಾದ ಕೋಪ ತಾಳಿ ಕೇಶವನೆಂದ "ನಿನಗ ಹೇಳಬಂದದ್ದೇ ನನ್ನ ತಪ್ಪು ನೀನು ನೋಡಿದರೆ—ನನ್ನ ವಿರುದ್ಧ ಪಕ್ಷದಾಕೆ"

ರಾಮಕಲಿ ನಗೆಯಿಂದಲೇ ಉತ್ತರಿಸಿದಳು 'ಅಮ್ಮಯ್ಯ, ಹಾಗಲ್ಲ ನಾನು ಸ್ವತಃ ನೋಡಿದ್ದೇನೆ ಆಕೆ ಸಿದ್ಧಳಾಗಿದ್ದಾಳೆ ಸಿಂಗಾರ ಮಾಡುವ ಅವಶ್ಯವಿಲ್ಲ ಹುಂ ನಾನು ಹೋಗುತ್ತೇನೆ ಉಪಹಾರದ ಸಿದ್ಧತೆ

ಮಾಡಬೇಕು. ನಿಮ್ಮ ಕೊಠಡಿಯ ಬದಿಯಲ್ಲಿ ಸಣ್ಣ ಮೇಜು, ನಾಲ್ಕಾರು ಕುರ್ಚಿ ಇಡುತ್ತೇನೆ ''

''ಹಾಗೇ ಮಾಡು. ನಾನಷ್ಟು ಮಾಲತಿಯನ್ನು ಕರೆದುಬರುತ್ತೇನೆ" ಎಂದು ಹೇಳಿ ಮಾಲತಿಯ ಬಳಿಗೆ ಹೋದನು.

ಆಗ ಮಾಲತಿ ಒಂದು ಕುರ್ಚಿಯ ಮೇಲೆ ಕುಳಿತು, ಏಕಾಗ್ರಚಿತ್ತದಿಂದ ಒಂದು ಮಕಮಲ್ಲಿನ ವಸ್ತ್ರಕ್ಕೆ ರೇಶಿಮೆಯಿಂದ ಕಸೂತಿ ಹಾಕುತ್ತಿದ್ದಳು. ತೆರೆದಿರುವ ಪಶ್ಚಿಮ ದಿಕ್ಕಿನ ಕಿಟಕಿಯಿಂದ ಸೂರ್ಯ ಕಿರಣಗಳು ಒಂದು ಮಾಲತಿ ಮುಖದ ಮೇಲೆ ಬಿದ್ದಿದ್ದವು. ಅದರಿಂದ ಮಾಲತಿಯ ಮುಖವು ಇನ್ನಷ್ಟು ನಿರ್ಮಲವಾಗಿ ಕಾಣಲಾರಂಭಿಸಿತು. ಯುದ್ಧಕ್ಕೆ ಹೊರಡಲನುವಾದ ಸೈನಿಕ ಹೇಗೆ ತನ್ನ ಶಸ್ತ್ರವನ್ನು ನೋಡಲು ನೋಡಿಕೊಳ್ಳುವನೋ ಹಾಗೆ ಕೇಶವ ನೋಡುತ್ತ ನಿಂತುಕೊಂಡನು. ಅವನೆಂದುಕೊಂಡ–ಮಾಲತಿಯು ಕೃಷ್ಣಾ ಶಂಕರನ ಮನಸ್ಸಿಗೆ ಒಪ್ಪಿಗೆಯಾಗುವಲ್ಲಿ ಸಂದೇಹವೇನೂ ಇಲ್ಲ.

ಬೆಚ್ಚಿ ಮಾಲತಿ ಎದ್ದು ನಿಂತಳು.

"ಏನಣ್ಣಾ"

ಏಕಾಗ್ರಭಾವದಿಂದ ತಲೆಯಿಂದ ಕಾಲವರೆಗೆ ಎರಡು–ಮೂರು ಸಾರ ನೋಡಿದನಂತರ ಕೇಶವನೆಂದ. "ಮಾಲತೀ, ನೀನು ಒಂದು ಸಾರ ಆ ಚಂದ್ರಕಾಳೀ ಬಣ್ಣದ ಮುದ್ರಾಸೀ ಪತ್ತಲ ಉಟ್ಟುಕೊಂಡರೆ ಹೇಗೋ?"

ಮಾಲತಿ ಅವನ ಮನೋಭಿಪ್ರಾಯ ಅರಿತಿರಲಿಲ್ಲ. ನಕ್ಕು ಬಿಟ್ಟಳಷ್ಟೇ. "ಮನೆಯಲ್ಲಿರುವಾಗ ಅದನ್ನು ಉಟ್ಟುಕೊಂಡರೆ ಏನಷ್ಟು?" 'ಮನೆಯಲ್ಲೇಕೆ? ತುಸು ವೇಳೆ ಹೊರಗೆ ಹೋಗಬೇಕಾಗಿದೆ. ನಮ್ಮ ಮನೆ ಮುಂದೆ ಒಂದು ಮೋಟರು ನಿಂತುಕೊಂಡಿದೆ. ಅದನ್ನು ಕಂಡಿದ್ದೀಯಾ?''

"ಇಲ್ಲ" ಎಂದವಳೇ ಕಿಟಕಿಯಿಂದ ಬೀದಿಯ ಕಡೆಗೆ ನೋಡಿದಳು. ಒಮ್ಮೆಲೇ ನುಡಿದಳು 'ಓಹೋ' ಬಹಳ ಅಂದವಾದ ಮೋಟರು. ಇದು ಯಾರ ಮೋಟರು ಕೇಶವಣ್ಣಾ?'

'ಬಲ್ಲೆಯಾ? ಮೋಟರು ನಮ್ಮದು ಮಾಡಿಕೊಳ್ಳಬೇಕೆಂದು ವಿಚಾರ ನಡೆದಿದೆ.'

'ಕೊಂಡುಕೊಳ್ಳುವಿರಷ್ಟೇ?''

"ಹಾಂ ಒಂದು ರೀತಿಯಿಂದ ಹಾಗೆಂದರೂ ಸರಿಯೇ

ಕೇಶವನ ಮಾತಿಗೆ ಮಾಲತಿ ನಗಲಾರಂಭಿಸಿದಳು 'ನೀನು ಕೇಶವಣ್ಣಾ, ಎಂದಾದರೂ ಸರಳ ಉತ್ತರ ಕೊಟ್ಟೀಯಾ?"

ಅದನ್ನು ಲಕ್ಷಿಸದೇ ಕೇಶವನೆಂದ "ಹುಂ ನಿನಗೆ ಕರೀಬ್ಲಾಉಝು ಹಚ್ಚು ಒಪ್ಪುವದು"

"ಅಕ್ಕ, ರಾಜರಾಣಿ ಅವರೂ ಬರುವರೋ?"

"ಅವೆಲ್ಲ ನಂತರದ ಮಾತು ನೀನು ಸಿದ್ಧಳಾಗಿ ಅತ್ತಿಗೆಯ ಬಳಿಗ ಹೋಗು ತಡಮಾಡಬೇಡ ನಾನು ಹೊರಗಿರುತ್ತೇನೆ ಹೆಚ್ಚೆಂದರ ಮೂರು ನಿಮಿಷದಲ್ಲಿ ಬರಬೇಕು" ಎಂದು ಹೇಳಿ ಕೇಶವ ಕೋಣೆಯ ಬಾಗಿಲು ಹಾಕಿಕೊಂಡು ಹೊರಗೆ ಹೋದನು

ಒಂದು ಕ್ಷಣ ಮಾತ್ರ ಮಾಲತಿ ಅವಾಕ್ಕಾದಳು ಕೇಶವನ ಮಾತು ಕತೆಗಳಿಗೆ ಆಕೆ ಚಕಿತಳಾಗಿದ್ದಳು ಆದರೆ ಮೂರು ನಿಮಿಷ ಸಮಯ, ವಿಚಾರಕ್ಕೆಲ್ಲಿ ಅವಕಾಶ? ಕೇಶವನ ಆದೇಶದಂತೆ ಅರಿವೆ ತೊಟ್ಟು ಹೊರಗೆ ಬಂದಳು

ನೋಡಿ ಕೇಶವನೆಂದ. 'ಹಾಂ ಚನ್ನಾಗಿದೆ ಇನ್ನು ನಡೆ ಅತ್ತಿಗೆ ಹತ್ತಿರ'

ಆಗ ರಾಮಕಲಿ ಕುರ್ಚಿಗಳನ್ನು ಹಾಕುತ್ತಿದ್ದಳು ದೂರದಿಂದ ಮಾಲತಿಯ ವೇಷ ನೋಡಿ ಬಾಯ್ದೆರೆದು ನೋಡಲಾರಂಭಿಸಿದಳು

ಮಾಲತಿ ಸನಿಯದಲ್ಲಿ ಬಂದಕೂಡಲೆ ಆಕೆಯ ಗಲ್ಲಕ್ಕೆ ಮುತ್ತಿಟ್ಟು ಹೇಳಿದಳು ನೀವೇನು ಕಡಿಮೆಯವರಲ್ಲ, ಮಾಲತಿಯ ವೇಷ ಬದಲಿಸಿ ಬಿಟ್ಟಿರಿ

ಮಾಲತಿ ನುಡಿದಳು "ಕೇಶವಣ್ಣ ಹೇಳಿದ ಮೋಟಾರಿನಲ್ಲಿ ಕುಳಿತು ಹೊರಗೆ ಹೋಗುವದಿದೆ ಮತ್ತು ನನಗೆ—''

ನಡುವೆ ಕೇಶವನಂದ. ''ಒಂದು ತಪ್ಪು ಮಾತಾಡುವೇ ಮಾಲತೀ. ಮೋಟಾರಿನಿಂದ ಹೊರಗೆ ಹೋಗುವದು, ಎಂದೇನೂ ನಾನೂ ಹೇಳಿಲ್ಲ ಹೊರಗೆ ಹೋಗಬೇಕಾಗುವದು ಮತ್ತು ಮೋಟರು ನಿಂತುಕೊಂಡಿದೆ. ಇವೆರಡನ್ನೂ ನೀನು ನಿನ್ನ ಸ್ಫೂರ್ತಿಯಿಂದ ಮೇಳಗೂಡಿಸಿಕೊಂಡಿರುವಿ."

ಮಾಲತಿ ಆಶ್ಚರ್ಯದಿಂದ ಕೇಳಿದಳು "ನೀನು ಹೇಳಲಿಲ್ಲವೇ ಕೇಶವಣ್ಣಾ, ಮೋಟರು ನಮ್ಮದೇ ಆಗುವದೆಂದು"

ಶಾಂತಭಾವದಿಂದ ಕೇಶವ ನುಡಿದನು "ಈಗಾದರೂ ಹಾಗೇ ಹೇಳುತ್ತೇನೆ ಅದರ ಸಿದ್ಧತೆ ಎಲ್ಲ ಆಗಿದೆ. ನನ್ನ ವಿಶ್ವಾಸವಿರದಿದ್ದರೆ ಅತ್ತಿಗೆಯನ್ನು ಕೇಳು"

"ನೀವೊಳ್ಳೇ ರಕ್ಕರು ಏನು ಬೇಕೋ ಅದನ್ನೆಲ್ಲ ಮಾಡುತ್ತೀರಿ" ಎಂದು ಮಾತಾಡುತ್ತ ಮೇಜಿನ ಮೇಲೆ ಬಿಳಿಯ ವಸ್ತ್ರವೊಂದನ್ನು ಹಾಸಿದಳು ರಾಮಕಲಿ ನೀವೆಲ್ಲ ಇಲ್ಲಿಯೇ ಇರಿ ನಾನು ಉಪಹಾರ ತರುತ್ತೇನೆ

ಇದನ್ನೆಲ್ಲ ಕೇಳಿ ಮಾಲತಿ ಮೈ ನಡುಗಿತು ಗುಡುಗು ಕೇಳಿದಳೇನೋ ತಿಳಿಯಲು ತಡವೇನೂ ಆಗಲಿಲ್ಲ ಲಜ್ಜಾ-ಸಂಕೋಚಗಳಿದ್ದರೂ ಕುತೂಹಲ ತಡೆಯಲಾಗಲಿಲ್ಲ ಕೇಳಿಬಿಟ್ಟಳು "ಇಲ್ಲಿ ಯಾರ ಉಪಹಾರ ಕೇಶವಣ್ಣಾ" "ಆ ಮೋಟರದ ಮಾಲಕ ಮತ್ತು ನನ್ನ ಪರಮ ಮಿತ್ರನದು ಮಾತ್ರ ಉಪಹಾರ ಮಾಡಿಸುವ ಭಾರ ನಿನ್ನದು"

ಸಂಕಟದಿಂದುಸುರಿದಳು "ನನ್ನಿಂದಾಗದು"

ಆಶ್ಚರ್ಯದಿಂದ ಕೇಶವ ಕೇಳಿದ "ಇದೇನು ಹೇಳುವೆ ಮಾಲತೀ ಪುರಾಣ ಕಾಲದಲ್ಲಿ—"

ಇಷ್ಟರಲ್ಲಿ ರಾಮಕಲಿ ಉಪಹಾರದ ಸಾಮುಗ್ರಿಗಳನ್ನು ತೆಗೆದುಕೊಂಡು ಬಂದಳು ಆಕೆ ಮೇಜಿನ ಮೇಲೆ ಅವುಗಳನ್ನಿಡುತ್ತ ನುಡಿದಳು "ಈಗ ಪುರಾಣ ಕಾಲ ಏನು ತಪ್ಪು ಮಾಡಿತು? ಅದನ್ನೇಕೆ ಎಳೆತಂದು ಉಪನ್ಯಾಸ ಹೇಳುತ್ತೀರಿ?"

ರಾಮಕಲಿಯು ಕಡೆಗೆ ಹೊರಳಿ ಅಣಕಿಸುತ್ತ ಕೇಶವ ಹೇಳಿದನು "ಪುರಾಣ ಕಾಲದಲ್ಲಿ ಗೃಹಸ್ಥರು ಅತಿಥಿ ಸತ್ಕಾರಕ್ಕಾಗಿ, ಬೀದಿಯಿಂದ ಅತಿಥಿಗಳನ್ನು ಹಿಡಿದು ತರುತ್ತಿದ್ದರು ಈಗ ಮಾಲತಿ ಹೇಳುತ್ತಾಳೆ ನನ್ನಿಂದಾಗುವದಿಲ್ಲ ನೀನಾದರೂ ಹೇಳು ಅತ್ತಿಗೆ, ಇದೇನು ರೀತಿ?"

ವ್ಯಂಗಮಿಶ್ರಿತವಾಗಿ ತುಸು ಗಂಭೀರತೆಯಿಂದ ರಾಮಕಲಿ ಅಂದಳು "ನಿಮ್ಮ ಮಾತೇನೋ ನಿಜ ಆದರೆ ಈಗ ತುಸು ಹೆಚ್ಚು ಕಡಮೆ ಆಗಿದೆ"

'ನಿನ್ನ ಬುದ್ಧಿಯಲ್ಲಿ ತುಸು ಹೆಚ್ಚು-ಕಡಮೆ ಆಗಿದೆ ಅದಕಾಗಿ ಮಾಲತಿಯ ಬೆನ್ನು ಕಟ್ಟುತ್ತೀ ಅಷ್ಟೇ''

''ಅದೇನೂ ಇಲ್ಲ. ಪುರಾಣ ಕಾಲದಲ್ಲಿ ಹೊಸ ಕಾಲದ ಮಾತು ಬಂತು ಹೇಗೂ ಇರಲಿ, ಮಾಲತಿ ಎಂದೂ ನಿಮ್ಮ ಮಾತು ಕೇಳಿಲ್ಲವೆಂದು ಈದಿನ ಮೀರುತ್ತಾಳೆ?''

ಎರಡೂ ಕಡೆಯಿಂದ ಆದ ತನ್ನ ವಿಷಯದ ನಿರ್ಣಯವನ್ನು ಕೇಳಿ ಮಾಲತಿ ಮಧ್ಯದಲ್ಲಿ ನೇತಾಡುವ ಹಾಗೆ ಅಪ್ರಸನ್ನಳಾಗಿ ನಿಂತುಕೊಂಡಳು

(೧೩)

ಮಾಲತಿಯ ರೂಪ—ಲಾವಣ್ಯವು ಕೃಪಾಶಂಕರನನ್ನು ಮುಗ್ಧಗೊಳಿಸಿದೆ ಎಂದು ಪ್ರಮಾಣವು ಉಪಹಾರ ಸಮಯದಲ್ಲಿಯ ಅವನ ದೃಷ್ಟಿ ಭಂಗಿಯಿಂದಲೇ ತೋರುತ್ತಿತ್ತು ಅವನ ಕಂಗಳು ಸೋತು ಸೆರೆಯಾಗಿದ್ದವು. ಇದನ್ನು ತಿಳಿದರೂ, ಪೂರ್ಣ ಜಯಲಾಭದ ಇಚ್ಛೆಯಿಂದ ಕೇಶವ ಮಾಲತಿಯ ಗುಣಗಳ ಸ್ತುತಿಗಾರಂಭಿಸಿದ್ದನು. ''ಈ ಮೇಜಿನ ಮೇಲೆ ಹಾಸಿದ ಅರಿವೆ ಕಾಣುತ್ತಿಲ್ಲವೇ? ಇದನ್ನು ಮಾಲತಿಯೇ ಸಿದ್ಧಮಾಡಿದ್ದಾಳೆ ಆ ಗೋಡೆಯ ಮೇಲೊಂದು ರೇಶಿಮೆ ಚಿತ್ರವಿರುವದಲ್ಲ ಅದೂ ಮಾಲತಿಯದೇ ಕೈಗಾರಿಕೆ ಮಾಲತಿಗೆ ಬರಿ ಇಂಗ್ರೇಜಿಯಷ್ಟೇ ಬರುವದೆಂದಲ್ಲ ರಘುವಂಶದ ಮೂರು ಸರ್ಗ ಓದಿಕೊಂಡಿದ್ದಾಳೆ'' ಇತ್ಯಾದಿ

ಕೇಶವನ ಮಾತು ಕೇಳಿದಂತೆಲ್ಲ ಕೃಪಾಶಂಕರ ಮಾಲತಿಯ ಕಡೆ ಅಧಿಕಾಧಿಕ ಆಕೃಷ್ಟನಾಗುತ್ತಿದ್ದನು ಅವನ ಅಂತರಂಗದ ಭಾವ-ಪ್ರಸನ್ನತೆಯಿಂದ ತೋರಿಬರುತ್ತಿದ್ದಿತು ಸಾಫಲ್ಯದ ಸಂತಸದಿಂದ ಕೇಶವ ಪುಲಕಿತನಾಗಿದ್ದ. ಇದೇ ಸಮಯದಲ್ಲಿ ಅವನ ದೃಷ್ಟಿ ಮಾಲತಿಯ ಅಪ್ರಸನ್ನ ಮುಖದ ಕಡೆಗೆ ಹೊರಳಿತು. ಅವನು ವಿಸ್ಮಯಗೊಂಡನು ಎಲ್ಲಾದರೂ ಕೃಪಾಶಂಕರ ತಿಳಿದಾನು, ಎಂಬ ಭಯದಿಂದ ಮಾಲತಿಗೆ ತೀಕ್ಷ್ಣ ದೃಷ್ಟಿಯಿಂದ ಸಂಜ್ಞೆ ಮಾಡಿದನು ಆದರೆ ಔಷಧವೇನೂ ಗುಣಕಾರಿಯಾಗಲಿಲ್ಲ. ಹೀಗಾಗಿ ಮಾಲತಿಯ ಮುಂದೆ ಮಿತ್ರನನ್ನು ಹೆಚ್ಚು ವೇಳೆ ಕೂಡಿಸುವದು ವಿಹಿತವಲ್ಲವೆಂದು ಅವನೊಡನೆ ಹೊರಗೆ ಬಂದುಬಿಟ್ಟನು.

ಹೊರಗೆ ಬಂದು ಎದುರು-ಬದುರು ಕುರ್ಚಿಯ ಮೇಲೆ ಕುಳಿತು ಕೇಶವ ಕೇಳಿದನು "ಹು- ಇನ್ನು ಹೇಳಯ್ಯಾ"

ಪ್ರಸನ್ನತೆಯಿಂದ ಕೃಪಾಶಂಕರ ನುಡಿದ "ಮುಹೂರ್ತವೆಂದು ತೆಗೆಸುವ, ಅದನ್ನು ಮೊದಲು ಹೇಳು"

"ಮತ್ತೇನೂ ಚರ್ಚೆ ಅವಶ್ಯವಿಲ್ಲವಷ್ಟೇ?"

"ಊಹುಂ" ಬರಿ ಇಷ್ಟೇ ಆದಷ್ಟು ಬೇಗ ಮುಹೂರ್ತ ನಿಶ್ಚಯಿಸುವುದು"

ನಗುತ್ತ ಕೇಶವ ಅಂದನು. "ಮಾಲತಿಯಲ್ಲಿ ಇಷ್ಟು ಶಕ್ತಿ ಇರುವ ದೆಂದು ನಾವು ತಿಳಿದಿರಲಿಲ್ಲ ಅರ್ಧ ಗಂಟೆಯಲ್ಲಿ ಶಂಕರ ಮಹಾರಾಜರ ಧ್ಯಾನ ಭಂಗವಾಗಬಹುದೆಂದು ನಾವೇನು ಬಲ್ಲೆವು? ಈಗ ಒಪ್ಪಲೇ ಬೇಕಾಯಿತು, ಆಕೆಯಲ್ಲಿ ಅಸೀಮ ಶಕ್ತಿಯುಂಟು"

ಕೃಪಾಶಂಕರನು ನಗುತ್ತಿದ್ದ ನಾನು ಒಪ್ಪುದೆನಣ್ಣಾ ಒಪ್ಪಿದೆ. ಆಕೆಯಲ್ಲಿ ಅಸೀಮ ಶಕ್ತಿ ಇದೆ ಇದರಲ್ಲಿ ನನ್ನ ನಿನ್ನ ಮತಭೇದವಿಲ್ಲ ನನ್ನ ಪೂರಾ ಒಪ್ಪಿಗೆ ನೀವು ಕನೋಜಿಗಳು ತಕ್ಕಡಿಯಲ್ಲಿ ನನ್ನ ತೂಕ ಮಾಡುವಾಗ, ನಾನು ತೂಕವೇರುವೆನೋ ಇಲ್ಲವೋ, ಯಾರು ಬಲ್ಲರು? ಇರಲಿ ಸಾಯಂಕಾಲದಲ್ಲಿ ನಿಮ್ಮ ಅಭಿಪ್ರಾಯಗಳನ್ನು ತಿಳಿಸು"

ಈ ಮಾತು ಕೇಳಿ ಕೇಶವ ಗೇಲಿಯಿಂದ ನಗಲಾರಂಭಿಸಿದನು "ಇಂಥ ವಿನಯ ತೋರಿಸದಿದ್ದರೂ ಚನ್ನಾಗಿತ್ತು ಭಲೆ, ನೀನು ಯಾರ ಅಭಿಪ್ರಾಯ ನಿರೀಕ್ಷಿಸುವಿ? ಮಾಲತಿಯದೋ? ಆಕೆ ಮಿಲನ ರಾತ್ರಿಯ ಪ್ರತೀಕ್ಷೆ ಮಾಡುತ್ತಿರಬಹುದು ಇನ್ನು ನಮ್ಮ ಅಭಿಪ್ರಾಯ ಬೇಕಾಗುವುದೆಯೋ? ನಿನ್ನನ್ನು ಮನೆಗೆ ಕರೆತಂದು ಅರ್ಧಗಂಟೆಯವರೆಗೆ ಒಂದು ಸಾಧು ಪ್ರಾಣಿಗೆ ಕಷ್ಟವನ್ನೇನು ನಾವು ಕೊಡುತ್ತಿರಲಿಲ್ಲ

"ಒಳ್ಳೇದು, ನಾಳೆ ಬೆಳಗಿನಲ್ಲಿ ಗೋಪಾಲ ಮಾವನನ್ನೂ, ಪಂಡಿತ ರನ್ನೂ ಲಗ್ನ ನಿಶ್ಚಯ ಮಾಡಿಕೊಳ್ಳಲು ಕಳಿಸುತ್ತೇನೆ"

ಒಳಗಿನಿಂದ ಎಲ್ಲಾ ಕೇಳಿದ ರಾಮಕಲಿಗೆ ಇನ್ನಾವ ಸಂದೇಹವೂ ಉಳಿಯಲಿಲ್ಲ. ಇಂಥ ಶಾಂತ ಪ್ರಿಯದರ್ಶಿ ನಮ್ರ ಯುವಕನು ಮಾಲತಿಯ ಸ್ವಾಮಿಯಾಗುವನೆಂದಮೇಲೆ ಮಾಲತಿ ನಿಜವಾಗಿ ಭಾಗ್ಯವತಿ ಎಂದು ಹೇಳ

ಬೇಕು ಕೇಶವ ಬಂದುದನ್ನು ನೋಡಿ ಆಗ್ರಹಪೂರ್ವಕ ನುಡಿದಳು "ಏನಾಯಿತು ? ಒಪ್ಪಿದರೇ?"

ಗಂಭೀರತೆಯಿಂದ ಕೇಶವನೆಂದ "ಎಲ್ಲರೂ ನನ್ನ ಹಾಗೇ ಇರುತ್ತಾರಯೆ? ಒಪ್ಪದಿರಲಿಕ್ಕೆ "

ವ್ಯಗ್ರಭಾವದಿಂದ ರಾಮಕಲಿ ಕೇಳಿದಳು ಏನಾಯಿತೋ ನಾನರಿಯೇ ಬೇಗ ಹೇಳಿ ಒಪ್ಪಿದರೋ ?"

"ಹುಂ-ಹುಂ ಅವನದೆಷ್ಟು ತವಕ? ನಾಳೆ ಮುಹೂರ್ತ ನಿಶ್ಚಯಕ್ಕೆ ಒರುತ್ತಾರೆ "

ರಾಮಕಲಿ ನಗುತ್ತ ವಿಚಾರಿಸಿದಳು 'ಕೈಗೆ ಬಂದ ಲಕ್ಷ್ಮಿಯನ್ನು ಕಾಲಿನಿಂದ ದೂಡಿಕೊಟ್ಟಮೇಲೆ, ಮೈದುನದೇವರಿಗೆ! ಮನಸ್ತಾಪ ವಾಗುತ್ತಿರುವದೋ ?"

ಇನ್ನಷ್ಟು ಗಂಭೀರನಾಗಿ ಹೇಳಿದನು "ಹೌದು ಎಷ್ಟೆಂದು ಹೇಳಲಿ, ಹಸಿವಾಗಿಬಿಟ್ಟಿದೆ. ಏನಾದರೂ ತಿನ್ನಲಿಕ್ಕೆ ಕೊಡು."

ರಾಮಕಲಿ ನಗೆಯಾಡಿದಳು. "ಇದೇ ಇನ್ನೂ ನಿಮ್ಮ ಗೆಳೆಯನೊಡನೆ ತಿಂದಿರುವಿರಲ್ಲ ?"

ಕೇಶವನೆಂದ ''ಅಯ್ಯೋ ದೇವರೇ! ಅವನು ಹುಡುಗಿ ನೋಡಲು ಬಂದವ ನಾಚಿಕೊಂಡು ಏನೋ ಅಷ್ಟು ನಂಚಿಕೊಂಡ ಅವನ ಸಂಗಡ ತಿಂದರೆ ಹೊಟ್ಟೆ ತುಂಬೀತೇ ?"

ಕೇಶವನ ಮಾತಿಗೆ ಒಳ್ಳೇ ನಗು ಬಂತು ರಾಮಕಲಿಗೆ 'ಅವರಂತೂ ನಂಚಿಕೊಂಡರು ನೀವು ನಗುತ್ತಿದ್ದಿರಿ ಎಲ್ಲಾದರೂ ನಂಚಿಕೊಂಡರೆ ತಟ್ಟೆ ಹೀಗೆ ಬರಿಯುವಾಗುತ್ತಿದ್ದವೇ?'

ಕಣ್ಣರಳಿಸಿ ತಟ್ಟೆಗಳನ್ನು ನೋಡುತ್ತಾ ಕೇಶವನೆಂದ ಮಿಕ್ಕಿದುದನ್ನೆಲ್ಲ ಒಳಗಿಟ್ಟಹಾಗಿದೆ "

''ಸರಿ, ಬಹಳ ಹಸಿವಾಗಿದೆ ಏನೋ ? ಎಂದವಳೇ ಖಾದ್ಯ ಪದಾರ್ಥ ತರಲು ರಾಮಕಲಿ ಒಳಗೆ ಹೋದಳು "

ಕೇಶವನು ಆಕೆಯನ್ನು ತಡೆದು ಕೇಳಿದನು "ತಿನ್ನುವದು ಹಿಂದಿನಿಂದ ನಿಜ ಹೇಳು ಅತ್ತಿಗೆ. ವರವು ನಿನ್ನ ಮನಸ್ಸಿಗೆ ಬಂದಿತಷ್ಟೇ?

ರಾಮಕಲಿ ಸ್ಪಷ್ಟವಾಗಿ ಒಪ್ಪಿಕೊಂಡಳು.

'ಹಾಗಾದರೆ ಹೇಳು ವರ ನೋಡಿಕೊಟ್ಟ ಕೂಲಿ ಏನು ಕೊಡುತ್ತೀ?'

ನಗುತ್ತ ಉತ್ತರಿಸಿದಳು ' ಒಳ್ಳೇ ಸುಂದರಿಯಾದ ಒಂದು ಕನ್ಯಾ.'

"ಚನ್ನಾಗಿದೆ ನಾನು ನೀರಡಿಕೆಯಿಂದ ಬಳಲಿ ಬೇಡಿದ್ದು ನೀರು ನೀನು ತಂದು ಬಿಟ್ಟಿ ಮುದ್ದಿ ಬೆಲ್ಲ ಕನ್ಯಾ ಬೇಡ ಅತ್ತಿಗೆ ನನಗೆ ಬೇಕಾದ್ದು ವರ ನನಗೆ ಇಂಥ ವರ ಕೊಡು. ಕನ್ಯೆಯ ಹುಚ್ಚು ಎಂದೂ ಹಿಡಿಯಬಾರದು'

ನಗು–ನಗುತ್ತ ರಾಮುಕಲಿ ಮಾತಾಡಿದಳು. "ವರವಲ್ಲ ನಿಮಗೆ ಶಾಪ ಕೊಡುತ್ತೇನೆ ಬೇಗನೆ ನಿಮಗೆ ಲಗ್ನದ ಹುಚ್ಚು ಹಿಡಿದು ನಮ್ಮ ಕಾಲು ಹಿಡಿದುಕೊಳ್ಳಿರಿ "

ಕೇಶವ ಇದರ ಉತ್ತರ ಕೊಡಲು ಸಜ್ಜಾಗಿದ್ದ. ಅಷ್ಟರಲ್ಲಿ ಅನಂತ ಒಂದು ಹೇಳಿದನು "ನೀವೆಲ್ಲ ಕೂಡಿ ಮಾಲತಿಯನ್ನು ಸಿಟ್ಟಿಗೆಬ್ಬಿಸಿದ್ದೀರಿ ನಾನು ಏನೋ ಸಮಾಧಾನ ಹೇಳಹೋದರ ತಲೆ ಕೆಳಗೆ ಹಾಕಿ ಕೂತುಬಿಟ್ಟಿದ್ದಾಳೆ "

ರಾಮುಕಲಿ ನುಡಿದಳು. "ಆಕೆ ಏನು ಮಾಡಿಯಾಳು ? ಇವರು ಆಕೆಗೆ ಅಷ್ಟು ಹಾಸ್ಯ ಮಾಡಿದ್ದಾರೆ ಮೋಟರಿನಲ್ಲಿ ಕುಳಿತು ಹೊರಗೆ ಹೋಗುವದೆಂದು ಹೇಳಿ, ಆಕೆಯನ್ನು ಸಿಂಗಾರ ಮಾಡಿ ಯಾರಿಗೋ, ಏನೋ ತೋರಿಸಿಬಿಟ್ಟರು "

ಕೇಶವನೆಂದ, "ಹು ನಡೆ ಅತ್ತಿಗೆ ಮಾಲತಿಗೆ ಸಿನೇಮಾ ತೋರಿಸಿಕೊಂಡು ಬರೋಣ ಹೇಗಾದರೂ ಆಕೆಯನ್ನು ಶಾಂತ ಮಾಡಬೇಕು ''

ರಾಮುಕಲಿ ಒಪ್ಪಿದಳು ಆಕೆ ಅನಂತನಿಗೆ ನುಡಿದಳು "ನೀವೂ ನಡೆಯಿರಿ ''

ಅನಂತನೆಂದ ''ಜಮಾ ಖರ್ಚು ಮೇಳಗೂಡದವಿನಾ ಹೊರಗೆ ನಾನು ಹೆಜ್ಜೆ ಇಕ್ಕುವದಿಲ್ಲ. ಜಮೆಯಗಿಂತ ಖರ್ಚು ಹೆಚ್ಚು ಆದರೂ ಎಂಟು ರೂಪಾಯಿ ಕೈಯ್ಯಲ್ಲಿ ಇದು ಹೇಗೆ ?

ಕೇಶವ ಹೇಳಿದ. ''ಸರಿಯಾಯಿತು ಅಣ್ಣಾ, ಆ ಎಂಟು ರೂಪಾಯಿ ನಮಗೆ ಸಿನೇಮಾ ನೋಡಲಿಕ್ಕೆ ಕೊಟ್ಟುಬಿಡು. ಅಂದರೆ ಜಮಾ ಖರ್ಚು ಮೇಳಗೂಡಿಹೋಗುವದು.''

ನಗುತ್ತ ಅನಂತನಾಡಿದ "ಈ ರೀತಿ ಜಮಾ ಖರ್ಚು ಹೊಂದಿಸ ಬಂದರೆ ಸಂಸಾರವೊಂದು ವಿಚಿತ್ರ ತಮಾಷೆಯಾಗುವದು"

ರಾಮಕಲಿ ಮುಗುಳುನಗೆ ಗೂಡಿ ಹೇಳಿದಳು "ತಮಾಷೆ ಏನೋ ಆಗೇ ಆಗುವದು ಸರಿ ಆದರೆ ಯಾರಿಗೆ ಜಮಾ ಖರ್ಚು ಒಪ್ಪಿಸಬೇಕಾಗಿದೆ ಎಂದು ಇಷ್ಟು ತಲೆ ಚಚ್ಚಿಕೊಳ್ಳುತ್ತೀರಿ ?"

ನಗುತ್ತಲೇ ಅನಂತನೆಂದ "ನನ್ನ ಸ್ವಭಾವದ ಮುಂದ ಒಪ್ಪಿಸ ಬೇಕು. ಅದು ಇಪ್ಪತ್ತೇಳು ವರ್ಷಗಳಿಂದ ಹೀಗೆ ಸಿದ್ಧವಾಗಿದೆ ನೀವೆಲ್ಲ ಮನಸ್ಸು ಮಾಡಿದರೂ, ನನ್ನ ಸ್ವಭಾವ ಕ್ಷಮಿಸಿ ಬಿಡುವಂಥವಲ್ಲ"

ಕೇಶವನೆಂದ "ನನ್ನ ಅಭಿಪ್ರಾಯವೆಂದರ ಎಲ್ಲಿ ತಪ್ಪಿದೆ ಎಂದು ಆದರ ಬೆನ್ನು ಹತ್ತುವದು ದೊಡ್ಡ ತಪ್ಪು ಅದನ್ನು ಅಲ್ಲೇ ಬಿಟ್ಟು ಮುಂದೆ ಸಾಗಿಬಿಡಬೇಕು."

ಅನಂತನಾಡಿದ "ಇದರ ವಿರುದ್ಧ ನನ್ನ ಅಭಿಪ್ರಾಯ ತಪ್ಪಾದು ದನ್ನು ಆಗಲೇ ತಿದ್ದಿಕೊಳ್ಳದಿದ್ದರೆ, ಮುಂದಿನ ಎಲ್ಲಾ ಜಮಾ ಖರ್ಚು ತಪ್ಪಾಗಿ ಹೋಗುವದು ಇದು ಬರಿ ಜಮಾ ಖರ್ಚಿನ ವಿಷಯಕ್ಕಷ್ಟೇ ಅಲ್ಲ ಮನುಷ್ಯ ಜೀವನಕ್ಕೂ ಈ ಮಾತು ಅನ್ವಯಿಸುವದು ಇದು ತಪ್ಪಾಯಿತು ಎಂದು ತಿಳಿದಾಗಲೇ ಅದನ್ನು ತಿದ್ದಿಕೊಳ್ಳದಿದ್ದರೆ, ಮುಂದಿನ ಘಟನೆಗಳೆಲ್ಲ ತಪ್ಪುತ್ತಲೇ ನಡೆಯುವವು ಆಗ ಜೀವನ ಪ್ರತಿಯೊಂದು ದಿನ ಜಮಾ ಖರ್ಚಿನ ಪಾನುಗಳಂತೆ ತಪ್ಪಿನ ಒಂದೊಂದು ಅಧ್ಯಾಯ ಆಗಿಹೋಗುವದು'

ಕೇಶವ ಏನೋ ಉತ್ತರಿಸಬೇಕೆಂದಿದ್ದ ರಾಮಕಲಿ ತಡೆದು ಹೇಳಿಬಿಟ್ಟಳು 'ಈಗ ಇದರ ವಿಷಯಕ್ಕೆ ತರ್ಕ ಮಾಡುತ್ತ ನಿಂತುಬಿಟ್ಟಿರಿ ಇದಾದರೂ ಒಂದು ತಪ್ಪಾಯಿತು ಇದನ್ನು ತಿದ್ದಿಕೊಳ್ಳದೇ ಹಾಗೇ ನಿಂತು ಕೊಂಡರೆ ಸಿನೇಮಾಕ್ಕೆ ಹೋಗುವದು ತಪ್ಪಿಹೋಗುತ್ತದೆ ಇನ್ನು ಒಂದು ತಾಸು ಅವಕಾಶವಿದೆ. ನೀವು ಜಮಾ ಖರ್ಚು ಕೂಡಿಸಿಕೊಳ್ಳಿರಿ ನಾವು ಸಿದ್ಧರಾಗುತ್ತೇವೆ'

ರಾಮಕಲಿಯು ಮಾತು ಕೇಳಿ, ಅನಂತ ಕೇಶವರು ನಗಲಾರಂಭಿಸಿದರು ಆಕೆಯ ಮಾತು ಸಮಯೋಚಿತವೆಂದು ಭಾವಿಸಿ ತಂತಮ್ಮ ಕಾರ್ಯಗಳಿಗೆ ಹೊರಟುಹೋದರು.

## (೧೪)

ಮುಂದೆ ಮೂರು-ನಾಲ್ಕು ದಿನ ಕಳೆದಿರಬಹುದು. ಕೇಶವನು ತನ್ನ ಕೊಟಡಿಯಲ್ಲಿ ಕುಳಿತು, ಏಕಾಗ್ರ ಮನದಿಂದ ಪುಸ್ತಕ ಓದತೊಡಗಿದ್ದಾನೆ. ಚಳಿಗಾಲದ ಮುಂಜಾವು ಆಗಲೇ ಎಂಟು ಗಂಟೆ ಆದರೂ ಧಂಡಿ ಕಡಮೆಯಾಗಿರಲಿಲ್ಲ. ಮಂಜು-ಇಬ್ಬನಿ ಕೂಡಿ, ಲಖನೌದ ರಾಜಬೀದಿಯ ವಸ್ತುಗಳು ಇನ್ನೂ ಅಸ್ಪಷ್ಟವಾಗಿಯೇ ಕಾಣುತ್ತಿದ್ದವು. ಒಬ್ಬ ಫೇರೀವಾಲಾ ಗಸಗುಟ್ಟಿ ನಡುಗುತ್ತಲೇ ಕೂಗುತ್ತಿದ್ದ 'ಚಾಯ್-ಗರಮ್, ಶೇಂಗದಾಣೇ' ದನಿ ತುಂಬಿ ಹೋಗಿತ್ತು.

ಬಿಸಿ ಹಾಲಿನ ಲೋಟ ಹಿಡಿದು ರಾಮಕಲಿ ಕೇಶವನ ಕೋಣೆಗೆ ಬಂದಳು. ಮೇಜಿನ ಮೇಲೆ ಅದನ್ನಿಡುತ್ತ ನುಡಿದಳು "ಹಾಲು ಕುಡಿಯಿರಿ."

ಕೇಶವನು ಪುಸ್ತಕದಿಂದ ಮೊಗವೆತ್ತಿ ನಸುನಗುತ್ತ ನುಡಿದನು "ಓಹೋ! ಸ್ವತಃ ಅತ್ತಿಗೆ ಹಾಲು ತೆಗೆದುಕೊಂಡು ಆಗಮಿಸಿದ್ದಾಳೆ. ಏನಾದರೂ ಉದ್ದೇಶವಿರಲೇಬೇಕು."

ಉದ್ದೇಶವೇನೋ ಇದ್ದೇ ಇದೆ ಎಂಬುದನ್ನು ರಾಮಕಲಿ ಒಪ್ಪದಿರಲಿಲ್ಲ. ಒಮ್ಮೆಲೇ ಏನೂ ಉತ್ತರಿಸದೇ ನಸುನಗುತ್ತಲೇ ಉದ್ದೇಶವಿದೆ ಎಂಬುದನ್ನು ವ್ಯಕ್ತಪಡಿಸಿದಳು.

ನಗುತ್ತ ಕೇಶವನು ಹೇಳಿದ. "ಕೂತುಕೊಳ್ಳಿ ನಾನು ತಿಳಿದಿದ್ದೇನೆ" ಎಂದು ಹೇಳಿ ತನ್ನ ಕುರ್ಚಿಯಿಂದೆದ್ದು ರಾಮಕಲಿಗಾಗಿ ಒಂದು ಕುರ್ಚಿಯನ್ನು ಸರಿಸಿಟ್ಟನು.

ರಾಮಕಲಿ ಕುಳಿತ ನಂತರ ಅಂದನು "ಬಹುಶಃ ವಿವಾಹದ ಸಂಬಂಧವಾಗಿಯೇ ಇರಬೇಕು."

ತಡವರಿಸುತ್ತ ರಾಮಕಲಿ ನುಡಿದಳು "ಹಾಂ ಆದರೆ ಹೇಳಲಿಕ್ಕೆ ಭಯ. ಬಹುಶಃ ನೀವು ಅಪ್ರಸನ್ನರಾಗುತ್ತೀರಿ."

ನಗುತ್ತ ಹೇಳಿದನು ಕೇಶವ. "ಇಷ್ಟು ಭೂಮಿಕೆಯ ನಂತರ ಹೇಳುವದಾದರೆ, ಇನ್ನಷ್ಟು ಅಪ್ರಸನ್ನನಾಗುತ್ತೇನೆ"

ಏನು ಹೇಳಬೇಕೋ ಅದನ್ನು ವಿಚಾರಿಸಿಕೊಂಡು ರಾಮಕಲಿ

ನುಡಿದಳು “ ಈ ವಿವಾಹದಿಂದ ಮಾಲತಿ ಸುಖಿಯಾಗುವದಿಲ್ಲವೆಂದು ನನಗೆ ತೋರುವದು ”

ವಿಸ್ಮಿತನಾಗಿ ಕೇಶವ ನೋಡತೊಡಗಿದನು ನಗೆಯುಂತೂ ಇದ್ದೇ ಇತ್ತು “ ಇದೇನು ನಿನ್ನದೇ ತರ್ಕವೋ, ಮತ್ತೆ ಯಾರಾದರೂ ಹಾಗೆ ಹೇಳಿದ್ದಾರೋ ? ”

“ ಒಂದುರೀತಿ ಹೇಳಿದ್ದಾರೆಂದೂ ತಿಳಿಯಿರಿ ”

“ ಹೇಗೆ ಹೇಳಿದ್ದಾರೆ, ಏನು ಹೇಳಿದ್ದಾರ ಇದನ್ನೆಲ್ಲ ತಿಳಿಯದೆ ನಾನು ಹೇಗ ಮಾತಾಡಬೇಕು ? ”

“ ಹೀಗೆಲ್ಲ ನೀವು ಸವಾಲು ಹಾಕಿದರೆ, ಬಹುಶಃ ನನಗೆ ಏನೂ ಹೇಳ ಬರಲಿಕ್ಕಿಲ್ಲ ಬಹಳಷ್ಟು ಮಾತೇನೋ ತಿಳಿದುಬರುತ್ತವೆ ಆದರೆ ತಿಳಿಸಿ ಕೊಡಲು ಬರುವದಿಲ್ಲ ನಾನು ತಿಳಿದುಕೊಂಡಿದ್ದೇನೆ. ಈ ವಿವಾಹದಿಂದ ಮಾಲತಿ ಸುಖಿಯಾಗುವದಿಲ್ಲ ”

ಹಾಲಿನದೊಂದು ಗುಟುಕು ಕುಡಿದು ಕೇಶವ ನುಡಿದ “ ಇದು ಕೇವಲ ನಿನ್ನದೇ ತರ್ಕವಾಗಿದ್ದರೆ—ಏನಾದರೂ ಇರಲಿ. ಮಾಲತಿ ಏನಾದರೂ ಹೇಳಿರುವಳೋ ? ”

“ ಸರಿಯಾಗಿ ಅವಳೇನೂ ಹೇಳಿಲ್ಲ. ಆದರೆ ಭಾವ-ಭಂಗಿಯಿಂದ, ರೀತಿ-ನಡತೆಯಿಂದ, ಅಷ್ಟೇ ಏಕೆ? ಮಾತು-ಕತೆಗಳಿಂದಲೂ ಸಹ ಆಕೆ ಒಂದು ರೀತಿ ಹೇಳಿಬಿಟ್ಟಿದ್ದಾಳೆ ಆಕೆಗೆ ಈ ಲಗ್ನ ಒಪ್ಪಿಗೆ ಇಲ್ಲ ”

ರಾಮಕಲಿಯ ಮಾತು ಕೇಳಿ ಕೆಲವೇಳೆ ಕೇಶವ ಸುಮ್ಮನೇ ಕುಳಿತು ಬಿಟ್ಟನು ಒಮ್ಮೆಲೆ ಕೇಳಿದನು “ ಏನಾಗಬೇಕಂತೆ, ಅದನ್ನೂ ಹೇಳಿರುವಳೋ ? ”

“ ಒಂದು ರೀತಿಯಿಂದ ಅದನ್ನೂ ಹೇಳಿಬಿಟ್ಟಿದ್ದಾಳೆ ”

ನಾಲಿಗ ಕಚ್ಚಿ ಕೇಶವ ನುಡಿದನು “ ಏನು ಅಪೇಕ್ಷಿಸುತ್ತಾಳೆ? ”

ರಾಮಕಲಿಯ ಮೊಗದಲ್ಲಿ ಭಯದಿಂದೊಡಗೂಡಿದ ನಗೆ ಹೊರ ಚಲ್ಲಿತು “ ನಿಮ್ಮನ್ನು ಅಪೇಕ್ಷಿಸುತ್ತಾಳೆ. ”

ಕೇಳಿ ಕೇಶವ ಸ್ತಂಭಿತನಾಗಿ ಕೆಲ ವೇಳೆಯು ವರೆಗೆ ರಾಮಕಲಿಯ ಕಡೆಗೆ ಒಂದೇ ಸವನೇ ನೋಡುತ್ತಿದ್ದನು. ಹಾಲೆಲ್ಲ ಕುಡಿದು ಮಾತಾಡಿದನು.

" ಇಲ್ಲ ನೀವೆಲ್ಲ ಕೂಡಿ ನನಗೆ ಹುಚ್ಚು ಹಿಡಿಸಬೇಕೆಂದಿರುವಿರಿ ನನಗೆ ಹೀಗೆ ಕಾಣುತ್ತದೆ ನನ್ನನ್ನು ಅಪೇಕ್ಷಿಸುತ್ತಾಳೆ ಇದರ ಅರ್ಥ ವಾದರೂ ಏನು ? ಏನು ನನ್ನನ್ನು ಪ್ರೀತಿಸುವಳೋ ? "

ಮೆಲ್ಲಗೆ ರಾಮುಕಲಿ ನುಡಿದಳು " ಹಾಂ '

ಕೇಶವ ತುಸು ಉತ್ತೇಜಿತನಾಗಿ ಅಂದನು " ಪ್ರೀತಿಸುತ್ತಾಳೆ. ಚನ್ನಾಗಿ ಪ್ರೀತಿಸುತ್ತಾಳೆ. ಕೃಪಾಶಂಕರನೊಡನೆ ಲಗ್ನ ಬೇಡ, ನನ್ನ ಸಂಗಡ ಆಗಲಿ ಎಂದು ಆಕ ಏನು ಸ್ಪಷ್ಟ ಹೇಳಿರುವಳೇ ? "

" ಸ್ಪಷ್ಟವಾಗಿ ಆ ವಿವಾಹಕ್ಕೆ ಆಕೆ ಎಂದೂ ಒಪ್ಪುವದಿಲ್ಲ ಪರ್ಯಾಯದಿಂದ ತೋರಿಸಿದ್ದಾಳೆ, ನಿಮ್ಮ ಸಂಗಡ ವಿವಾಹಕ್ಕೆ ಸಮ್ಮತಿ ಸುತ್ತಾಳೆ."

ತುಸು ವಿಚಾರಮಗ್ನನಾಗಿ ಕೇಶವನೆಂದ. " ನೋಡು ಅತ್ತಿಗೆ, ಬಂಕಿಯೊಡನೆ ಚಲ್ಲಾಟ ಎಷ್ಟು ಕೆಡುಕೋ, ಅಷ್ಟೇ ಕೆಡುಕು ಮನುಷ್ಯ ನೊಡನೆ ಅದರಲ್ಲಿಯೂ ವಿಶೇಷವಾಗಿ ಮನುಷ್ಯನ ಮನಸ್ಸಿನೊಡನೆ ಆಟ ವಾಡುವದು ಮಾಲತಿಯ ಮನದಲ್ಲಿ ಈಗೇನಾದರೂ ವಿಚಾರ ಬಂದಿದ್ದರೆ, ಇದಕ್ಕೆ ನಿಶ್ಚಯವಾಗಿ ನೀನೂ ಅಣ್ಣನೂ ಭಾಗಿಗಳು. ಎಷ್ಟೋ ದಿನಗಳಿಂದ ನನ್ನನ್ನು ತೆಗೆದುಕೊಂಡು ನೀವು ಮನದ ಮಂಡಿಗೆ ಮಾಡಿದ್ದೀರಿ ಆದರ ಪರಿಣಾಮವೇ ಇದು ಮಾಲತಿ ತಿಳಿದುಕೊಂಡಿದ್ದಾಳೆ ಕೇಶವನೆಂದರೆ ಒಂದು ಅದ್ಭುತ ಪದಾರ್ಥ. ಸರಿ, ಅದರಲ್ಲೇನಾಶ್ಚರ್ಯ ? "

ನಗೆಯಿಂದ ರಾಮುಕಲಿಯಾಡಿದಳು " ಚನ್ನಾಗಿ ಹೇಳಿದಿರಿ ಮಾಲತಿ ಪ್ರೀತಿಸುವದು ನಿಮ್ಮನ್ನು ಇದಕಾಗಿ ನಾನು ಮತ್ತು ಅವರು ಭಾಗಿಗಳು ನೀವು ಊರು ಸುಟ್ಟರೂ ಹನುಮಂತ ಹೊರಗೆ ಸರಿ ಕಳ್ಳರು ಸಾಧುಗಳಾ ದರು ಹಿಡಿದುಕೊಟ್ಟವರಾದರು ಅಪರಾಧಿಗಳು "

" ಹಾಗೇನಿಲ್ಲ ಕಳವು ಮಾಡಲಿಕ್ಕೆ ಆಶೆ ಹಚ್ಚಿ, ಸಾಧುವಾದವರನ್ನು ಯಾರು ಕಳ್ಳರಂತೆ ಮಾಡಿದರೋ ಅವರಲ್ಲವೇ ಅಪರಾಧಿಗಳು ? ಇದೆಲ್ಲ ಸಾಕು ಈಗ ಹೇಳು ಏನು ನಿನ್ನ ಅಭಿಪ್ರಾಯ ? ಆಕ ಕೃಪಾನ ಸಂಗಡ ವಿವಾಹವಾಗುವದಿಲ್ಲ, ಇದನ್ನೇ ಹೇಳುವೆಯಷ್ಟೇ ? "

ಕಳೆಗುಂದಿ ರಾಮುಕಲಿ ನುಡಿದಳು " ಮಾಡಿಕೊಳ್ಳುತ್ತಾಳೆ,

ಮಾಡಿಕೊಳ್ಳುವದಿಲ್ಲ! ಇದನ್ನೇನೂ ನಾನು ಹೇಳುವದಿಲ್ಲ. ನಿಜಸಂಗತಿ ನಿಮ್ಮ ಮುಂದಿಟ್ಟೆ. ನೀವೇನಾದರೂ ಪರೀಕ್ಷೆ ಮಾಡಿಕೊಳ್ಳಿರಿ. ಸುಮ್ಮನೇ ನಾನು ಹೇಳುವದಿಷ್ಟೇ. ನಿಮ್ಮ ಸಂಗಡ ವಿವಾಹವಾಗಿದ್ದರೆ ಮಾಲತಿ ಸುಖಿಯಾಗುತ್ತಿದ್ದಳು.''

ರಾಮಕಲಿಯ ಮಾತುಗಳನ್ನು ಕೇಳಿ ಕೇಶವನಿಗೆ ತುಸು ಕಷ್ಟವೆನಿಸಿತು. ಮಾಲತಿಯ ಸಂಗಡ ನೀವು ವಿವಾಹವಾಗಿರಿ, ಎಂದು ರಾಮಕಲಿ ಅನೇಕ ಸಾರಿ ಹೇಳಿದ್ದಾಳೆ. ಆಗ್ರಹ, ವಿನಂತಿ, ಜಗಳ ಯಾವುದೂ ಉಳಿದಿರಲಿಲ್ಲ. ಆದರೆ ಪ್ರತಿಯೊಂದು ಸಲ ಕೇಶವ ತಪ್ಪಿಸಿಕೊಂಡಿದ್ದಾನೆ. ಪುನಃ ಪುನಃ ತಪ್ಪಿಸಿಕೊಳ್ಳುವ ಅಪ್ರಿಯ ಕಾರ್ಯವನ್ನು ಮಾಡುವಾಗ ಕಷ್ಟವಾಗುತ್ತಿದ್ದಿತು. ಇದರ ವಿನಾ ಬೇರೆ ಉಪಾಯವೇ ಇರಲಿಲ್ಲ. ಹಿತಾ-ಹಿತಗಳ ಜ್ಞಾನವಿಲ್ಲದ, ಬುದ್ಧಿಹೀನಳಾದ ಓರ್ವ ಕಿಶೋರಿಯ ವಿಕೃತ ವಿಚಾರವನ್ನು ಎತ್ತಿ ಹಿಡಿಯಲು ಹಾಗೂ ಅಂಥ ಅಪ್ರಿಯ ಬಂಧನದಲ್ಲಿ ಸಿಕ್ಕಿ ಬೀಳಲು ಕೇಶವ ಸಹಸಾ ಸಿದ್ಧನಿರಲಿಲ್ಲ. ಸಂಸಾರದಲ್ಲಿ ಬರುವ ಇಂಥ ಪ್ರಸಂಗಗಳಿಗೆ ಅವನು ಬಹಳ ಭಯಗೊಳ್ಳುತ್ತಿದ್ದ. ಕಾತರನಾಗಿ ರಾಮಕಲಿಗೆ ಹೇಳಿದನು.

“ಅತ್ತಿಗೆ, ನೀವೆಲ್ಲ ದಯಮಾಡಿ ನನ್ನನ್ನು ಬಿಟ್ಟುಬಿಡಿರಿ. ನಾನು ಸನ್ಯಾಸಿ, ವಿರಾಗಿ ಮನುಷ್ಯನು. ವಿವಾಹಿತನಾಗಿ ಸ್ವತಃ ವಿಪತ್ತಿನಲ್ಲಿ ಬೀಳುತ್ತೇನೆ. ಇನ್ನೊಂದು ಜೀವಕ್ಕೂ ಸುಖ ಕೊಡಲಾರೆ. ನಾನು ಇದ್ದರೆ ಇದ್ದೆ. ಎದ್ದರೆ ಎದ್ದೆ. ಆದಾವುದೂ ನಿಶ್ಚಿತವಿಲ್ಲ. ಏನೋ ನಿನ್ನ ಕೈಯಿಂದ ತುತ್ತು ಅನ್ನ ಸಿಗುತ್ತದೆಂದು ಮನೆಯಲ್ಲಿದ್ದೇನೆ. ಅಷ್ಟೆ. ಇಲ್ಲವಾದರೆ ಎಂದೋ ಆಶ್ರಮವಾಸಿಯಾಗುತ್ತಿದ್ದೆ.”

ತನ್ನ ಕೈಯಿಂದ ಸಿಗುವ ಯಾವ ತುತ್ತು ಅನ್ನದ ಉಲ್ಲೇಖ ಮಾಡಿ ಕೇಶವ ತನ್ನ ಅಭಿಪ್ರಾಯ ತಿಳಿಸುವ ಯತ್ನ ಮಾಡಿದನೋ, ಅದನ್ನೆಲ್ಲ ತಿಳಿಯಲು ಆಕೆಗೆ ಜಡವೆನಿಸಲಿಲ್ಲ. ಅದೃಷ್ಟ ವಿಧಾನದಿಂದ ಆಕೆ ದುಃಖ ಮತ್ತು ಯಾತನೆಯ ಕಾರಾಗೃಹದಿಂದ ಮುಕ್ತಳಾಗಿ ಸೌಭಾಗ್ಯದ ರಾಜಪ್ರಾಸಾದದಲ್ಲಿ ಯಾವ ದಿನ ಮೊದಲು ಕಾಲಿಟ್ಟಳೋ, ಅದೇ ದಿನ ಆಕೆ ತಿಳಿದಿದ್ದಳು. ಈ ಪಟ್ಟಣದಲ್ಲಿ ಬರಿ ರಾಮಚಂದ್ರನಷ್ಟೇ ಇಲ್ಲ. ಲಕ್ಷ್ಮಣನೂ ಸಶರೀರ ರಾಮಚಂದ್ರನ ಸನ್ನಿಧಿಯಲ್ಲಿದ್ದಾನೆ. ಹೀಗಿರುವದರಿಂದ ತನ್ನ ಸ್ವಾಮಿಯಲ್ಲಿಟ್ಟ

ವಿಪುಲ ಭಕ್ತಿ-ಪ್ರೇಮದ ಜೊತೆಗೆ ಮೈದುನನಲ್ಲಿಯೂ ಅಪಾರ ಪ್ರೀತಿ ಸ್ನೇಹಗಳನ್ನು ತಳೆದಿದ್ದಳು. ಅದೇ ಸ್ನೇಹದ ಬಲದಿಂದ ಆತ್ಮರಕ್ಷಣೆಯನ್ನು ಮಾಡಿಕೊಳ್ಳಲು ಕೇಶವ ಸಾಹಸ ಮಾಡುತ್ತಿದ್ದನು ಇದನ್ನರಿತು ರಾಮು ಕಲಿ ಹೆಚ್ಚು ಹಿಸುಕಿ ನೋಡುವದು ಒಳಿತಲ್ಲವೆಂದು ಭಾವಿಸಿದಳು ಆಗ ಆಕೆಗ ಎರಡು ವರ್ಷಗಳ ಮೊದಲಿನ ಪ್ರಸಂಗ ನೆನಪಿಗೆ ಬಂದಿತು ಗಾಂಧೀ ವಾದದ ಮಾತುಗಳನ್ನು ಕೇಶವ ಜೋರಾಗಿ ಪ್ರತಿಪಾದಿಸುತ್ತಿದ್ದನು ಹೀಗಿರಲು ತಾನು ಎಷ್ಟು ಕಷ್ಟ, ಎಷ್ಟು ವಿನತಿ, ಎಷ್ಟು ಸ್ನೇಹ-ಪ್ರೀತಿ ಗಳಿಂದ ಮೈದುನನ ಆ ಪ್ರಬಲ ಇಚ್ಛೆಯನ್ನು ಕುಗ್ಗಿಸಿ ಮನೆಯಲ್ಲಿಟ್ಟು ಕೊಂಡಿದ್ದೆ! ಅಲ್ಲದೆ ಮುಂದೆ ಆ ಎರಡು ವರ್ಷಗಳಿಂದ ಸ್ನೇಹ ಮತ್ತು ಪ್ರೀತಿಯ ಹೊಸ-ಹೊಸ ದಾರದಿಂದ, ನಿತ್ಯಜಾಲವನ್ನು ಹೆಣೆದು, ಮೈದುನ ನನ್ನು ನಾಲ್ಕೂ ಕಡೆಯಿಂದ ಹೇಗೆ ಬಂಧಿಸತೊಡಗಿದೆ! ಈಗ ಸರ್ವಥಾ ನಿಶ್ಚಿಂತಳಾಗುವ ಉದ್ದೇಶದಿಂದ, ಜಾಲಕ್ಕ ಕಡೆಯ ಗಂಟು ತೊಡಕಿ ಸುವದಕ್ಕೆ ತಾನು ಯಾವ ಮಾಲತಿಯ ಆಶ್ರಯ ಕೋರಿದೆನೋ, ಒನ್ಮೈಲೇ ಪುನಃ ಗೃಹತ್ಯಾಗ-ಆಶ್ರಮ ಪ್ರಸಂಗ ಬಂದೊದಗಿದವು ರಾಮುಕಲಿ ಅಂಜಿ ದಳು ಹಿಂದಿರುಗಿದಳು ಏನು ವಿಶ್ವಾಸ? ಜಾಲ ಮುಗಿಸುವಷ್ಟಕ್ಕೆ ಹರಿದುಹೋದೀತು ಹಿತವು ಅಹಿತವಾದೀತು!

ರಾಮುಕಲಿ ಮೈದುನನ ಮುಖದ ಮೇಲೆ ಸಕರುಣ ದೃಷ್ಟಿ ಬೀರಿ ಹೇಳಿದಳು "ಇಲ್ಲ ಇಲ್ಲ ನಿಮ್ಮ ಇಚ್ಛೆಗೆ ವಿರುದ್ಧ ಕಾರ್ಯ ಮಾಡಿರೆಂದು ನಾನು ಹೇಳುವದಿಲ್ಲ ನೀವು ಮಾಲತಿಯ ಹಿತಕರ್ತರೆಂಬುದನ್ನು ತಿಳಿದು, ನಾನು ಇದನ್ನೆಲ್ಲ ನಿಮ್ಮೆದುರಿಗ ಬಿಚ್ಚಿ ಇಟ್ಟಿದ್ದೇನೆ ಈಗ ಮಾಲತಿ ಹೇಗೆ ಸುಖಿಯಾಗುವಳೋ ಹಾಗೆ ಮಾಡಿರಿ ನಾನು ಹೇಳಿದ ಮಾತು ಎಷ್ಟು ಮಟ್ಟಿಗೆ ನಿಜವೋ, ಅದನ್ನು ಸ್ವತಃ ಪರೀಕ್ಷಿಸಿರಿ ಯಾವುದು ಹಿತವೋ ಅದನ್ನು ಮಾಡಿರಿ ಅಂದರಾಯಿತು"

ರಾಮುಕಲಿಯ ಈ ಆಕಸ್ಮಿಕ ಪರಿವರ್ತನದ ಕಾರಣವನ್ನು ತುಸು ತಿಳಿದುಕೊಂಡು ಕೇಶವ ಸ್ನೇಹಪೂರ್ವಕ ನುಡಿದನು. "ಮಾಲತಿಯ ಹಿತಕ್ಕೆ ಒಂದು ವೇಳೆ ನಿನ್ನ ಇಚ್ಛೆಗೆ ವಿರುದ್ಧ ಕಾರ್ಯ ಮಾಡುವ ಪ್ರಸಂಗ ಬಂದರೂ ನಾನು ಸಂಕೋಚ ತಾಳುವದಿಲ್ಲ. ಮತ್ತು ನನ್ನ ಸಂಗಡ ವಿವಾಹ

ವಾಗದಿದ್ದರೆ ಮಾಲತಿ ಅಸುಖಿಯಾಗುತ್ತಾಳೆ ಎಂದು ಕಂಡರೆ ನಾನು ವಿವಾಹಕ್ಕೆ ಹಿಂದುಮುಂದೆ ನೋಡುವದಿಲ್ಲ ಪಾತ್ರ ಕರ್ತವ್ಯವೆಂದು ಒಪ್ಪಿಕೊಳ್ಳಬಲ್ಲೆ ಷೋಕಿಗಾಗಿ ಲಗ್ನವಾಗು ಎಂದು ನನ್ನನ್ನು ಆಗ್ರಹ ಪಡಿಸಬೇಡ ಅತ್ತಿಗೆ."

ರಾಮಕಲಿಯ ಮನಸ್ಸು ಹಗುರಾಗಿ ಹೋಯಿತು. ಪ್ರಸನ್ನತೆ ಯಿಂದಾಡಿದಳು "ಇನ್ನು ಹೆಚ್ಚೇನೂ ನಾನು ಹೇಳಲಾರೆ ಇಂದಿನಿಂದ ಮಾಲತಿಯ ಎಲ್ಲ ಭಾರ ನಿಮ್ಮದು. ನಿಮಗೆ ಸರಿ ಎನಿಸಿದಂತ ಮಾಡಬಹುದು. ಅದರಿಂದಲೇ ಆಕೆಯ ಕಲ್ಯಾಣ"

"ನೀವಲ್ಲ ನಿಶ್ಚಿಂತರಾಗಿ ಮಾಲತಿಯ ಇಷ್ಟಾನಿಷ್ಟ ಭಾರವನ್ನೆಲ್ಲ ನನ್ನ ಮೇಲೆ ಹೊರಿಸುತ್ತೀರಿ. ಆದರೆ ಅಷ್ಟು ಭಾರ ಹೊರುವ ಶಕ್ತಿ ನನ್ನಲ್ಲಿರುವದೇ ಅತ್ತಿಗೆ?"

"ಹಾಂ ನೀವು ಮಾಲತಿಯನ್ನು ಭೆಟ್ಟಿಯಾಗಿರಿ. ತಿಳಿಸಿರಿ ನಿಮಗೆ ಸರಿಕಂಡಂತೆ ಮಾಡಿರಿ"

ಕೇಶವ ಮಾತಾಡದೆ ಮೌನವಾಗಿ ಕುಳಿತನು

ಚಿಂತಿತನಾದ ಮೈದುನನನ್ನು ನೋಡಿ ರಾಮಕಲಿ ಅಂದಳು "ಅಷ್ಟು ವಿಚಾರ ಮಾಡುವದೇನದು? ಪರೀಕ್ಷಿಸಿ ನಿಮಗೇನು ಬೇಕೋ ಅದನ್ನು ಮಾಡಿರಿ" ಎಂದು ಹೇಳಿ ಕುರ್ಚಿಯಿಂದ ಮೇಲಕ್ಕೆದ್ದಳು.

"ಇಲ್ಲ ವಿಚಾರಿಸುವದೇನೂ ಇಲ್ಲ ಮಾಲತಿ ಏನನ್ನುತ್ತಾಳ ತನ್ನ ಹಿತಾಹಿತಗಳನ್ನು ಹೇಗೆ ವಿಚಾರಿಸುತ್ತಾಳೆ ಏನೋ–ಹುಂ ನಾನು ಎಲ್ಲಾ ಸರಿಪಡಿಸುತ್ತೇನೆ ನೀನು ಚಿಂತಿಸಬೇಡ ಅತ್ತಿಗೆ!"

"ನಾನು ಏನೂ ಚಿಂತಿಸುವದಿಲ್ಲ" ಎಂದು ಹೇಳಿ ರಾಮಕಲಿ ನಾವ ಕಾಶ ಕೊಟಡಿಯಿಂದ ಹೊರಗೆ ಹೋದಳು

ಕೆಲ ವೇಳೆಯ ವರಗೆ ಚಿತ್ರದಂತೆ ಕೇಶವ ಕುಳಿತುಕೊಂಡಿದ್ದ ನಂತರ ತನ್ನ ಅಂತರಂಗದ ಶಕ್ತಿಯನ್ನೆಲ್ಲ ಒಂದುಗೂಡಿಸಿ ಪ್ರತಿಜ್ಞೆ ಮಾಡಿದನು. ಯಾವುದು ಶುಭ ಮತ್ತು ಸತ್ಯವೋ ಅದನ್ನೇ ಆಚರಿಸುವಾ! ಹೀಗೆ ಚಿಂತಾ ಮುಕ್ತನಾಗಿ ಪುಸ್ತಕ ತೆರೆದು ಓದತೊಡಗಿದನು.

## (೧೫)

ನಾಲ್ಕು ಗಂಟೆಯಾಗಿದ್ದಿತು ಮಾಲತಿ ತನ್ನ ಕೊಟಡಿಯಲ್ಲಿ ಮಂಚದ ಮೇಲೆ ಉದಾಸೀನಳಾಗಿ ಕುಳಿತಿದ್ದಾಳೆ. ಕಿಟಕಿ ತುಸು ತೆರೆದಿತ್ತು ಕಿಟಕಿಯ ಹೊರಬದಿಗ ಎರಡು ಅಳಿಲುಗಳು ಜಗ್ಗಾಡುತ್ತಿದ್ದವು ಮಾಲತಿಯ ದೃಷ್ಟಿ ಏನೋ ಅಲ್ಲಿ ಮನಸ್ಸು ಮಾತ್ರ ಬೇರೊಂದೆಡೆಯಲ್ಲಿ. ಯಾವುದೋ ಚಿಂತೆಯಲ್ಲಿ ಆಕೆ ನಿಮಗ್ನಳಾಗಿದ್ದಾಳೆ

ಎಷ್ಟೋ ದಿನಗಳಾದವು ಆಕೆಗೇನಾಗಿದೆ? ಎಂಬುದನ್ನು ಸ್ವತಃ ಆಕೆಯೇ ಅರಿಯದಾಗಿದ್ದಳು ಓದುತಿದ್ದರೆ ಸರಿಯಾಗಿ ತಿಳಿಯುತ್ತಿರಲಿಲ್ಲ ವಸ್ತ್ರ ಹಣೆಯುವದಾದರೆ ಮನೆ ತಪ್ಪುತ್ತಿದ್ದಳು ಸದಾ ಸರ್ವ ಕಾಲ ಮನಸ್ಸಿಗೆ ಅಸ್ಥಿರತೆ, ವ್ಯಾಕುಲತೆ ಇಂಥ ಅವಸ್ಥೆಗೆ ಕಾರಣನೆಂದರೆ ಕೃಪಾಶಂಕರನೊಡನೆ ಜರಗುವ ಆಕೆಯ ವಿವಾಹವೇ ಆದರೆ ಹೀಗೇಕೆ ಎಂದು ಆಕೆ ವಿಚಾರಿಸುತ್ತಿದ್ದಳು ಕೃಪಾಶಂಕರನ ಸಂಗಡ ವಿವಾಹಕ್ಕೆ ಇಷ್ಟು ಅನಾಸಕ್ತಿ ಏಕೆ? ಜನ ಹೇಳುತ್ತಾರೆ ಗುಣವಂತ, ಧನವಂತ, ಹೂಲಮನೆ, ಆಳುಹೋಳು, ವಿಪುಲ ಧನರಾಶಿಗೆ ನಾನು ಸ್ವಾಮಿನಿಯಾಗುತ್ತೇನೆ ಆದರ–ಮನಸ್ಸು ಇವನ್ನೆಲ್ಲ ಇಚ್ಛಿಸುವದಿಲ್ಲ ಮನಸ್ಸಿನಲ್ಲಿ ಇದೇ ಮನೆಮಾಡಿಕೊಂಡು ಸ್ಥಿರವಾಗಿದೆ ಒಂದು ಕ್ಷಣ ಸಹ ಮರೆಯುವದಿಲ್ಲ ಮನಸ್ಸೇನೋ ವಿಚಾರಿಸುತ್ತದೆ ನನ್ನದೇ ಅಧಿಕಾರವೆಂದು ಆ ಕೊಟಡಿ ಏಕೆ ಪ್ರವೇಶಿಸಬಾರದು? ಪುಸ್ತಕಗಳನ್ನೇಕೆ ಸರಿಪಡಿಸಬಾರದು? ಮೇಜು ಏಕೆ ಸ್ವಚ್ಛ ಮಾಡಬಾರದು? ಆದರೆ ಅಲ್ಲಿ ಹೋಗಲು ಈಗೇಕೆ ಸಂಕೋಚವಾಗುತ್ತಿರಬಹುದು? ಎರಡು ದಿನ ಮೊದಲು ನಾನು ಇದನ್ನೆಲ್ಲ ಮಾಡುತ್ತಿದ್ದೆನು. ಈಗ ಮೈಯಲ್ಲಿ ನೇರಿದ ಉನ್ಮಾದ ಆಗಿರಲಿಲ್ಲ ಮೊದಲು ಮನಯಲ್ಲಿ ಕೇಶವನ ಸಂಗಡ ವಿವಾಹವೆಂದು ಮಾತು ನಡೆಯುತ್ತಿರುವಾಗ ಹೃದಯಕ್ಕೆ ಸಹಜ ಆನಂದ ಲಭಿಸುತ್ತಿದ್ದಿತು ಇದನ್ನು ಅನುಭವಿಸಿ ಅಭೀಷ್ಟದ ಪೂರ್ಣತೆಯನ್ನು ಕಾಣುತ್ತಿದ್ದೆ. ಆದರೆ ಲಗ್ನ ಬೇರೆ ಕಡೆಗೆ ನಿಶ್ಚಯವಾದಂದಿನಿಂದ ಆದಾವುದೂ ಇಲ್ಲ ಈಗ ಆಶೆಯ ಆನಂದವಿಲ್ಲ ಸವಿಯಾದ ಕಲ್ಪನೆಗಳಿಲ್ಲ. ಇವನ್ನೇ ಹಗಲು–ರಾತ್ರಿ ಆಕೆ ಹುಡುಕುತ್ತಿದ್ದಳು.

" ಮಾಲತಿ, ಕೋಟಡಿಯಲ್ಲಿದ್ದೀಯಾ ? "

ಕೇಶವನ ದನಿಗೇಳಿ ಬೆಚ್ಚಿಬಿದ್ದಳು. ಎದ್ದು ನುಡಿದಳು ' ಹುಂ" ಒಂದು ಕ್ಷಣದಲ್ಲಿ ಮಂಚದಿಂದಿಳಿದು ಕೆಳಗೆ ಬಂದು ಹೇಳಿದಳು " ಬಾಗಿಲು ತೆರೆದಿದೆ " ಬಾಗಿಲ ನೂಕಿ ಕೇಶವ ಒಳಗೆ ಬಂದನು

" ಏನು ಯಾವ ಕೆಲಸದಲ್ಲಿದ್ದೆ ಮಾಲತೀ ? "

ಮಾಲತಿ ಒಂದು ತಡವೆ ಕೇಶವನ ಕಡೆಗೆ ನೋಡಿದಳು. " ಏನೂ ಇಲ್ಲ "

" ಈಗ ನೀನು ನನ್ನ ಸಂಗಡ ಪೇಟೆಗೆ ಬರಬೇಕಲ್ಲ ನಿನಗೆಂದು ಕೆಲವು ಬ್ಲಾವುಜ ಮತ್ತು ಒಟ್ಟಿಗಳನ್ನು ಕೊಳ್ಳಬೇಕಾಗಿದೆ "

ಆಶ್ಚರ್ಯದಿಂದ ನೋಡುತ್ತ ಮಾಲತಿ ನುಡಿದಳು. " ನಾನೇಕೆ ಬರಬೇಕು ? "

" ಅಳತೆ ಕೊಡಲಿಕ್ಕೆ ಒಂದು ಹೊಸ ಅಂಗಡಿ ತೆರೆದಿದೆ ಅಲ್ಲಿ ಸ್ತ್ರೀಯರ ಅಳತೆ ಮುಂತಾದವುಗಳಿಗೆ ಸ್ತ್ರೀಯರೇ ಇರುವರು "

ಇದೆಲ್ಲದರ ಅನುಮಾನ ಮಾಡಿನೋಡಿ ಮಾಲತಿ ಹೋಗಬಾರದೆಂದು ಕೊಂಡಳು " ಮಾದರಿಯೊಂದು ಕೊಟ್ಟರೂ ಸಾಗುತ್ತದೆ ಅಲ್ಲದೇ ಅವೆಲ್ಲ ಕೊಳ್ಳುವದೇಕೆ ? ಈಗೇನೂ ಅವಶ್ಯವಿಲ್ಲ "

" ಅವಶ್ಯವಿರುವದೋ, ಇಲ್ಲವೋ ಇದನ್ನೆಲ್ಲ ವಿಚಾರಿಸುವ ಅಧಿಕಾರ ಇನ್ನೂ ಕೆಲವು ದಿನ ನನಗೆ ಉಳಿಯುತ್ತದೆ ಆದರೆ ನಿನಗೆ ಇಷ್ಟೊಂದು ಸಂಕೋಚವೇಕೆ? ಬಂದರಾಯಿತು "

ಒಂದು ಸಾರೆ ಕೇಶವನನ್ನು ನಿರೀಕ್ಷಿಸಿ ನುಡಿದಳು " ಒಳ್ಳೇದು "

" ಹಾಗಾದರೆ ಸಿದ್ಧಳಾಗು. ' ಎಂದವನೇ ಕೇಶವ ಹೊರಗ ನಡೆದನು

ಟಾಂಗಾದಲ್ಲಿ ಕುಳಿತು ಮಾಲತಿ ಅತ್ತಿತ್ತ ಬೀದಿಯಲ್ಲಿ ನೋಡುತ್ತಿದ್ದಳು ಆಕೆಯ ದಿಟ್ಟಿ ಬೀದಿಯಲ್ಲಿಯ ಏನೋ ವಿಚಿತ್ರದೃಶ್ಯಗಳ ಕಡೆಗಿದ್ದಿತು. ಆದರೆ ಮನಸ್ಸು ಅಲ್ಲಿದ್ದರಷ್ಟೇ! ಆಕೆ ಯೋಚಿಸುತ್ತಿದ್ದಳು ಈ ಬ್ಲಾವುಜ ಈ ಒಟ್ಟಿಗಳಿಂದ ಆರಂಭವಾಯಿತಲ್ಲ! ಅಭೀಷ್ಟದ ವಿಯೋಗ, ಅನಿಚ್ಛೆಯ ಸಂಯೋಗ!

ಒಳತೆ ಕೊಡುವ ಕೆಲಸ ಬೇಗ ಮುಗಿದು ಹೋಯಿತು ನಂತರ ಟಾಂಗೆಯವನಿಗೆ ಕೇಶವನು ಅಮೀನಾಬಾದಕ್ಕೆ ಸಾಗಲು ಹೇಳಿದನು ಮಾಲತಿ ಸುಮ್ಮನಿದ್ದಳು. ಒಂದು ಶಬ್ದವನ್ನೂ ಉಚ್ಚರಿಸಲಿಲ್ಲ

ಆ ತೋಟ ಮುಟ್ಟುವ ಮೊದಲೇ ಕೇಶವ ಕೇಳಿದ "ಮಾಲತೀ ! ನಾನು ನಿನ್ನ ಕಲ್ಯಾಣ ಚಿಂತಿಸುತ್ತೇನೆ ಎಂದು ನಂಬುವೆಯಾ?"

ಒಂದು ಕ್ಷಣ ಮಾಲತಿ ಯೋಚಿಸಿದಳು "ಹಾಂ"

ಪ್ರಸನ್ನತೆಯಿಂದ ಕೇಶವನೆಂದ "ಸರಿ. ನಿನ್ನ ವಿಶ್ವಾಸ ಇನ್ನೂ ಇರುವದಲ್ಲ ನೀನು ಸರಗಿಗೆ ಗಂಟು ಹಾಕಿಕೋ. ನಿನ್ನ ವಿಶ್ವಾಸ ಭಂಗ ವಾಗುವ ಒಂದೂ ಕಾರ್ಯವಾಗುವದಿಲ್ಲ."

ಪುನಃ ಕೇಶವನನ್ನು ನಿರೀಕ್ಷಿಸುತ್ತ ಮಾಲತಿಯಾಡಿದಳು. 'ಕೇಶವಣ್ಣಾ, ನಾನೇನು ಕೃತಘ್ನಳಾದೆನೆಂದು, ನೀನು ಇದರ ನೆನಪು ಕೊಟ್ಟೆ?"

ಈ ಮಾತು ಕೇಶವನ ಮರ್ಮಕ್ಕೆ ತಾಗಿತು 'ಛೀ, ಆದೇನು ಮಾತು ಮಾಲತಿ, ನೀನು ನಿನ್ನ ಗುಣ ಸ್ನೇಹಾದಿಗಳಿಂದ ನಮ್ಮವಳೇ ಆಗಿರುವ "

ಟಾಂಗಾ ತೋಟ ಮುಟ್ಟಿದ್ದಿತು, ಇಳಿದು ಕೇಶವ ನುಡಿದ 'ಬಾ, ಮಾಲತೀ ತುಸು ವೇಳೆ ತೋಟದಲ್ಲಿ ಕೂಡುವಾ'

ಮಾಲತಿ ಇಳಿದು ಸುಮ್ಮನೇ ಕೇಶವನ ಹಿಂದೆ ನಡೆದಳು ಒಂದು ನಿರ್ಜನ ಸ್ಥಳದಲ್ಲಿ ಹೋಗಿ, ಒಂದು ಬೆಂಚಿನ ಮೇಲೆ ಇಬ್ಬರೂ ಕುಳಿತರು ತುಸು ದೂರ ಕೆಲವು ಹುಡುಗರು ಆಟವಾಡುತ್ತಿದ್ದರು ಒಂದು ಬದಿಗೆ ಒಂದು ಕುಂಜದ ಸಮೀಪದಲ್ಲಿ, ಓರ್ವ ಮೇಮ ಮತ್ತು ಸಾಹೇಬರು ಕುಳಿತು ಹರಟೆ ಕೊಚ್ಚುತ್ತಿದ್ದರು ತುಸು ವೇಳೆಯಲ್ಲಿ ತೋಟದ ದೀಪಗಳೆಲ್ಲ ಹತ್ತಿಕೊಂಡವು ಆಗ ಥಂಡಿಯ ದಿನವಾದುದರಿಂದ ತಿರುಗಾಡುವರ ಸಂಖೆ ಮೆಲ್ಲನೆ ಕಡಮೆಯಾಗಲಾರಂಭಿಸಿದ್ದಿತು

"ಒಂದು ಮಾತು ಕೇಳಬೇಕಾಗಿದೆ ಮಾಲತೀ, ನೀನು ನಿಃಸಂಕೋಚ ವಾಗಿ ಸರಳ ಉತ್ತರ ಕೊಡುವಿ ಎಂದು ನಾನು ಆಶಿಸುತ್ತೇನೆ ಅದಷ್ಟು ಅವಶ್ಯವಿರದಿದ್ದರೆ ನಿನ್ನನ್ನು ದಣಿಸುತ್ತಿರಲಿಲ್ಲ"

ಮಾಲತಿ ಗಾಢಮೌನದಿಂದಿದ್ದಳು

''ನಿನ್ನಿಂದ ನಾನು ಸರಳ ಉತ್ತರ ಅಪೇಕ್ಷಿಸುವಂತೆ, ನಾನೂ ಸರಳವಾಗಿ ಮಾತಾಡುತ್ತೇನೆ. ಏನು ಕೃಪಾಶಂಕರನೊಡನೆ ವಿವಾಹವಾಗಲು ನಿನಗೆ ಒಪ್ಪಿಗೆ ಇಲ್ಲವೇ? ನಿಜ-ನಿಜ ಹೇಳು ಮಾಲತೀ! ಕೆಲವು ಸಮಯದಲ್ಲಿ ಲಜ್ಜಾ-ಸಂಕೋಚ ಬಿಡಬೇಕಾಗುವದು."

ಕೇಶವನ ಮಾತು ಕೇಳಿ ಮಾಲತಿ ಬಲಗುಂದಿದಳು. ಇದಕ್ಕೆ ಏನೆಂದು ಉತ್ತರಿಸಬೇಕು? ಅದೂ ಸ್ವತಃ ಕೇಶವನಿಗ ಶಕ್ತಿಪೂರ್ವಕವಾಗಿ ದೂಡಬರುವದೇ ಸಂಕೋಚವನ್ನು? ಮಾಲತಿ ಸುಮ್ಮನಿದ್ದಳು. ಆತುರದಿಂದ ಕೇಳಿದನು. 'ಹೇಳು ಮಾಲತೀ, ಈ ಲಗ್ನ ನಿನಗೆ ಒಪ್ಪಿಗೆ ಇಲ್ಲವೇ?''

''ಇಲ್ಲ" ಎಂದವಳೇ ಮಾಲತಿ ಅವಾಕ್ಕಾದಳು. ಹೇಗೆ ಈ ಶಬ್ದಗಳಾದರೂ ಹೊರಬಿದ್ದವೊ?

ತುಸು ವಿಚಾರಿಸಿ ಕೇಶವ ನುಡಿದ. 'ಒಳ್ಳೇದು. ನನ್ನ ಸಂಗಡ ವಿವಾಹವಾದರೆ ನೀನು ಸುಖಿಯಾಗುವಿಯಾ? ಹೇಳು. ನಾಚಬೇಡ'

ಅಂಥ ಚಳಿಯಲ್ಲಿಯೂ ಆಕೆಯ ತಲೆ ಬೆವರಿತು. ಈ ಅದ್ಭುತ ಮತ್ತು ಅನುಚಿತ ಪ್ರಶ್ನೆಗೆ ಉತ್ತರ ಕೊಡಬಾರದೆಂದು ನಿಶ್ಚಯದಿಂದ ಆಕೆ ಕುಳಿತುಬಿಟ್ಟಳು. ತಲೆ ನೋಯತೊಡಗಿತು. ಬೆಂಚಿನ ಮೇಲೆ ತಲೆ ಚೆಟ್ಟಿಕ್ಕಿದಳು. ಅನೇಕ ಸಲ ಕೇಶವನು ಪ್ರಶ್ನಿಸಿದ. ಆದರೆ ಮಾಲತಿ ಇದಕ್ಕೆ ಉತ್ತರಿಸಳೆಂದು ತಿಳಿದಕೂಡಲೇ ಅವನು ನುಡಿದನು "ನಿನ್ನ ಮೌನದಿಂದ ನಾನು ತಿಳಿಯುವದೇನೆಂದರೆ, ನನ್ನೊಡನೆ ವಿವಾಹವಾದರೆ ನೀನು ಪ್ರಸನ್ನಳಾಗುವಿ. ಇಷ್ಟೇ ನಿನ್ನ ಅಭಿಪ್ರಾಯ. ಹಾಲು ಸಕ್ಕರೆ ವಿಷಯದಲ್ಲಿ ನಾನು ಹೇಳಿದುದು ನೆನಪುಂಟೇ? ನಮ್ಮ ದುಃಖ ಹೊರಗಿನಿಂದ ಬರುವದಿಲ್ಲ. ಸ್ವತಃ ನಾವು ಅದನ್ನು ಸೃಷ್ಟಿಸುತ್ತೇವೆ. ಆ ದಿನವೇ ನಿನ್ನನ್ನು ನಾನು ಸಮಾಧಾನಗೊಳಿಸಿದ್ದೆ. ಇಂದಾದರೂ ಅದನ್ನೇ ಮಾಡುತ್ತೇನೆ. ಇನ್ನೂ ನಿನ್ನಲ್ಲಿ ಬಾಲ್ಯವಿದೆ. ಬುದ್ಧಿ ಇದ್ದರೂ ಧೋರಣವಿಲ್ಲ. ಇದಕ್ಕಾಗಿ ನೀನು ನಿನ್ನ ಬರಿ ಬುದ್ಧಿ, ವಿಚಾರ ಪ್ರವೃತ್ತಿಗಳಿಗನುಸಾರ ನಡೆಯದೇ, ಹಿತೈಷಿಗಳ ಬುದ್ಧಿವಾದದಂತೆ ನಡೆಯಬೇಕಲ್ಲವೇ ಮಾಲತೀ! ನೀನು ನನ್ನನ್ನು ಪ್ರೀತಿಸುವೆ. ಇದರಿಂದ ನಿನಗೆ ಸಂತಸ. ಆದರೆ ನೆನಪಿರಲಿ. ನಾನೂ ನಿನ್ನನ್ನು ಕಡಮೆ ಪ್ರೀತಿಸುವದಿಲ್ಲ."

ಹೀಗೆ ನುಡಿಯುತ್ತಿರುವಾಗ ಕೇಶವನ ಕಂಠ ಬಿಗಿದು ಬಂದಿತು. ತುಸು ಹೊತ್ತು ಸುಮ್ಮನಿದ್ದು ಪುನಃ ಹೇಳತೊಡಗಿದನು. "ಆದರೆ ನಾನು ಯಾರೊಬ್ಬರನ್ನೂ ಪ್ರೀತಿಸುತ್ತೇನೆ. ಕಾರಣ ಅವರೊಡನೆ ವಿವಾಹ ಮಾಡಿಕೊಳ್ಳಬೇಕು, ಅಥವಾ ಹಾಗೆ ಮಾಡುವದು ಮಂಗಲಕರ ಎಂದೇನೂ ಅರ್ಥವಾಗಲಾರದು. ವಿವಾಹ ಅಪೇಕ್ಷೆಯಿಂದೇನೂ ನಾವು ಪ್ರೀತಿಗಾರಂಭಿಸಿಲ್ಲ. ಅದನ್ನು ದೃಢಪಡಿಸುವದಕ್ಕೆ ವಿವಾಹದ ಅವಶ್ಯಕತೆ ಅಷ್ಟೊಂದೇನು? ಯಾರೊಡನೆ ನಿನ್ನ ವಿವಾಹವಾಗುವದೋ, ಅವನನ್ನು ಚನ್ನಾಗಿ ಬಲ್ಲೆ. ಅವನು ನನ್ನ ಪರಮ ಮಿತ್ರ. ವಿದ್ಯಾ, ಬುದ್ಧಿ, ರೂಪ-ಧನ ಎಲ್ಲದರಲ್ಲಿ ನನ್ನಿಂದ ಅವನು ಶ್ರೇಷ್ಠ. ಅಣ್ಣಾ, ಅತ್ತಿಗೆ ಸಹ ಒಪ್ಪುತ್ತಾರೆ. ನೀನು ಹೀಗೆ ವಿಚಾರಿಸು. ನಿನಗಿರುವ ಮೂವರು ಹಿತಕರ್ತರು, ಯಾವ ರೀತಿ ವ್ಯವಸ್ಥ ಮಾಡುವರೋ, ಅದರಿಂದ ನಿನ್ನ ಮಂಗಲವೇ ಆಗುವದು. ನಾನೆಂದರೆ ಒಂದು ರೀತಿಯ ಸನ್ಯಾಸಿ, ಬೈರಾಗಿ. ಏನೋ ನೀವೆಲ್ಲ ಸ್ನೇಹ ರಜ್ಜುವಿನಿಂದ ಬಿಗಿದು ಕೂಡಿಸಿದ್ದೀರಷ್ಟೇ. ಎಷ್ಟು ನನ್ನನ್ನು ನೀವು ತಿಳಿದಿರುವಿರೋ ಅಷ್ಟೇ ನೆಟ್ಟಗೆ. ಅದಕ್ಕೂ ಹೆಚ್ಚು ತಿಳಿದರೆ ನಿಮಗೇ ಕಂಡೀತು, ಕ್ಷುದ್ರ ಪ್ರಾಣಿ. ಮಾಲತೀ, ನನ್ನ ಹೃತ್ಪೂರ್ವಕ ಆಶೆಯೆಂದರೆ ನೀನು ಈ ಹೊಸ ಜೀವನದಲ್ಲಿ ಪ್ರವೇಶಿಸು, ನಿನ್ನ ವೈವಾಹಿತ ಜೀವನ ಮಂಗಲಮಯವಾಗಲಿ."

ತೋಟವೆಲ್ಲ ಬಹುತರ ಬರಿದಾಗಿದ್ದಿತು. ಥಂಡಿಯ ಮೂಲಕ ನಾಲ್ಕೂ ಬದಿಯ ಗಿಡಗಳೆಲ್ಲ ಮುದುರಿದಂತಾಗಿದ್ದವು. ಕೇಶವನ ಈ ಆಶೀರ್ವಾದ ಕೇಳಿ ಮಾಲತಿಯ ಹೃದಯದಲ್ಲಿ ಮರಣ-ಕಂಪ ಹುಟ್ಟಿದಂತಾಯಿತು. ಆಕೆಯ ರಕ್ತ ಸಂಚಲನ ನಿಂತಂತೆ ಅನಿಸಿತು. ಮಾಲತಿ ಮೃತರಾದವರಂತೆ ಕತ್ತು ಚಲ್ಲಿ ಬಿದ್ದುಬಿಟ್ಟಳು. ಆಕೆಯ ದೇಹ ಮನಗಳಲ್ಲಿ ಚೈತನ್ಯವೆ ಉಳಿದಿರಲಿಲ್ಲ.

"ಮಾಲತೀ!"

ಕೇಶವನ ದನಿಯಿಂದ ಮಾಲತಿ ತುಸು ಜಾಗ್ರತಳಾದಳು.

"ಏನು?"

"ನಾನು ಹೇಳಿದುದನ್ನು ಕೇಳಿದೆಯಾ?"

"ಹುಂ ಕೇಳಿದೆ ''

ಪ್ರಸನ್ನತೆಯಿಂದ ಕೇಶವನೆಂದ "ನನ್ನ ಮೇಲೆ ಕೃಪಾಶಂಕರ ನೊಡನೆ ವಿವಾಹಕ್ಕೆ ಅಸಮ್ಮತಿ ಇಲ್ಲವಷ್ಟೇ ?''

ಹಲ್ಲುಗಳಿಂದ ತುಟಿ ಕಚ್ಚುತ್ತ ಮಾಲತಿ ಹೇಳಿದಳು "ಇಲ್ಲ''

ಕೇಶವನು ಮಾಲತಿಯ ಬೆನ್ನು ಮೇಲೆ ಕೈಯಾಡಿಸುತ್ತ ಅಂದನು. ''ಲಕ್ಷ್ಮೀ, ಇಂದು ನೀನು ನನ್ನನ್ನು ಸುಖಿಯಾಗಿ ಮಾಡಿದೆ ನಿನಗೆ ಹೆಚ್ಚು ಏನು ಹೇಳಲಿ! ಆಶೀರ್ವಾದ ನೀನು ಚಿರಸೌಭಾಗ್ಯವತಿಯಾಗು"

ಆದರೆ ಈಸಲ ಸಹನೆಗೆ ಸೀಮೆ ಉಳಿಯಲಿಲ್ಲ ಕಲ್ಲುಗಳನ್ನು ಭೇದಿಸಿ ಪ್ರವಾಹ ಹೊರಧುಮುಕಿತು. ಕಣ್ಣೀರ ಧಾರೆಯಿಂದ ಮಾಲತಿಯ ಕಪೋಲ ತೊಯ್ದುಹೋದವು ಆದರೆ ಇದಾವುದನ್ನೂ ಕೇಶವ ತಿಳಿಯಲಿಲ್ಲ. ಮಾಲತಿಯ ಪೀಡಿತ ಹೃದಯದಲ್ಲಿ ಅಭಿಮಾನದ ಮುಳ್ಳು ಚುಚ್ಚಲಾರಂಭಿಸಿತ್ತು ಆಕೆ ತನ್ನೊಳಗೇ ಅಂದುಕೊಂಡಳು ಇಂದು ನಿನ್ನನ್ನು ಸುಖಿಯಾಗಿ ಮಾಡಿದನೇ? ನಾನು ಇಷ್ಟು ಗೌರವವಿಲ್ಲದವಳೇ, ಇಷ್ಟು ತುಚ್ಛಳೇ, ಇಷ್ಟು ಕೆಲಸಕ್ಕೆ ಬಾರದವಳೇ? ನಿನ್ನ ಬಿಟ್ಟು ಅನ್ಯರನ್ನು ವರಿಸಿದರ ನಿನಗ ಆನಂದ ನಿನ್ನ ನಿಷ್ಠುರ ವೈರಾಗ್ಯದ ಮುಂದೆ ನನ್ನ ಹೃದಯದ ಪೂಜೆ ಅಷ್ಟು ತುಚ್ಛವಾಯಿತಲ್ಲ? ಒಳ್ಳೇದು ಅದನ್ನು ಸ್ವೀಕರಿಸುವ ನಾನು ನಿನಗೆ ಹೇಳುವಂತಾಗದೇ ನೀನು ಸುಖಿಯಾಗಿರು

ಮಾಲತಿ ತಲೆ ಎತ್ತಿ ಆಕಾಶ ನೋಡಿ ಎದ್ದುನಿಂತು ಹೇಳಿದಳು ''ಅಣ್ಣಾ, ಮನೆಗೆ ಹೋಗುವಾ, ರಾತ್ರಿಯಾಯಿತು.

ಎದ್ದು ಕೇಶವನೆಂದ ''ನಡೆ''

ಟಾಂಗಾದಲ್ಲಿ ಕುಳಿತಕೂಡಲೇ ಕೇಶವ ನುಡಿದ. "ಪಂಡಿತ ರಾಮಚರಣರು ಇಂದು ಬರಹೇಳಿದ್ದರು. ಅಲ್ಲಿ ತುಸು ಹೊತ್ತು, ಮನೆಗೆ ಹೋದರೆ ನಿನಗೇನೂ ತ್ರಾಸವಿಲ್ಲವಷ್ಟೇ!"

ಸವಿಯಾಗಿ ಮಾಲತಿ ಹೇಳಿದಳು. ''ಇಲ್ಲ"

ರಾಮಚರಣರ ಮನೆಯ ಮುಂದೆ ಟಾಂಗಾ ನಿಲ್ಲಿಸಿ ಕೇಶವ ಇಳಿದ. ಮಾಲತಿ ಅದರಲ್ಲಿಯೇ ಕುಳಿತಿದ್ದಳು

ಕೇಶವನೆಂದ. "ನೀನು ಬರುವದಿಲ್ಲವೇ ಮಾಲತಿ?''

"ನಾನು ಇಲ್ಲೇ ಕೂತಿರುತ್ತೇನೆ."

"ಅಲ್ಲ ಅದು ರೀತಿಯಲ್ಲ ತಿಳಿದರೆ ಅವರು ಹಳಹಳಿಸುವರು."

ಇಳಿದು ಮಾಲತಿ ಬೆನ್ನು ಹತ್ತಿದಳು

ಮೇಲೇರುತ್ತಲೇ ಕೇಶವ ಕೂಗಿದ. "ದುಲಾರೀ"

ದುಲಾರಿ ತಂದೆಯ ಬಳಿಯಲ್ಲಿ ಅವನ ಕೈಹಿಸುಕುತಿದ್ದಳು ಹಾಗೂ ಮಾತಾಡುತಿದ್ದಳು. ಕೇಶವನ ದನಿ ಕೇಳಿ ಬಾಗಿಲು ತೆರೆದು ನುಡಿದಳು.

"ಬರಬೇಕು' ಕೇಶವನ ಹಿಂದೆ ಮಾಲತಿಯನ್ನು ನೋಡಿ ಅಂದಳು

"ಅಮ್ಮಯ್ಯಾ—ಬಾಮ್ಮಾ"

ರಾಮುಚರಣರೊಡನೆ ಕೇಶವನ ಮಾತು ಎರಡು ನಿಮಿಷಗಳಲ್ಲಿ ಮುಗಿದುಹೋದವು ದುಲಾರಿ ಕೇಳಿದಳು. "ಏನಾದರೂ ಉಪಹಾರ ತರಲಿಯಾ?"

"ನನಗಂತೂ ಬೇಡ ನಿನ್ನ ಗೆಳತಿಗೆ ಕೇಳು."

ಮಾಲತಿ ಗೋಣು ಹಾಕಿ ಬೇಡವೆಂದು ಸೂಚಿಸಿದಳು

ಕೇಶವ ನಗುತ್ತ ಮಾತಾಡಿದನು 'ದುಲಾರಿ, ಆದಿನ ಕೃಷ್ಣಚಂದ್ರನಿಗೆ ಖೀರು ಉಣಿಸಿದಾಗ ಸಂತಸಪಟ್ಟವದ್ದು ನೀನೋ ಕೃಷ್ಣಚಂದ್ರನೋ ಇದು ನನಗೆ ತಿಳಿಯಲೇ ಇಲ್ಲ ಎಷ್ಟು ಸೇರಿನ ಖೀರು ಆತ ತಿಂದನು?"

ಕೇಶವನ ಮಾತು ಕೇಳಿ ದುಲಾರಿ ನಗುತ ಹೇಳಿದಳು "ನೀನು ಊಟದ ವಿಷಯ ತೆಗೆದು, ಕೃಷ್ಣಚಂದ್ರರ ಗೇಲಿ ಮಾಡಿಬಿಡುವೆ ಅವರೇನು ಅಷ್ಟು ತಿನ್ನುತ್ತಾರ?"

'ಇರಲಿ ಅವನಿಗೆ ಭಗವಂತ ಹೇಗೆ ಅಷ್ಟು ಖೀರು ಜೀರ್ಣಿಸುವ ಶಕ್ತಿ ಕೊಟ್ಟಿರುವನೋ, ಹಾಗೆ ನನ್ನ ಗೇಲಿಯನ್ನು ದಕ್ಕಿಸುವ ಸಾಮರ್ಥ್ಯವನ್ನೂ ಕೊಟ್ಟಿದ್ದಾನ ಗೇಲಿಯಿಂದ ಅವನ ಹಸಿವು ಹೆಚ್ಚಿ, ಪಚನಶಕ್ತಿ ಅಧಿಕವಾಗುವದು"

ಕೇಶವನ ಮಾತು ಕೇಳಿ ರಾಮುಚರಣರು ನಗತೊಡಗಿದರು

"ಹುಡುಗನೆಂದರೆ ಅದೊಂದು ರತ್ನ! ಸಾವಿರ ಜನರಲ್ಲಿ ಒಬ್ಬರು ಇಂಥವರು ಸಿಕ್ಕುವರೋ ಇಲ್ಲವೋ, ಸಂದೇಹ"

ಮಿತ್ರನ ಪ್ರಶಂಸೆಯಿಂದ ಪ್ರಸನ್ನನಾದ ರಾಮಚರಣ ಮತ್ತು ದುಲಾರಿ ಇವರಲ್ಲಿ ಈ ಪ್ರಶಂಸೆಯ ಬೀಜ ಚಿಗುರೊಡೆದು ಮುಂದೆ ಸಫಲ ಕೊಡುವುದು ಎಂದು ಆಶಿಸಿ ತಾನೂ ಹೇಳಿದನು "ನನ್ನ ಗಳೆಯರಲ್ಲಿ ಕೃಪಾಶಂಕರ ಮತ್ತು ಕೃಷ್ಣಚಂದ್ರ ಇವರಿಗೆ ಹೋಲಿಕೆ ಇನ್ನಾರೂ ಇಲ್ಲ. ಕೃಪಾನನ್ನು ಮಿತ್ರನಿಂದ ಆತ್ಮೀಯನನ್ನು ಮಾಡಿಕೊಳ್ಳುವ ವಿಚಾರ ನಿಶ್ಚಿತವಾಗಿದೆ. ಕೃಷ್ಣಚಂದ್ರನನ್ನು ಇನ್ನೊಬ್ಬ ತಂಗಿಯ ಸಲುವಾಗಿ ಮನಸ್ಸಿನ ತನ್ನಲ್ಲಿಯೇ ಆರಿಸಿಕೊಂಡು ಇಟ್ಟಿದೆ."

ರಾಮಚರಣರಂದರು "ನಿನ್ನ ತಂಗಿ ಯಾರು? ಯಾರಾದರೂ ದೂರವೇನು?"

ನಗುತ್ತಲೇ ಕೇಶವ ಅಂದ "ಬಹಳ ದೂರವೇನೂ ಅಲ್ಲ"

ಕೃಷ್ಣಚಂದ್ರನ ವಿಷಯವಾಗಿ ಹೆಚ್ಚು ವಿಚಾರಿಸುವ ಆಪೇಕ್ಷೆ ಯಾವಾಗಾದರೊಮ್ಮೆ ರಾಮಚರಣರಿಗೆ ಒರುತ್ತಿದ್ದಿತು. ಆದರೆ ಕೇಶವನ ಈ ಮಾತು ಕೇಳಿ ಅದು ವ್ಯರ್ಥವೆಂದು ಭಾವಿಸಿಕೊಂಡರು ಕೇಶವನಾದರೂ ಮೊದಲ ದಿನವೇ ಎಲ್ಲಾ ವಿಷಯ ತಿಳಿಸದೇ ಕೃಪಾಶಂಕರನ ಮಾತು ನಡೆಸಿದನು

"ಸಿರಿವಂತರಲ್ಲಿ ಕೃಪಾಶಂಕರನಂಥ ಹುಡುಗರು ನೋಡಲಿಕ್ಕೆ ವಿರಲ ವಾಗಿ ಸಿಕ್ಕುತ್ತಾರೆ ಹೊರಗಿನ ಜನ ಅವನಲ್ಲಿರುವ ಧನನನ್ನಷ್ಟೇ ನೋಡು ತ್ತಾರ ಆದರೆ ಆವನ ಪರಿಚಿತರು ಧನಕ್ಕಿಂತ ಹಚ್ಚಿನ ಗುಣಗಳನ್ನು ಅವನಲ್ಲಿ ಕಾಣುತ್ತಾರೆ"

ಇಂಥ ಸತ್ಪಾತ್ರನ ಸಂಗಡ ಆದ ಮಾಲತಿಯ ವಿವಾಹ ನಿಶ್ಚಯ ಕೇಳಿ ರಾಮಚರಣರು ಆನಂದಿಸಿದರು ಆಶೀರ್ವದಿಸಿದರು

ಮಾಲತಿ ವೇಳೆಯಾಗತೊಡಗಿದ್ದಿತೆಂದು ಎದ್ದು ನಿಂತಳು ಕೇಶವನೆಂದ "ಹೋಗುವಾ ರಾತ್ರಿಯಾಯಿತು"

ದುಲಾರಿ ಕೆಳತನಕ ಉಭಯತರನ್ನು ಕಳಿಸಬಂದಳು ಟಾಂಗಾ ತುಸು ದೂರ ನಿಂತುಕೊಂಡಿತ್ತು ಕೇಶವ ಅವನನ್ನು ಕೂಗಲು ಹೋದನು.

ದುಲಾರಿ ನುಡಿದಳು. "ಮಾಲತೀ, ಹೀಗೇ ಯಾವಾಗಾದರೊಮ್ಮೆ ಬರುತ್ತಿರಬೇಕು ಲಗ್ನದ ಸಂಭ್ರಮದಲ್ಲಿ ಮರೆಯಬಾರದು ಮತ್ತೆ"

ವಿರಕ್ತಳಾಗಿ ಮಾಲತಿ ಅಂದಳು "ಏನು ಲಗ್ನವೆಂದರೆ ಜನರನ್ನು ಕೂಡ ಮರೆಸುವಂಥದೇ?"

ನಗೆಯಾಡಿದಳು ದುಲಾರಿ 'ಏನೋ ತಾಯಿ, ನನಗೆಂದರೆ ಹಾಗೇ ವಿವಾಹದ ಹಸರಿನಿಂದೇನೋ ಅಷ್ಟು ಮಾತ್ರ ಸವಿ ಗೊತ್ತಾಗಿದೆ ನಿಜವಾಗಿ ಅದು ಸ್ವಾದಿಷ್ಟವಾಗಿರಲಿಕ್ಕಿಲ್ಲ'

ದುಲಾರಿಯ ಮಾತು ಕೇಳಿ ಮಾಲತಿಗೆ ದುಃಖವಾಯಿತು ವಿಚಾರಿಸಿದಳು ತನ್ನಂತೆಯೇ ದುಲಾರಿಯು ದಗ್ಧ ಹೃದಯಳು ಅದಕ್ಕಾಗಿ ಪರಿಹಾಸದಿಂದ ತನ್ನನ್ನು ನಗಿಸಬೇಕೆಂದಿದ್ದಾಳೆ ಹೇಳಿಬಿಡಲಾ? ದುಲಾರಿಗೆ 'ನನಗಾದರೂ ವಿವಾಹವೆಂದರೆ ಅದೊಂದು ಒಗಟವೆನಿಸಿಲ್ಲ." ಆದರೆ ಜೋಪಾನವಾಗಿ ಉತ್ತರಿಸಿದಳು.

'ವಿವಾಹಕ್ಕಾಗಿ ನಾನು ಎಲ್ಲಾ ಮರೆಯುವದಾದರೂ, ನೀವು ಮಾತ್ರ ನನ್ನನ್ನು ಮರೆಯಬಾರದು ದುಲಾರೀ'

ದುಲಾರಿ ಮಾಲತಿಯನ್ನು ಬಾಹುಪಾಶಗಳಿಂದ ಬಿಗಿದಪ್ಪಿ ನುಡಿದಳು "ಇದೇನಮ್ಮಯ್ಯಾ, ನನ್ನ ಜೀವನದಲ್ಲಿ ನಿಮ್ಮೆಲ್ಲರನ್ನು ಮರೆಯುತ್ತೇನೆ ಎಂಬುದಕ್ಕೆ ನನ್ನಲ್ಲಿ ಶಕ್ತಿಯನ್ನೇ ಉಳಿಸಿಲ್ಲ ನಿಮ್ಮ ಕೇಶವಣ್ಣ"

ಕೇಶವನು ಬಂದುದರಿಂದ ಮಾತು ಅಷ್ಟಕ್ಕೇ ನಿಂತಿತು. ಕೇಶವನ ಕಿವಿಗ ದುಲಾರಿಯ ಕೆಲವು ಶಬ್ದ ಕೇಳಿದ್ದವು. ಬಂದು ಕೇಳಿದನು 'ನಾನೇನು ದುಲಾರೀ?"

ಪ್ರಶ್ನ ಕೇಳಿ ದುಲಾರಿ ಗೊಂದಲದಲ್ಲಿ ಸಿಲುಕಿದಳು "ಕೇಳುವದರಿಂದ ನಿನಗೆ ಗರ್ವವೆನಿಸೀತು" ಮನದಲ್ಲಿ ಅಂದುಕೊಂಡಳು 'ದೇವತಾ'

"ಇಂಥ ವ್ಯರ್ಥ ಮಾತು ಕೇಳುವ ಅವಶ್ಯವಿಲ್ಲ." ಎಂದವನೇ ನಗುತ್ತ ಮಾಲತಿಯೊಡನೆ ಟಾಂಗಾದಲ್ಲಿ ಕುಳಿತುಕೊಂಡನು.

ಮೇಲೆ ಬಂದು ದುಲಾರಿ ನೋಡುತ್ತಾಳೆ ಇನ್ನೂ ರಾಮಚರಣರು ಕುಳಿತಿದ್ದಾರೆ. ಹೇಳಿದಳು. "ಅಪ್ಪಾ ಬಹಳ ಹೊತ್ತು ಕುಳಿತರೆ ದಣಿವಾದೀತು ಮಲಗಿಕೋ."

"ಏನೂ ದಣಿವಿಲ್ಲ ಮಗಳೇ !'' ನಂತರ ತೀಕ್ಷ್ಣ ದೃಷ್ಟಿಯಿಂದ ಮಗ ಳನ್ನು ನೋಡುತ್ತ ನುಡಿದರು 'ಇವರೆಂಥ ಮನುಷ್ಯರೋ?'

'ಯಾರೂ ಅಪ್ಪಾ'

"ಇವರೇ ಕೇಶವ ಮೊದಲಾದವರು"

''ಶ್ರೇಷ್ಠ ಜನರು.'

ತುಸು ತಡೆದು ಮಾತಾಡಿದರು ಕೇಶವನಂಥ ಒಬ್ಬ ಹುಡುಗನನ್ನೂ ಕಂಡಿಲ್ಲ. ಎಷ್ಟು ಉದಾರನೋ ಅಷ್ಟೇ ಪರೋಪಕಾರಿ.''

''ನಾನೂ ಹಾಗೇ ಯೋಚಿಸುತ್ತಿದ್ದೇನೆ ಅಪ್ಪಾ"

ಆಗ ರಾಮಚರಣರ ಮನದಲ್ಲಿ ತಿವಾರಿಪುರದ ಪ್ರಸಂಗ ಬಂದಿತು ಕೇಶವ ತಿವಾರಿಪುರಕ್ಕೆ ಒರುವದೆಲ್ಲಿ? ಆ ದಾನವರ ಮುಖದಿಂದ ಇಲ್ಲಿಗೆ ಕರೆತರುವದೆಲ್ಲಿ? ಒಂದು ವೇಳೆ ಆ ಸಮಯದಲ್ಲಿ ಕೇಶವ ಬರದಿದ್ದರೆ ಅವರು ಬದುಕುವ ಆಶೆಯನ್ನೇ ಬಿಡಬೇಕಾಗಿತ್ತು ''ದುಲಾರೀ''

''ಏನಪ್ಪಾ''

''ಕೇಶವನು ಧಾರ್ಮಿಕ, ಬಲವಂತ, ಅವನ ಆಶ್ರಯವನ್ನು ಹೊಂದಿ ನಾವು ನಿರ್ಭಯರಾಗಿದ್ದೇವೆ ಈ ಆಶ್ರಯ ಚಿರಕಾಲ ದೊರಕಿದರೆ ಹೇಗೆ ಮಗಳೇ.''

ತಂದೆಯ ಮಾತನ್ನು ತುಸು ಕೂಡ ದುಲಾರಿ ತಿಳಿಯಲಿಲ್ಲ ಆಕೆ ನುಡಿ ದಳು ''ನಿನ್ನ ಮಾತು ನನಗೆ ತಿಳಿಯಲಿಲ್ಲ ಅಪ್ಪಾ''

ತುಸು ವಿಚಾರಿಸಿ ರಾಮಚರಣರು ಮಾತಾಡಿದರು. ''ಕೇಶವನ ಕೈಯಲ್ಲಿ ನಿನ್ನನ್ನು ಒಪ್ಪಿಸುವ ಮಾತು ಹೇಳುವೆನಮ್ಮಾ. ನಿನಗೇನು ಅಸಮ್ಮತಿಯೇ?"

ರಾಮಚರಣರ ಮಾತು ಕೇಳಿ ದುಲಾರಿ ಮೌನವಾದಳು ಅದು ಲಜ್ಜಾ-ಸಂಕೋಚಗಳಿಂದಲ್ಲ. ವಿವಾಹದ ವಿಷಯದಲ್ಲಿ ಆಕೆಗೆ ಮಾಯ ಲಾರದ ಗಾಯವಾಗಿದ್ದಿತು. ಕಾರಣ ಆಕೆಯ ಮೊಗ ಕೆಂಪೇರದೇ, ಬಾಡಿ ಹೋಯಿತು. ಗಾಯದ ಮೇಲೆಯೇ ಇದು ಪೆಟ್ಟು!

ದುಲಾರಿ ಸುಮ್ಮನಿರುವದನ್ನು ಕಂಡು ರಾಮಚರಣರು ಚಂಚಲ ರಾದರು. ''ನಿನ್ನ ಇಚ್ಛೆಗೆ ವಿರುದ್ಧ ನಾನು ಒಂದೂ ಮಾತಾಡುವದಿಲ್ಲ

ಆದರೆ ನೀನು ಕೇಶವನನ್ನು ಪತಿ—ರೂಪವಾಗಿ ಹೊಂದು, ಇದಕ್ಕಿಂತ ಇನ್ನೇನು ಹೆಚ್ಚು ನಾನು ಆಶೀರ್ವದಿಸಬಲ್ಲೆ ?

ಕಾತುರಳಾಗಿ ನುಡಿದಳು ದುಲಾರಿ "ನಿನ್ನ ಪ್ರಕೃತಿ ಇನ್ನೂ ಸರಿಯಾಗಿಲ್ಲಪ್ಪ. ಇಂಥ ವೇಳೆಯಲ್ಲಿ ಈ ಮಾತುಗಳ ಅವಶ್ಯವಾದರೂ ಏನು."

ಮಂಚದ ಮೇಲೆ ರಾಮಚರಣರು ಸರಿಯಾಗಿ ಕುಳಿತುಕೊಂಡರು 'ಇದಕಾಗಿ ಅವು ಅವಶ್ಯವಾಗಿವೆ. ಭಗವಂತ ಒಂದು ವೇಳೆ ಈ ನನ್ನ ಇಚ್ಛೆ ಪೂರೈಸಿದರೆ ಅದೇ ಆನಂದ ನನಗೆ ಸಂಜೀವನವಾಗುವದು. ಅಲ್ಲದೇ ಈ ರೋಗ ಕಡಿಮೆಯಾಗುವಂಥದಲ್ಲ ಕಾರಣ ಇನ್ನೂ ಅವಶ್ಯವಿದೆ ನೀನು ವಿಚಾರಿಸು ಎಲ್ಲಾ ತಿಳಿಯುತ್ತೀಯಮ್ಮಾ.'

ಈ ನುಡಿಗಳನ್ನು ಕೇಳಿ ದುಲಾರಿಯ ಕಂಗಳು ನೀರು ತುಂಬಿದವು. ಯಾವ ಅಮಂಗಲ ಮಾತು ಆಕೆಯ ಮನದಲ್ಲಿ ಸುಳಿಯುತ್ತಿದ್ದಿತೋ ಅದನ್ನೇ ತಂದೆ ಉಚ್ಚರಿಸಿದಕೂಡಲೇ ದುಲಾರಿ ಚಂಚಲಳಾದಳು. ಏನು ಆ ಅಮಂಗಲ ಸಮೀಪವಾಯಿತೋ? ಅದಕಾಗಿಯೇ ಅಪ್ಪ ಆಶ್ರಯ ಕೊಡುವ ಮಾತು ಆಡುತಿರುವನೋ?

ರಾಮಚರಣರು ಹೇಳಿದರು "ಮಾಲತೀ ವಿವಾಹದ ಗೊತ್ತು ಆದ ಕೂಡಲೆ ನಾನು ಇದನ್ನು ಯೋಚಿಸಿದ್ದೇನೆ ಒಮ್ಮೆ ಅನಂತನ ಸಂಗಡ ಈ ಮಾತನಾಡಿದೆ ಅವನು ಒಪ್ಪುತ್ತಾನೆ ಕೇಶವನೂ ಒಪ್ಪಬಹುದು. ನನಗೆ ಹಾಗ ವಿಶ್ವಾಸವಿದೆ ನೀನೂ ತಿಳಿದು ನೋಡು. ಹೀಗೆ ನಾನು ನರಳುತ್ತ ಬಿದ್ದುಕೊಂಡು ಒಂದು ವೇಳೆ ನಿನ್ನ ವ್ಯವಸ್ಥೆ ಮಾಡಬಂದರೆ, ನಾನು ನಿಶ್ಚಿಂತನಾಗುತ್ತೇನೆ ಅಲ್ಲವೇ ?"

ದುಲಾರಿ ರಾಮಚರಣರ ಮಂಚದ ಒದಿಯಲ್ಲಿ ಬಾಗಿ ಅವರ ಕೈತಿಕ್ಕ ತೊಡಗಿದಳು ತಿರುಗಿ ಸಾವಕಾಶ ನುಡಿದಳು. "ನಿನ್ನ ಆಶೀರ್ವಾದ ದೊರೆತ ಮೇಲೆ ನನಗೇನೂ ಚಿಂತೆ ಇಲ್ಲ ಅಪ್ಪಾ" ಆಕೆಯ ಕಂಗಳಿಂದ ಎರಡು ಬಿಸಿ ಅಶ್ರುಬಿಂದುಗಳು ರಾಮಚರಣರ ಕೈಮೇಲೆ ಬಿದ್ದವು. ಸ್ನೇಹದಿಂದ ರಾಮಚರಣರು ದುಲಾರಿಯ ಬೆನ್ನಮೇಲೆ ಕೈಯಾಡಿಸಿದರು ಆಗ ಅವರ ಎರಡು ಕಣ್ಣೀರ ಹನಿ ದುಲಾರಿಯ ತಲೆಗೂದಲಮೇಲೆ ಉರುಳಿ ಹೋದವು.

## (೧೬)

ಅರ್ಧ ರಾತ್ರಿ ಮೊದಲಿಗೇ ರಾಮಚರಣರು ಮಲಗಿಬಿಟ್ಟಿದ್ದರು ಆದರ ದುಲಾರಿಯ ಕಣ್ಣುಗಳಿಗೆ ನಿದ್ರೆ ಇರಲಿಲ್ಲ ಹಾಗೇ ಹಾಸಿಗೆಯಲ್ಲಿ ಮಲಗಿ ವಿಚಾರಿಸುತ್ತಿದ್ದಳು. ಅಂತವಿಲ್ಲ ದುಲಾರಿಯ ಅಂತರಂಗದಲ್ಲಿ ಅಸ್ಪಷ್ಟ ಅನಿಶ್ಚಿತವಾದ ಒಂದು ಸುಖದ ಪ್ರಕಾಶ ತುಂಬಿಕೊಂಡಿದ್ದಿತು ಮೊದಲು ಇದೇನೋ ಆಕೆಗೆ ತಿಳಿಯಲಿಲ್ಲ ಹೀಗಾಗಿ ಸಾಯಂಕಾಲದಲ್ಲಿ ತಂದೆ ವಿವಾಹದ ಮಾತಾಡಿದಾಗ, ಬೂದಿ ಮುಚ್ಚಿದ ಕೆಂಡದಂತೆ, ವೈರಾಗ್ಯ, ಮತ್ತು ತಿರಸ್ಕಾರಗಳಲ್ಲಿ ಆವಳ ಪ್ರೇಮ ಅದೃಶ್ಯವಾಗಿತ್ತು ಯಾವ ಪದಾರ್ಥವನ್ನು ಮೋತೀಲಾಲ, ನಿಃಸಂಶಯರೂಪವಾಗಿ ಮಿಥ್ಯಾ ಮತ್ತು ಭ್ರಾಂತಿ ಎಂದು ತೋರಿಸಿಕೊಟ್ಟಿದ್ದನೋ, ಅದರ ಬೀಜ ನಷ್ಟವಾಗದೇ ಇನ್ನೂ ಆಕೆಯ ಹೃದಯದಲ್ಲಿ ಮೊಳಕೆಗೊಂಡಿದ್ದವು ಇದರ ಗೊತ್ತು ಮಾತ್ರ ಆವಳಿಗಿರಲಿಲ್ಲ ಕೇಶವನು ಇಂದು ಆ ಬೀಜಗಳ ಗುರುತು ತೋರಿಸಿದನು ಎಲ್ಲಿ ಕತ್ತಲೆ ಹಬ್ಬಿಗೊಂಡಿದ್ದಿತೋ ಅಲ್ಲಿ ತಿಳಿಜ್ಯೋತ್ಸ್ನ ತೋರಿಸಿದನು. ಆರುವ ದೀಪದ ಬತ್ತಿ ಚಾಚಿದನು

ದುಲಾರಿಯು ವಿಚಾರಿಸುತ್ತಿರುವದು ಇದೇ ಕೇಶವನ ವಿಷಯ ಅವನು ಶಾಂತ, ಸೌಮ್ಯ, ಸುಂದರ ಕೇಶವ ಸಂಯಮಿಯಾದರೂ ಪ್ರೇಮಿ ಯಾರೊಡನೆಯೂ ವಿರೋಧವಿಲ್ಲ ನಿರ್ಭಯ, ನಮ್ರ ಆಶ್ರಯದಾತಾ; ರಕ್ಷಕ, ವಿಪತ್ತಿನ ಜೊತೆಗಾರ–ಕೇಶವ ಇಷ್ಟು ದಿನಗಳಿಂದ ಯಾವನನ್ನು ದುಲಾರಿ ದೀನಾನಾಥನ ರೂಪದಿಂದ ನೋಡುತ್ತ ಬಂದಿರುವಳೋ, ಇಂದು ಅವನೇ ಹೃದಯನಾಥನ ರೂಪದಿಂದ ಅವಳ ಮುಂದೆ ಬಂದಿದ್ದಾನೆ ಇದೊಂದು ಆಶಾತೀತ, ಅಸಂಭಾವ್ಯ ರೀತಿಯಾಗಿದ್ದಿತು. ಕಾರಣ ದುಲಾರಿ ಹೂವಿನಲ್ಲಿರುವ ಕೀಟಕದಂತೆ—ಆನಂದದಲ್ಲಿ ಸಂದೇಹದ ಪೀಡೆಯನ್ನು ಅನುಭವಿಸುತ್ತಿದ್ದಳು ಈ ಮಧುರ ಸ್ವಪ್ನ–ಅಡಗುವದೆಂದು ವಿಚಾರಿಸಲು ಆಕೆಯ ಹೃದಯ ನಡುಗುತ್ತಿತ್ತು. ಆಕೆ ಚಿತ್ತಗೊಟ್ಟು ಕೇಶವನ ಮಾತುಗಳನ್ನು ವಿಚಾರಿಸುತ್ತಿದ್ದಳು ತಿವಾರಿಪುರದಲ್ಲಿ ಮೊದಲಸಾರೆ ಆದ ಭೆಟ್ಟಿಯಿಂದಾರಂಭಿಸಿ, ಗಾಡಿಯಲ್ಲಿ ಕೂಡಿಸುವವರೆಗಿನ ಎಲ್ಲಾ ಮಾತು ವಿಚಾರಿಸಿ ನೋಡಿದಳು. ನಿದ್ರೆಯು ಆಕೆಯ ಕಣ್ಣುಗಳಿಗೇನೂ ಬರಲಿಲ್ಲ

ಬೇರೊಂದು ಮನೆಯ ಒಂದು ಕೊಟಡಿಯಲ್ಲಿ ಓರ್ವ ಕಿಶೋರಿ-ಮಲಗಿದ್ದಳು. ಆಕೆಯ ಕಣ್ಣುಗಳಿಗೂ ನಿದ್ರೆ ಇರಲಿಲ್ಲ. ಆದರೆ-ಆಕೆಯ ಕಂಗಳಲ್ಲಿ ದುಲಾರಿಯಂತೆ ಆನಂದದ ಪ್ರಕಾಶ ಕುಣಿದಾಡುತ್ತಿರಲಿಲ್ಲ. ಮೋಡಗವಿದ ಆಕಾಶದಂತೆ, ಆಕೆಯ ಕಣ್ಣುಗಳಿಂದ ನಡು ನಡುವೆ ನೀರು ಹನಿಗಳು ಉದುರುತ್ತಿದ್ದವು. ಮಾಲತಿ ಸುಮ್ಮನೆ ಮಲಗಿ, ತನ್ನ ಅದೃಶ್ಯ ಭವಿಷ್ಯವನ್ನು ಚಿಂತಿಸುತ್ತಿದ್ದಳು. ಕೇಶವನಿಂದ ವಂಚಿತಳಾದುದಕ್ಕಾಗಿ ಈ ಕಣ್ಣೀರು ಗರೆಯುವದಲ್ಲ. ಆಕೆ ಅಳುತ್ತಿರುವುದು ತನ್ನ ಭವಿಷ್ಯವನ್ನು ವಿಚಾರಿಸಿ. ಯಾವ ಶ್ರೀಮಂತ ಮನೆಗೆ ಆಕೆ ಸ್ವಾಮಿನಿಯಾಗಿ ಹೋಗುವವಳಿದ್ದಳೋ, ಆ ಮನೆ ಕಾರಾಗಾರದಂತೆ ಭಾಸವಾಗುತ್ತಿತ್ತು. ಅಲ್ಲಿ ಆಕೆಯ ಶರೀರ ನಿರುಪಾಯವಾಗಿ ನಿಲ್ಲುವದು, ಮನಸ್ಸು ನಿಲ್ಲಲಾರದು. ಆ ಮನಸ್ಸು ಎಲ್ಲಿರುವದು? ಎಲ್ಲಿ ಆಕೆ ಮಲಗಿಕೊಂಡು ಭವಿಷ್ಯ ಜೀವನ ವಿಚಾರಿಸುತ್ತಿರುವಳೋ, ಇದೇ ಮನೆಯಲ್ಲಿಯೇ? ಅಲ್ಲ, ಅಲ್ಲ, ಅದೇನೂ ಅಲ್ಲ. ಗಾರುಡಿಗನ ಮಂತ್ರಬಲವೇನೋ ಎನ್ನುವಂತೆ, ಇಂದು ಸಹಸಾ ಆಕೆಯ ಮನಸ್ಸು ಈ ಮನೆಯ ವಿಷಯದಲ್ಲಿ ಬೇರೆಯಾಗಿ ಹೋಗಿದೆ. ಅಂತಃಕರುಣಿಗಳೂ, ಅನುಗ್ರಹಶೀಲರೂ ಆದ ಇವರ ಮನೆಯಲ್ಲಿ, ಆಕೆಯ ಶರೀರ ಇನ್ನೂ ಅನಿವಾರ್ಯವಾಗಿ ಬಿದ್ದುಕೊಂಡಿತ್ತು. ಆದರೆ ಆಕೆಯ ಮನಸ್ಸು ಇದರಿಂದ ಬೇರೆಯಾಗಿತ್ತು, (ಅವಳಿಗನಿಸುತಿರುವದೇನೆಂದರೆ— ಈ ಮನೆ ಯಾವನೋ ದಾನವನ ಮುಖದಂತೆ ತನ್ನನ್ನು ನುಂಗಲೆಳಸುವದೋ? ಮನೆಯಲ್ಲಿರುವ ಇವೆಲ್ಲ ವಸ್ತುಗಳು, ಆ ದಾನವ ಕಚ-ಕಚ ತಿಂದು ಚಲ್ಲಿದವೋ?) ಇಷ್ಟು ದಿನ ಆಕೆಯ ಸ್ವಾಭಿಮಾನ ಗುಪ್ತವಾಗಿದ್ದಿತು, ಈ ದಿನ ತಾನು ಕೃಪಾಪಾತ್ರಳಲ್ಲದೇ ಈ ಮನೆಯಲ್ಲಿ ಬೇರೆಯಲ್ಲ ಎಂದು ಅವಳಿಗೆ ತಿಳಿದುಬಂತು ಮಾಲತಿಯ ಮನಸ್ಸು ಒಳಲಿ ಬೆಂದುಹೋಯಿತು. ದುಃಖದ ಸ್ಥಾನವನ್ನು ಅಭಿಮಾನ ಸ್ವೀಕರಿಸಿತು. ಅವಳು ಕೇಶವನ ಮಾತುಗಳನ್ನು ಯೋಚಿಸಿದಳು ಹಾಲು ಕುಡಿಸುವಾಗಿನಿಂದ ಆರಂಭಿಸಿ, ಇಂದು ಸಾಯಂಕಾಲ ಅಮೀನಾಬಾದ ತೋಟದಲ್ಲಿ ಮಾಡಿದ ಉಪದೇಶದವರೆಗೆ ಒಂದೊಂದಾಗಿ ಕಣ್ಣು ಮುಂದೆ ಹಾಯ್ದುಹೋದವು. ಈ ಸಮಯದಲ್ಲಿ ನಿದ್ದೆ ಎಲ್ಲಿಂದ ಬಂತು!

ಹಾಸಿಗೆಯಲ್ಲಿ ಮಲಗಿಕೊಂಡ ಕೃಷ್ಣಚಂದ್ರನೂ ಯೋಚಿಸುತಿದ್ದನು

ಅವನ ಕಣ್ಣಿಗೂ ನಿದ್ರೆ ಇರಲಿಲ್ಲ. ಅವನು ಯೋಚಿಸುತ್ತಿರುವದು ತಿಸಾರಿಪುರದ ಸಂಗತಿ, ರಾಮಚರಣ ಮೊದಲಾದವರನ್ನು ಲಖನೌಕ್ಕೆ ಕರೆತರುವ ವಿಷಯ, ಮೋತೀಲಾಲನ ಅದ್ಭುತ ಆಚರಣಪ್ರಸಂಗ, ಇವೆಲ್ಲ ಘಟನೆಗಳಿಂದ ಅವನ ಹೃದಯದಲ್ಲಿ ಚಿಗುರಿಕೊಂಡ ಆಶಯ ಪರಿಣಾಮ. ಮೊದಲ ದಿನ ಎಂದು ಅವನು ದುಲಾರಿಯನ್ನು ನೋಡಿದನೋ, ಅಂದೇ ಅವನ ಕಣ್ಣುಗಳು ಅಲ್ಲಿ ಹುದುಗಿ ಹೋಗಿದ್ದವು. ಆದರೆ ಆಗ ವಿಸ್ಮಯಭರಿತ ಪ್ರಶಂಸೆಯು ಯಾವುದೋ ಲೇಪ ಕಣ್ಣಿಗೆ ಬಡಿದು ಬಿಟ್ಟನು ಅಷ್ಟೇ ಅಲ್ಲದೇ ಅವನ ಆಶಾದಾಸ್ವರ ಅಸಂಭವದ ಬಲಿಷ್ಠ ಸಂಕೋಲೆಯಿಂದ ಬಂಧಿತವಾಗಿದ್ದಿತು.

ನಂತರ ಕಾಲಚಕ್ರ ತಿರುಗಲಾರಂಭಿಸಿ, ಮೋತೀಲಾಲನ ಸಂಗಡ ಮಾತು ಎಂದು ನಡೆದವೋ, ಅದೇ ದಿನ ಅಸಂಭವದ ಸಂಕೋಲೆ ಕಳಚಿತು ಹೃದಯದ ಯಾವ ಮೂಲೆಯಲ್ಲಿಯೂ ಕೂಡ ಲಾಲಸೆಯು, ದುರಾಸೆಯು ರೂಪ ತಾಳಿರಲಿಲ್ಲವೋ, ಅದು ಕೇಶವನ ಸಂಕೇತಗಳಿಂದ ಪುನಃ ಹೊಸ ಬೆಳಕು ಚಲ್ಲಿ ಹೃದಯದಲ್ಲಿ ಕಾಣಿಸಿಕೊಂಡಿತು. ಆದರೆ ಅದು ಪೂರೈಸಿ ಬರಲಿಕ್ಕೆ ಒಂದು ತಡೆಯೂ ಅವನಿಗೆ ತೋರಿತು. ಅವನು ವಿಚಾರಿಸಿದುದೇನಂದರೆ, ಹೀಗೆ ಮಾಡುವದು ಲೋಭಿಯ ಆಚರಣವಂತೆಯೇ ಸರಿ. ಯಾಕೆಂದರೆ–ಬೇರೆಯವರ ಸುಖ–ದುಃಖಗಳನ್ನೇನೂ ವಿಚಾರಿಸದೇ ತನ್ನ ಸುಖವನ್ನೇ ಲಕ್ಷಿಸುವದು ಯೋಗ್ಯವಲ್ಲ ಹೀಗಾಗಿ ಕೇಶವನ ಮುಂದೆ ಸಹ ಸ್ಪಷ್ಟ ಹೇಳಲು ಅವನಿಗೆ ಸಂಕೋಚವೆನಿಸಿದ್ದಿತು.

ಆದರೂ ಈಗ ಅವನ ವಿಚಾರ ವಿಷಯ ದುಲಾರಿ. ಆಕೆ ಒಂದು ಶಾಂತ ಸುಂದರ ಸ್ವಪ್ನ, ಮನೋಹರ ಮತ್ತು ನಿಜವಾಗಿ ಸುಖದಾಯಿನಿ! ಆ ದುಲಾರಿ ಇಂದು ಅವನ ಆಶಾ–ಆಕಾಂಕ್ಷೆಗಳಿಗೆ ದೂರವಿಲ್ಲ. ಈಗಿನ ಕರ್ತವ್ಯವೆಂದರೆ, ಬರಿ ಕಲ್ಪನೆಯನ್ನು ಪ್ರತ್ಯಕ್ಷ ಆಚರಣದಲ್ಲಿ ತರುವದಷ್ಟೇ! ಹೃದಯ ಲಕ್ಷ್ಮಿಯನ್ನು ಗೃಹಲಕ್ಷ್ಮಿಯನ್ನಾಗಿ ಮಾಡುವದು! ಕೃಷ್ಣಚಂದ್ರ ಭವಿಷ್ಯದ ಮನೋರಮ ಕಲ್ಪನೆಯಲ್ಲಿ ಮುಳುಗಿ ಹೋದನು. ನಿದ್ರೆಯು ಅವನ ಕಣ್ಣುಗಳಿಗೂ ಇರಲಿಲ್ಲ.

ಮತ್ತೊಂದು ಕಡೆಗೆ ಇನ್ನೊಂದು ವ್ಯಕ್ತಿ ಹಾಸಿಗೆಯಲ್ಲಿ ಮಲಗಿ ಯೋಚಿಸುತ್ತಿರುವದೇನೆಂದರೆ, ಈ ಮೂವರ ವಿಷಯ. ಅವನು ಯೋಚಿಸು

ತಪ್ಪುದು. ತನ್ನ ಇಬ್ಬರು ಮಿತ್ರರಾದ, ಕೃಪಾಶಂಕರ ಮತ್ತು ಕೃಷ್ಣಚಂದ್ರರ ದ್ವಾರಾ, ಇಬ್ಬರು ಆರ್ತ ಬಾಲಿಕೆಯರ ಹೃದಯ ವ್ಯಥೆ ಇಲ್ಲದಾಗುವದು; ದೂಷಿತ ವಾಯುವಿನಿಂದ, ಪ್ರೇಮವು ಹೂವಾಗಿ ಅರಳದೇ, ಎಲ್ಲಿ ಕಂಟಕದ ಪರಿಯಾಗಿತ್ತೋ, ಅಲ್ಲಿ ಅರಳಿ ಹೂವಾಗುವದು; ತನ್ನ ಜೀವನ ಸೂತ್ರದಲ್ಲಿ ಈ ಇಬ್ಬರು ಯುವತಿಯರಿಂದ ಏನು ಗಂಟು ತೊಡಕಿರುವದೋ, ಅದು ಬಿಚ್ಚಿದೊಡನೆ ತನಗಾಗುವ ಸ್ವಚ್ಛಂದ ಆ ದಿವಸ ಸಮುದ್ರ ವಕ್ಷದ ಮೇಲಿನ ನಗಿಯಂತಿರುವ ತಾನು ವಿರಾಟ್ ಕರ್ಮ ಸಾಗರದಲ್ಲಿ ಬಲುದಿನದ ತನ್ನ ಆಶಾ ಪ್ರವಾಹ ಹರಿಬಿಡುವ! ಆ ದಿವಸ ಜಗತ್ತಿನ ಎಲ್ಲ ಪ್ರಕಾರದ ಕೊಡುಕೊಳ್ಳುವದನ್ನು ಮುಗಿಸಿ, ಸಂಯತ ಹೃದಯದಿಂದ ಚಿರ ಅಭಿಲಷಿತ ಆರಾಧನೆಯಲ್ಲಿ ತೊಡಗಿಹೋಗುವ!

ಇಂದು ಸಾಯಂಕಾಲದಲ್ಲಿ, ಅಮೀನಾಬಾದ ತೋಟದಲ್ಲಿ, ನಡೆದ ಘಟನೆಯನ್ನು ನಿರೀಕ್ಷಿಸಿ ಕೇಶವನು ಪ್ರಸನ್ನನಾದ. ಪ್ರತ್ಯಕ್ಷ ರೂಪದಿಂದ ಆಗದಿದ್ದರೆ ಇಲ್ಲ ಅಪ್ರತ್ಯಕ್ಷವಾಗಿ ಮಾಲತಿಯ ಮನದಲ್ಲಿ ವ್ಯಥೆಗೆ ಅವನು ಕಾರಣನೆನಿಸಿದ್ದ ಅದನ್ನು ದೂರ ಮಾಡುವ ಶಕ್ತಿ ಭಗವಂತ ತನಗೆ ಕೊಟ್ಟನಲ್ಲ ಎಂದು ವಿಚಾರಿಸಿ ಸರ್ವಾಂತಃಕರಣದಿಂದ ಭಗವಚ್ಚರಣದಲ್ಲಿ ತನ್ನ ಕೃತಜ್ಞತೆಯನ್ನರ್ಪಿಸಿದನು ಹಾಗೂ ತನ್ನ ಮನಸ್ಸಿನ ಬಲ, ಮತ್ತು ಪ್ರವೃತ್ತಿ ಭವಿಷ್ಯದಲ್ಲಿ ನಷ್ಟವಾಗದಿರಲೆಂದು ಪ್ರಾರ್ಥಿಸಿ, ಕೇಶವ ನಿದ್ರಾದೇವಿಯ ಮಡಿಲಲ್ಲಿ ಮಲಗಿಕೊಂಡನು.

(೧೭)

ರಾಮಚರಣರಲ್ಲಿ ಈ ದಿನ ಕೇಶವ — ಕೃಷ್ಣಚಂದ್ರರಿಗೆ ಔತಣ ಸಾಯಂಕಾಲದಲ್ಲಿ ಉಭಯತರು ಅವರ ಮನೆಗೆ ಮುಟ್ಟಿದಾಗ ರಾಮಚರಣರು ತಮ್ಮ ಕೊಟಡಿಯ ಬಾಗಿಲು ಹಾಕಿಕೊಂಡು ಜಪ ಮಾಡುತ್ತ ಕುಳಿತಿದ್ದರು. ದುಲಾರಿ ಅಡಿಗೆ ಮನೆಯಲ್ಲಿ ಭೋಜನದ ವ್ಯವಸ್ಥೆ ನಡೆಸಿದ್ದಳು.

ಇವರನ್ನು ನೋಡಿ ದುಲಾರಿ ಹೊರಗೆ ಬಂದಳು. 'ಅಪ್ಪ ಜಪ ಮಾಡುವ ಹಾಗಿದೆ. ನೀವು ಮೇಲೆ ಹೋಗಿ ಬೇಕಾದರೆ ಕುಳಿತುಕೊಳ್ಳಿರಿ.'

ಕೇಶವ ನುಡಿದ. 'ನಾವೇನೋ. ಕೂಡುತ್ತೇವೆ ನೀನು ಎಷ್ಟು ಶ್ರಮ ತೆಗೆದುಕೊಂಡೆಯಲ್ಲ ?'

ಮಂದಹಾಸದಿಂದ ದುಲಾರಿಯಾಡಿದಳು 'ಇದರಲ್ಲೇನು ಶ್ರಮ ?' ಎಂದು ಹೇಳಿ ಕೃಷ್ಣಚಂದ್ರನಿಗೆ 'ಬೆಳಗಿನಲ್ಲಿ ನೀವು ಮೈಯ್ಯಲ್ಲಿ ಸರಿಯಾಗಿಲ್ಲವೆಂದು ಬರೆದಿದ್ದಿರಿ. ಈಗ ಹೇಗಿದೆ ?' ಎಂದು ಕೇಳಿದಳು.

ಕೃಷ್ಣಚಂದ್ರ ನಾಚಿಕೊಳ್ಳುತ್ತ ಮಾತಾಡಿದನು "ಹಾಗೇನೂ ಇಲ್ಲ! ಬೆಳಗಿನಲ್ಲಿ ಏಕೋ ಅಷ್ಟು ಸರಿಯಾಗಿರಲಿಲ್ಲ ಅಷ್ಟೇ "

ಆಶ್ಚರ್ಯದಿಂದ ಕೇಶವ ಆಡಿದನು "ಇದೇ ಮನುಷ್ಯ ಬೆಳಗಿನಲ್ಲಿ ಬರೆದಿದ್ದನೇ ? ಅಯ್ಯೋ ಎದ್ದವನೇ ಅಂಥ ಸುಳ್ಳು ಮಾತು ಏಕೆ ಬರೆದೆ? ಸಾಯಂಕಾಲ ಊಟದ ವೇಳೆಯಲ್ಲಿ ಅದನ್ನು ಪ್ರಮಾಣಿಸಿಕೊಡಲು ಬರುತ್ತಿರಲಿಲ್ಲವೇ ?"

· ನಗುತ್ತ ಕೃಷ್ಣಚಂದ್ರ ಅಂದನು "ನೀನು ಏನಾದರೂ ಹೇಳು. ನಾನು ಹೇಳಿದ್ದು ನಿಜ ಊಟದಲ್ಲಿ ಅದನ್ನು ಪ್ರಮಾಣಿಸಿಕೊಡಲು ನಾನೇನೂ ಯತ್ನಿಸುವದಿಲ್ಲ ಇವತ್ತಿನ ಹಾಗೆ ನಾಳೆಗೂ ಹೇಳಬರುವಂತೆ, ಯತ್ನಿಸುತ್ತೇನೆ ಪ್ರಕೃತಿ ಚನ್ನಾಗಿಲ್ಲ " ಎಂದವನೇ ನಗಲಾರಂಭಿಸಿದನು

'ಆಂ-ನಿನ್ನ ಸಲುವಾಗಿ ಇವತ್ತು ಎಷ್ಟು ವ್ಯವಸ್ಥೆಯಾಗಿದೆ ನೋಡು. ತೋರಿಸುವೆಯಷ್ಟೇ? ದುಲಾರಿ " ಎಂದು ಹೇಳಿ ಕೇಶವ ವಿನೋದದಿಂದ ದುಲಾರಿಯ ಮುಖ ನೋಡಿದನು

ದುಲಾರಿ ಕೃಷ್ಣಚಂದ್ರನ ಕಡೆಗೆ ತುಸು ನಿರೀಕ್ಷಿಸಿ ಮಂದಹಾಸ ಬೀರಿದಳು. ಮೆಲ್ಲನೆ ಮಾತಾಡಿದಳು " ನೀವು ಈ ಅಪಕೀರ್ತಿಯನ್ನು ಒಪ್ಪಿಕೊಳ್ಳುತ್ತೀರಿ ಹಾಗೆಂದು ಇವೆಲ್ಲ ಮಾತಲ್ಲದೇ, ಬೇರೆ ಇಲ್ಲವೆಂದು ಕಾಣುತ್ತದೆ "

ಕೇಶವ ನುಡಿದ 'ಇದು ಅಪಕೀರ್ತಿ ಅಷ್ಟೇ ಅಲ್ಲ ದುಲಾರಿ ಕೀರ್ತಿಯೂ ಸರಿ ಹಾಗೇನೋ ಕೇಳಿದ್ದೇವ ಸ್ವಸ್ಥರಾದ ಭದ್ರಪುರುಷರು ಮಾತ್ರ ಮೂರು ಸೇರು ಖೀರು, ನಾಲ್ಕು ತಟ್ಟೆ ಪೂರಿ ತಿನ್ನುತ್ತಾರಂತೆ ಅಸ್ವಸ್ಥ ಭದ್ರಪುರುಷರು ಎಷ್ಟು ತಿನ್ನುವರೋ, ಆದರ ಪ್ರಮಾಣ ಇಂದು ದೊರೆಯುತ್ತೆ "

ಉಭಯ ಮಿತ್ರರೂ ನಗಲಾರಂಭಿಸಿದರು. ದುಲಾರಿಗೂ ಈಸಲ ನಗ ತಡೆಯಲಾಗಲಿಲ್ಲ.

ಮೇಲೆ ಬಂದು ರಾಮಚರಣರ ಕೊಟಡಿಯ ಬದಿಯ ಮತ್ತೊಂದರಲ್ಲಿ

ಎರಡು ಕುರ್ಚಿಗಳ ಮೇಲೆ ಎದುರು ಬದುರು ಕುಳಿತರು. ಥಂಡಿಯ ಕಾಲವಾದರೂ ಪಶ್ಚಿಮ ಕಡೆಯ ಎರಡೂ ಕಿಟಕಿ ತೆರೆದಿದ್ದವು. ಆ ಮಾರ್ಗವಾಗಿ ನೆರೆಮನೆಯಿಂದ ಸಂಗೀತ ಧ್ವನಿ ಕೇಳುತ್ತಿದ್ದಿತು.

ತುಸು ವೇಳೆ ಸಂಗೀತ ಆಲಿಸಿ ಕೇಶವನೆಂದ "ಈದಿನ ನೀನು ಜೊತೆಯಲ್ಲಿರದಿದ್ದರೆ, ನಿನ್ನ ಲಗ್ನದ ಸಂಬಂಧವಾಗಿ ಮಾತು ಮುಗಿಸಿ ಬಿಡುತ್ತಿದ್ದೆ."

ಕೇಶವನ ಮಾತು ಕೇಳಿ ಒಂದು ಸಾರೆ ಅತ್ತಿತ್ತ ನೋಡಿ ಶ್ವಾಸಕಟ್ಟಿ ಕೃಷ್ಣಚಂದ್ರ ಹೇಳಿದನು "ಬೇಡ-ಬೇಡ ಕೇಶವ ಹುಡುಗತನ ಮಾಡಬೇಡ. ನಿನ್ನೆ ಸಾಯಂಕಾಲ ನಿನ್ನೊಡನಾಡಿದ ಮಾತುಕತೆಗಳ ಮೇಲಿಂದ ನಾನು ಒಳ್ಳೇ ವಿಚಾರ ಮಾಡಿಕೊಂಡಿದ್ದೇನೆ. ಈ ವೇಳೆಯಲ್ಲಿ ರಾಮಚರಣರ ಮುಂದೆ ವಿವಾಹದ ಮಾತು ತೆಗೆಯುವದು ಸರಿಯಾಗುವದಿಲ್ಲ. ಅವರಾಗಿಯೇ ಅದರ ಸಂಬಂಧ ತೆಗೆಯದೇ ನಾವೇ ತೆಗೆದು ಯಾಕೆ ಕಷ್ಟ ಕೊಡಬೇಕು? ಮುಂಬಯಿಯಿಂದ ನಾನು ಬರುವ ಮೊದಲೇ, ಏನೂ ಚರ್ಚೆ ಮಾಡಬೇಡ."

ಮುಂಬಯಿಯಲ್ಲಿ ಕೃಷ್ಣಚಂದ್ರನ ತಂಗಿ ಗಂಡ ಇರುತ್ತಿದ್ದನು. ಆವನಿಗೆ ಕಾಯಿಲೆ ಸಮಾಚಾರ ತಿಳಿದು, ತಂಗಿಯನ್ನು ಕರೆದುಕೊಂಡು ಮುಂಬಯಿಗೆ ಹೋಗಬೇಕೆಂದು ಅವನ ವಿಚಾರವಾಗಿತ್ತು.

ಕೇಶವ ಅಂದನು "ಹುಡುಗತನ ನೀನು ಮಾಡುವೆ. ನಮ್ಮ ಮುಂದೆ ಯಾವ ಮಾತೂ ಆಡದೇ ಮತ್ತೆಲ್ಲಿಯಾದರೂ ಅವರು ನಿಶ್ಚಯಮಾಡಿದರೆ ಏನು ಗತಿ?"

ಒಂದು ಕ್ಷಣ ವಿಚಾರಿಸಿ ಕೃಷ್ಣಚಂದ್ರ ನುಡಿದ "ಹಾಗೇನೂ ಸಾಧ್ಯವಿಲ್ಲ. ನನಗೆ ತಿಳಿಸದೇ ಅವರ ಒಂದೂ ಕೆಲಸಗಳಾಗಲಾರವು. ಇದು ಸಿದ್ಧಾಂತ." ನಂತರ ಕೇಶವನ ಕಡೆಗೆ ಬಾಗಿ ಮೆಲ್ಲನೆ ಅಂದನು 'ಇನ್ನೂ ಒಂದು ಮಾತು, ನಮ್ಮ ನಿಮ್ಮನ್ನು ಬಿಟ್ಟು ಈ ಪದಾರ್ಥ ಹೊರಗೆಲ್ಲಿಯೂ ಹೋಗುವದಿಲ್ಲ. ಮೊದಲು ನಮ್ಮನ್ನು ಕೇಳಿ ನೋಡದೇ ನೋಡುವರು."

ಕೇಶವ ನಗುತ್ತಿದ್ದ. "ಈ ಸಿದ್ಧಾಂತವನ್ನು ನೀನು ಹೇಗೆ ಸ್ಥಾಪಿಸಿದೆ? ನಮಗಿಂತ ಸತ್ಪಾತ್ರರು ಕಾನ್ಯಕುಬ್ಜದಲ್ಲಿ ಸಿಗುವುದಿಲ್ಲವೆಂದು ನಿನ್ನ ಅಭಿಪ್ರಾಯವೋ?"

ರಾಮಚರಣರ ಕೊಟಡಿಯ ಬಾಗಿಲು ತೆರೆದ ಸಪ್ಪಳ ಕೇಳಿ ಕೃಷ್ಣಚಂದ್ರ

ಅವಸರದಿಂದ ಉಚ್ಚರಿಸಿದನು "ಅವಸರಕ್ಕೆ ದೊರೆಯಲಾರವು ಬೇಗ ವೆಂದರೂ ನಾನು ಮುಂಬಯಿಯಿಂದ ತಿರುಗಿ ಬರುವಷ್ಟರಲ್ಲೇನೂ ಸಿಗುವದಿಲ್ಲ. ಮೊದಲು ನಾನು ಹೋಗಿಬರುತ್ತೇನೆ. ಹಿಂದಿನಿಂದ ಅದನ್ನೆಲ್ಲ ಪ್ರಸಂಗ ಬಂದಂತೆ ನೋಡಿಕೊಳ್ಳುವಾ"

ಈ ಉಭಯ ಮಿತ್ರರು ಬಂದುದನ್ನು ರಾಮುಚರಣರು ಯಾವಾಗಲೋ ಗುರುತಿಸಿದ್ದರು. ತಮ್ಮ ಕೊಟಡಿಗೆ ಅವರನ್ನು ಕರೆದು ಮಾತಾಡುತ್ತ ಕುಳಿತುಕೊಂಡರು

ಊಟ ಪ್ರಾರಂಭವಾದ ಮೇಲೆ ಅದರ ವಿಷಯಕ್ಕೆ ವ್ಯಂಗೋಕ್ತಿ ಪ್ರಾರಂಭವಾದವು ನಡು-ನಡುವೆ ಕೇಶವನು ದುಲಾರಿಯನ್ನು ಸಾಕ್ಷಿಗಂದು ಕೇಳುತ್ತಿದ್ದನು ಇದರಿಂದ ಆಕೆ ಬಹು ದಿಗಿಲು ಪಟ್ಟುಕೊಳ್ಳುತ್ತಿದ್ದಳು ತನ್ನ ವಿವಾಹ ಕೇಶವನೊಡನೆ, ಎಂದು ತಂದೆ ಮಗಳು ಮಾತಾಡಿರುವದರಿಂದ ಇವತ್ತು ಕೇಶವನ ಸಂಗಡ ಸರಳ ಮಾತಾಡಲು ಆಕೆಗೆ ಸಾಧ್ಯವೆನಿಸಲಿಲ್ಲ ಒರಿ ಇದಿಷ್ಟೇ ಅಲ್ಲ ಊಟಕ್ಕೆ ಬಡಿಸುವಾಗ ಸಹ ಆಕೆಗೆ ನಾಚಿಕೆ ಹೀಗಾಗಿ ಒಟ್ಟಲಿನಲ್ಲಿ ಹಾಲು ಬಡಿಸುವಾಗೊಮ್ಮೆ, ಗಡಿಬಿಡಿಯಿಂದ ಕೃಷ್ಣಚಂದ್ರನ ಪಾತ್ರೆಯಲ್ಲಿ ಹಾಲಿನ ಕೆನೆ ಎಲ್ಲ ಬಿದ್ದುಹೋಯಿತು ಹಾಲು ಹೆಚ್ಚು ಸುರಿದವು ಮೊದಲೇ ಕೃಷ್ಣಚಂದ್ರನ ಪ್ರಕೃತಿ ಸರಿಯಾಗಿರಲಿಲ್ಲ ಹಾಲು-ಕೆನೆ ಅವನಿಗೆ ಹೆಚ್ಚಾದವು ಇದೆಲ್ಲ ಕೇಶವನ ಕಣ್ಣಿಗೆ ಹೇಗೆ ಮರೆಯಾಗಬೇಕು? ಕೇಶವನ ಲಕ್ಷವಿದೆಯೋ, ಇಲ್ಲವೋ ನೋಡೋಣವೆಂದು ಕೃಷ್ಣಚಂದ್ರ ಕೇಶವನ ಕಡೆಗೆ ನೋಡುತಿರಲು, ಇಬ್ಬರ ದಿಷ್ಟಿ ಕೂಡಿಹೋದವು

ಮಿತ್ರನ ಮನಸ್ಸಿನ ಭಾವವರಿತು ಕೇಶವ ಕುಟಿಲ ಹಾಸ್ಯದಿಂದಾಡಿದನು "ಎಳ್ಳಷ್ಟೂ ನಾಚಬೇಡ ಕೃಷ್ಣಾ" ಕೆನೆ, ಪಾತ್ರೆಯಲ್ಲಿಯೇ ಚಲ್ಲಿಕೊಂಡಿದೆ"

ತುಸು ದುಲಾರಿಯ ಕಡೆಗೆ ದೃಷ್ಟಿ ಹೊರಳಿಸಿ ಕೃಷ್ಣಚಂದ್ರ ನೋಡಿದನು ದುಲಾರಿಯು ಶಾಂತ ಮತ್ತು ಪ್ರಸನ್ನ ಹಾಸ್ಯ ಮುಖಿಯಾಗಿ ಅವನನ್ನೇ ನೋಡುತ್ತಿದ್ದಾಳೆ ಮೊದಲು ಅವನ ಬಾಯಿಂದೇನೂ ಮಾತು ಬರಲಿಲ್ಲ ನಂತರ ಕೇಶವನ ಕಡೆ ಹೊರಳಿ ಮಾತಾಡಿದನು "ನೀನು ಅಪಾತ್ರ ಹೇಗೇನೂ ಅಲ್ಲ ಆದರೂ ಇದರಲ್ಲಿಯೂ ಭಾಗ್ಯ ಬೇಕು. ಹೀಗಾಗ

ಅದು ನಿನ್ನ ಪಾತ್ರೆಯಲ್ಲಿ ಬೀಳದೇ ನನ್ನ ಪಾತ್ರೆಯಲ್ಲಿ ಬಿದ್ದುಹೋಯಿತು

ಗೋಣು ಹಾಕಿ ಕೇಶವನೆಂದನು. 'ಅಲ್ಲ. ಭಾಗ್ಯದ ಮಾತು ಇದೇನೂ ಅಲ್ಲ. ಇದೂ ದುಲಾರಿಯ ಪಾತ್ರಾಪಾತ್ರವಿವೇಚನಾ ನಿನ್ನ ಬಿಟ್ಟು ಇನ್ನಾರಿಗೂ ಅಧಿಕಾರವಿಲ್ಲ ಹೀಗೆಂದು ದುಲಾರಿಯ ವಿಚಾರ, ಆದುದರಿಂದ ನಿನಗೆ ಹಾಲು ಮತ್ತು ಕೆನೆ. ಇದು ನಿನ್ನ ಬಾಗ್ಯವಲ್ಲ, ಭಾಗ' ಏಕೆ ದುಲಾರೀ, ಹೀಗೇ ಅಲ್ಲವೇ ?"

ದುಲಾರಿ ಬರಿ ಮಂದಹಾಸ ಬೀರಿದ್ದಳಷ್ಟೇ ಕೇಶವನನ್ನು ನಿರೀಕ್ಷಿಸಿ ಕೃಷ್ಣಚಂದ್ರನ ಕಡೆ ಹೊರಳಿ ನುಡಿದಳು. "ನೀವು ಇವೆಲ್ಲ ಮಾತುಗಳನ್ನು ಲಕ್ಷಿಸಬಾರದು. ನಾನು ಬಡಿಸಿದ್ದು ಈ ವಿಚಾರದಿಂದ- ನಿಮಗೆ ಹಾಕಿದ್ದು ನಷ್ಟವಾಗದು ಎಂದುಕೊಂಡು ಅಷ್ಟೇ."

ದುಲಾರಿಯ ಚಲಾಖಿಯಿಂದ ಕೇಶವ ನಸುನಕ್ಕನು. "ಅರ್ಥಾತ್, ಹೀಗೂ ನಿನ್ನ ವಿಚಾರವಿದ್ದೀತು ಮತ್ತಾರಿಗಾದರೂ ಬಡಿಸಿದ್ದು ನಷ್ಟವಾಗುವದು ನಾನು ಹೇಳುವುದೂ ಅದೇ ಶಕ್ತಿಯನ್ನು ಪರೀಕ್ಷಿಸಿ ನೀನು ಬಡಿಸಿರುವಿ "

ರಾಮುಚರಣರು ಒಳ್ಳೇ ಆನಂದದಿಂದ ಉಭಯ ಮಿತ್ರರ ಪರಿಹಾಸದ ಕೌತುಕ ನೋಡುತ್ತಿದ್ದರು. ಸುಶಿಕ್ಷಿತರೂ, ಸುಸಂಸ್ಕೃತರೂ ಆದ ಯುವಕರ ಕಪಟ ಕಲಹವು ಅವರಿಗೆ ಬಹಳ ಮೆಚ್ಚಿಗೆಯಾಗಿದ್ದಿತು. ಅದಕಾಗಿ ಇವರಿಗೆ ಮೇಲಿಂದಮೇಲೆ ಔತಣದ ಏರ್ಪಾಡು.

ಊಟವಾದ ಮೇಲೆ ತುಸು ಹೊತ್ತು ಹರಟೆ ಹೊಡೆದು, ಕೇಶವ ಕೃಷ್ಣಚಂದ್ರರು ಹೋಗಲು ಅಪ್ಪಣೆ ಕೇಳಿದರು.

ರಾಮುಚರಣರು ಯೋಚಿಸಿಕೊಂಡಿದ್ದೇನೆಂದರೆ- ಕೇಶವ-ದುಲಾರಿಯ ವಿವಾಹದ ಮಾತನ್ನು, ಮೊದಲು ಕೃಷ್ಣಚಂದ್ರನ ಮುಖಾಂತರವೇ ಕೇಶವನಿಗೆ ತಿಳಿಸಬೇಕು ಸಮಯ ಸಿಕ್ಕರೆ ಇವತ್ತಿನ ದಿವಸವೇ ಕೃಷ್ಣಚಂದ್ರನ ಸಂಗಡ ಮಾತಾಡಬೇಕು ಹೀಗೂ ಅವರ ವಿಚಾರವಿದ್ದಿತು. ಆದರೆ ಯಾವಾಗಲೂ ಕೇಶವ ಜೊತೆಗೂಡಿಯೇ ಇರುವದರಿಂದ ಸಮಯ ಸಿಕ್ಕಲಿಲ್ಲ. ಹೋಗುವ ಮುಂದೆ ಮಾತ್ರ ದುಲಾರೀ ಸಂಗಡ ಮಾತು—ಮಾತಾಡುತ್ತ ಕೇಶವ ಮುಂದಾದ. ಆಗ ರಾಮುಚರಣರು ಕೃಷ್ಣಚಂದ್ರನಿಗೆ ಮೃದು

ಸ್ವರದಿಂದ ನುಡಿದರು "ನಿನ್ನೊಡನೆ ನಾನು ಒಂದು ಮಹತ್ವದ ಮಾತಾಡ ಬೇಕಾಗಿದ್ದಿತು ಕೃಷ್ಣಚಂದ್ರ, ಇಂದು ಮಾತ್ರ ಆಗಲಿಲ್ಲ ಮುಂಬಯಿ ಯಿಂದ ತಿರುಗಿ ಬಾ ಆಗ ಮಾತಾಡುವಾ"

ಕೃಷ್ಣಚಂದ್ರ ತಡೆದು ನಿಂತನು. "ಒಂದು ವೇಳೆ ಬಹಳ ಅವಶ್ಯವಿದ್ದರೆ ಇನ್ನೂ ಹನು ತಡೆಯುತ್ತೇನೆ ಅಥವಾ ನಾಳೆ ಯಾವಾಗಾದರೂ ಬರುತ್ತೇನೆ.

ರಾಮಚರಣರು ನಡುವೇ ಹೇಳಿದರು 'ಹಾಗೇನೂ ಇಲ್ಲ ಈ ಹೊತ್ತು ರಾತ್ರಿಯಾಗದೆ ನಾಳೆ ಸಹ ನಿನ್ನನ್ನು ಕರಸುವದು ಸರಿಯಲ್ಲ. ನೀನು ತಿರುಗಿ ಬಂದನಂತರ ನೋಡುವಾ ಮಾತೇನೋ ಅವಶ್ಯದ್ದು ಆದರೆ ಅವಸರವೇನೂ ಇಲ್ಲ ಮಾತೆಂದರೆ ಬೇರೇನೂ ಅಲ್ಲ ದುಲಾರಿಯ ಲಗ್ನ ವಿಷಯದಲ್ಲಿ ವಿಚಾರಿಸುವದುಂಟು ಆದರೆ ಇವೆಲ್ಲ ಬೇಗ ಮುಗಿಯುವಂಥ ವಲ್ಲ ನೀನು ತಿರುಗಿ ಬಾ, ಆಗ ಕೂಡುವಾ"

ರಾಮಚರಣರ ಮಾತು ಕೇಳಿ, ಕೃಷ್ಣಚಂದ್ರನ ಹೃದಯ ಉಲ್ಲಾಸ ದಿಂದ ಕುಣಿಯಲಾರಂಭಿಸಿತು. ರಾಮಚರಣರೇನು ವಿಚಾರಿಸುವದೆಂದರೆ ನಿನ್ನೊಡನೆಯೇ ವಿವಾಹವೆಂದೇನೂ ಕೃಷ್ಣಚಂದ್ರನಿಗೆ ಹೇಳಿರಲಿಲ್ಲ ಆದರೆ ಆಶೆಯಿಂದ ಹುಚ್ಚಾದ ಅವನ ಮನಸ್ಸು ಹಾಗ ತಿಳಿದುಬಿಟ್ಟಿತು ಅವನಿಗೆ ಇಲ್ಲಿಯ ರೀತಿ ನಡತೆ ತಿಳಿದಿರಲಿಲ್ಲ ವಿವಾಹದ ಮಾತುಗಳನ್ನು ವರನೊಡನೆ ಚರ್ಚಿಸದೇ ಅವನ ಯಾರಾದರೂ ಆತ್ಮೀಯರು, ಮಿತ್ರರು ಇಂಥ ನಿಕಟ ಸಂಬಂಧವಿದ್ದವರೊಡನೆ ಚರ್ಚಿಸುತ್ತಾರೆ ಕಾರಣ ಅವನು ಸಂಕ್ಷೇಪದಿಂದ "ಒಳ್ಳೇದು" ಎಂದು ಉಚ್ಚರಿಸಿ ಹರ್ಷಭರಿತನಾಗಿ, ಕೇಶವ ಮತ್ತು ದುಲಾ ರಿಯರ ಹಿಂದೆ ನಡೆದುಬಿಟ್ಟನು

ಬೀದಿಯಲ್ಲಿ ಬಂದು ಕೇಶವ ನುಡಿದ "ನೀನು ಸುಮ್ಮನೇ ವಿಘ್ನ ಮಾಡಿದೆ. ಇಲ್ಲವಾದರೆ ನಾನು ವಿವಾಹದ ಮಾತು ಮುಗಿಸಿಬಿಡುತ್ತಿದ್ದೆ. ಇವೆಲ್ಲ ಕಾರ್ಯ ತಡೆಯುವಂಥದಲ್ಲ, ಅದೇನೋ ಹೇಳುವರಲ್ಲ. ಶುಭಸ್ಯ ಶೀಘ್ರಂ"

ಕೃಷ್ಣಚಂದ್ರ ನಗುತ್ತ ಹೇಳಿದನು 'ಜನರ ಮಾತು ಕೇಳಬೇಡಯ್ಯಾ, ತಾಳಿದವನು ಬಾಳಿಯಾನು, ಹೀಗೂ ಹೇಳುತ್ತಾರೆ ಜನ

ಕೇಶವ ನಗೆಯಾಡಿದನು "ಬಾಳುವದೇನೋ ನಿಜ ಆದರೆ ಯಾರು?

ಇದರದೂ ವಿಚಾರವಿದೆ ನೀನೇನೋ ತಾಳಿದಿ ನಾನು ಬಾಳಿಬಿಟ್ಟರಿ ಅದೆಂಥ ವಿಪತ್ತು ?''

ಕೃಷ್ಣಚಂದ್ರ ಹಾಸ್ಯದಿಂದ ಹೇಳಿದನು ''ನನಗೇನೂ ಅಭಯವಿಲ್ಲ ವೈರಾಗ್ಯದ ನೆರವಿನಿಂದ ಮಾತ್ರ ನೀನು ಸುಖವಾಗಿ ಬಾಳುವಿ. ನಾನೇನೂ ಹಾಗೇ ಕೆಡುಕು ಯೋಚಿಸುವದಿಲ್ಲ."

ಕೇಶವ ಬಲಭುಜದಿಂದ ಕೃಷ್ಣಚಂದ್ರನ ಕೊರಳಿಗೆ ಕೈಹಾಕಿ ನುಡಿದನು ''ಇಷ್ಟು ದುಃಸಾಹಸ ಯೋಗ್ಯವಲ್ಲ. ಬೇಗ ತಿರುಗಿ ಬಾ ತಡ ಮಾಡಬಂದರೆ ನಾನು ವೈರಾಗ್ಯದ ನೆರವಿನಿಂದ ಎಲ್ಲಾದರೂ ಹೋಗಿ ಬಿಡಬಹುದು ನೀನು ಪಶ್ಚಾತ್ತಾಪ ಪಡಬಹುದು ''

ಕೃಷ್ಣಚಂದ್ರ ಹೇಳಿದ ''ಅದು ಶಕ್ಯವಿಲ್ಲ ''

ಯಾಕೋ ಸಹಸಾ ಆಗ್ರಹದಿಂದ ಕೇಶವನೆಂದನು. ''ಒಳ್ಳೇದು ಕೃಷ್ಣಾ, ನೀನು ಮುಂಬಯಿಯಿಂದ ಬಂದು ನೋಡುತ್ತಿರಲು, ದುಲಾರಿಯ ಸಂಗಡ ನನ್ನ ವಿವಾಹ ನಿಶ್ಚಯವಾಗಿ ಹೋಗಿದೆ ಆ ಪ್ರಸಂಗದಲ್ಲಿ ನಿನ್ನ ಮನಸ್ಸು ಹೇಗಾಗುವದು ? ಹೇಳು ನೋಡುವಾ.''

ನಗುತ್ತ ಕೃಷ್ಣಚಂದ್ರ ಕೇಳಿದ. 'ರೋಮಾಂಚಕಾರಕರೀತಿ ಹೇಳಲಾ?''

''ಹೇಳಲ್ಲ ''

''ನಿನ್ನ ಹತ್ಯಾ ಮಾಡಲಿಕ್ಕೆ ಅಂಗಡಿಯಿಂದ ನಾನೊಂದು ಚೂರಿ ಕೊಂಡು ತಂದಿದ್ದೇನೆ ಎಂದು ಕೇಳಿ ನಿನ್ನ ಮನಸ್ಸಿನ ಅವಸ್ಥೆ ಹೇಗಾಗುವುದೋ ಹಾಗೇ '

ಥಂಡಿಯ ಗಾಳಿಯಿಂದ ಉಭಯ "ಮಿತ್ರರ ಉಡುಪಿನ ಚುಂಗುಗಳಲ್ಲ ಹಾರಲಾರಂಭಿಸಿದವು !

## (೧೮)

ಕೃಷ್ಣಚಂದ್ರ ಮುಂಬಯಿಗೆ ಹೋದನಂತರ ಎಷ್ಟೋ ದಿನಕ್ಕೆ, ಕೇಶವನು ಮಾಲತಿಯ ವಿವಾಹಕ್ಕೆಂದು, ಮುದುಕಿ ಅಜ್ಜಿಯನ್ನು ಕರೆತರಲು ಕಾಶಿಗೆ ಹೋದನು ಆದರೆ ಅಜ್ಜಿ ಏನಾದರೂ ಬರಲು ಒಪ್ಪಲಿಲ್ಲ. ಆಕೆ ಸ್ಪಷ್ಟ ಹೇಳಿದುದೇನಂದರೆ— ''ನಾನು ಸುಮ್ಮನೇ ಬರುವದಿಲ್ಲ ಒಂದು

ವೇಳೆ ನಿನ್ನ ಸಂಗಡ ಮಾಲತಿ ವಿವಾಹವಾಗಿದ್ದರೆ, ಹೇಗಾದರೂ ಮಾಡಿ ಈ ಹಣ್ಣಾದ ದೇಹ ಎಳೆದುಕೊಂಡು ಬರುತ್ತಿದ್ದೆ. ಕೇಶವಾ- ಇದನ್ನೆಲ್ಲ ನಿನ್ನ ಮನಬಂದಂತೆ ನಡೆಸಿ ಬಿಟ್ಟಿರುವಿ ''

ಮೊದಲು ಏನು ಹೇಳಬೇಕೋ ಕೇಶವನಿಗೆ ತಿಳಿಯಲಿಲ್ಲ. ತಿರುಗಿ ನಗುತ್ತ ನುಡಿದನು. "ಇಲ್ಲಮ್ಮಾ; ಎಲ್ಲರ ಅಭಿಪ್ರಾಯ ತಕ್ಕೊಂಡಿದ್ದೇನೆ. ನೀನು ಎಲ್ಲಾ ಮಾತು ಶಾಂತವಾಗಿ ಕೇಳಜ್ಜೀ ನೀನೂ ಒಪ್ಪಿಗೆ ಕೊಡುವಿ."

"ಈ ಅನ್ಯಾಯ ಕೇಳಲಿಕ್ಕೆ ನನಗೆ ಸಾಮರ್ಥ್ಯವಿಲ್ಲವಪ್ಪಾ ನಾನು ಆಕೆಯ ಮಾವನಿಗೆ ಮಾತು ಕೊಟ್ಟು ಕರೆದು ತಂದಿದ್ದೆ. ನೀನು ಆ ಲಕ್ಷ್ಮಿ ಯನ್ನು ದೂಡಿ ಹೊರಗೆ ಕಳಿಸಹತ್ತಿರುವಿ ಏನು, ಮಾಲತಿ ನಿನಗೆ ಸರಿಯಲ್ಲ ವೆಂದು ತಿಳಿಯುತ್ತೀಯಾ?"

ಕೇಶವ ಗಾಬರಿಯಿಂದ ಅಂದನು. 'ನಾನು ಈ ಮಾತನ್ನು ಮನಸ್ಸಿ ನಲ್ಲಿ ಕೂಡ ತಂದಿಲ್ಲ ಅಜ್ಜೀ. ಆಕೆಯನ್ನು ಲಗ್ನವಾಗುವ ವರ ಎಂಥನು? ಇದನ್ನು ತಿಳಿದರೆ ಹೀಗೆ ಮಾಡಿದ್ದು ಮಾಲತಿಯ ಕಲ್ಯಾಣವೆಂದೇ ನೀನು ಹೇಳುವಿ.'

ಅಜ್ಜಿ ಒಪ್ಪಲಿಲ್ಲ ''ಸ್ವಲ್ಪ ಕೂಡ ಇಲ್ಲ. ಸ್ವಲ್ಪ ಕೂಡ ಇಲ್ಲ. ನೀನು ಆಕೆಗೆ ಎಂಥ ಅನರ್ಥ ಮಾಡಿದೆ, ಇದನ್ನು ನೀನು ತಿಳಿಯುತ್ತಿದ್ದರೆ ಎಂದೂ ನೀನು ಹೀಗೆ ಮಾಡುತ್ತಿರಲಿಲ್ಲ.''

ವ್ಯಗ್ರನಾಗಿ ಕೇಶವನೆಂದ ''ಆದರೆ ಅಜ್ಜೀ. ಮಾಲತಿಯ ಒಪ್ಪಿಗೆ ಕೇಳಿ ಈ ಕಾರ್ಯ ನಿಶ್ಚಯ ಮಾಡಿದ್ದೇನೆ"

"ಇದು ಆಕೆಗೆ ಎಂಥ ಸಂಕಟ, ಎಷ್ಟು ಲಜ್ಜಾ ವಿಷಯವೆಂಬುದನ್ನು ನೀನೇನು ಬಲ್ಲೆ? ಅದೆಲ್ಲ ನಿನ್ನ ಪುಸ್ತಕಗಳಲ್ಲಿ ಬರೆದಿಲ್ಲವಲ್ಲ"

ಆಗ್ರಹದಿಂದ ಕೇಶವ ನುಡಿದ 'ಆಕೆ ನಿನಗೇನಾದರೂ ಬರೆದಿರುವಳೋ? ಅಥವಾ ಅತ್ತಿಗೆ ಬರೆದಿರುವಳೋ? ಹೇಳು ನೋಡುವಾ''

ಕೇಶವನ ಮಾತಿಗೇನೂ ಉತ್ತರಿಸದೇ ಅಜ್ಜಿ ಹೇಳಿದಳು. ''ಏನು ಬಲುಮೆ ಮಾಡಬೇಕೆನಿಸುವದೋ ಮಾಡು. ಕಾಶೀ ವಿಶ್ವನಾಥ ಮಂಗಲ ವನ್ನೇ ಮಾಡುತ್ತಾನೆ ಆದರೆ ನನ್ನನ್ನು ಬಿಟ್ಟುಬಿಡು. ಯಾರನ್ನು ಎದೆಗವಚಿ

ಕೊಂಡು ತಂದೆನೋ, ಆ ಕೂಸಿಗೂ ಅಪ್ಪಣೆ ಕೊಡಲು ಬರುವದಿಲ್ಲ. ನನ್ನ ಪ್ರೈಮ್ನಲ್ಲಿಯೂ ಸರಿಯಾಗಿಲ್ಲ ಮನಸ್ಸೂ ನೆಟ್ಟಗಿಲ್ಲ ''

ಎರಡು ದಿನ ಅಲ್ಲಿದ್ದು ಅನೇಕ ರೀತಿಯಿಂದ ಹೇಳಿ ಕೇಳಿಪರೂ ಅಜ್ಜಿಯನ್ನು ಹೊರಡಿಸುವದು ಕೇಶವನಿಂದಾಗಲಿಲ್ಲ. ಇನ್ನೊಂದು ದಿನ ನಿಲ್ಲಬೇಕೊ, ಹೊರಡಬೇಕೋ ಎಂದು ಯೋಚಿಸುತ್ತಿರುವಾಗ ಅನಂತನ ತಂತಿ. ರಾಮಚರಣರು ಅತ್ಯವಸ್ಥೆ. ಬೇಗ ಬಾ ' ಕಡೆಗೆ ಒಬ್ಬನೇ ತಿರುಗಿಬಿಟ್ಟನು

ಲಖನೌಕೆ ಬಂದನು. ವೈದ್ಯರು ಹೇಳಿದರು. ಇನ್ನು ಮೂರು ಗಂಟೆಗಿಂತ ರಾಮಚರಣರು ಹೆಚ್ಚು ಉಳಿಯುವದಿಲ್ಲ ರೋಗಿಯ ಒಳಿಯಲ್ಲಿ ಕೇಶವ ಹೋದಾಗ ರಾತ್ರಿ ಹತ್ತು ಗಂಟೆ ಹೊಡೆದಿತ್ತು ಅನಂತ, ರಾಮಕಲಿ, ಮಾಲತಿ ಎಲ್ಲರೂ ಇದ್ದರು ರೋಗಿಯನ್ನು ನೋಡಿ ಅಷ್ಟಲ್ಲ– ದುಲಾರಿಯನ್ನು ನೋಡಿ ಕೇಶವ ನಡುಗಿಹೋದನು. ಎಷ್ಟೋ ದಿನಗಳವರೆಗೆ ತಂದೆಯು ಏಕನಿಷ್ಠ ಸೇವೆ ಮಾಡಿ, ಅದಕ್ಕೇನೂ ಫಲ ಹೊಂದದೇ ದುಲಾರಿ ಹತಾಶಳಾಗಿದ್ದಳು.

ಮೆಲ್ಲನೆ ಕೇಶವ ರಾಮಚರಣರ ಬಳಿ ಹೋದನು. ರಾಮಚರಣರ ವೇಳೆ ಸಮೀಪಿಸಿದ್ದಿತು ಅವರು ಕಣ್ಮುಚ್ಚಿ ಮಲಗಿದ್ದರು ಅವರ ಚೈತನ್ಯವೆಲ್ಲ ಮೆಲ್ಲನೆ ಅಳಿದು ಜಡತ್ವ ಬರಲಾರಂಭಿಸಿತ್ತು. ಅನಂತನು ರಾಮಚರಣರ ಕಿವಿಯ ಹತ್ತಿರ ಮುಖವಿಟ್ಟು ಕೂಗಿದನು 'ಕಾಕ ಕೇಶವ ಬಂದಿದ್ದಾನೆ '

ಎರಡು ಮೂರು ಸಾರೆ ಕೂಗಿದ ನಂತರ ರಾಮಚರಣ ಕಣ್ಣುಬಿಟ್ಟರು. ಹಾಗೂ ಕೇಳಿದರು 'ಎಲ್ಲಿ? ಎಲ್ಲಿ?—

ಕೇಶವ ರಾಮಚರಣರ ಕೈ ತನ್ನ ಕೈಯ್ಯಲ್ಲಿ ತಕ್ಕೊಂಡು ಮಾತಾಡಿದನು. "ಇಲ್ಲಿ ನಾನು ನಿಮ್ಮ ಬಳಿಯಲ್ಲಿಯೇ ಇದ್ದೇನೆ."

''ದುಲಾ–ದುಲಾರೀ ?"

ಕೇಶವ ಅಂದ "ದುಲಾರಿಯೂ ನಿಮ್ಮ ಮುಂದಿದ್ದಾಳೆ ''

ರಾಮಚರಣರು ತಮ್ಮ ನಡುಗುವ ಕೈಗಳಿಂದ ದುಲಾರಿಯ ಬಲಗೈಯನ್ನು ಹಿಡಿದು, ಕೇಶವ ಮತ್ತು ದುಲಾರಿಯ ಕೈಗಳೆರಡನ್ನೂ ತಮ್ಮ ಎದೆ ಮೇಲಿಟ್ಟು, ಕೇಶವನ ಕಡೆ ಮುಚ್ಚುತಿರುವ ತಮ್ಮ ಕಣ್ಣುಗಳಿಂದ ನೋಡುತ್ತ ನುಡಿದರು. "ಹೇಳು."

ಕೇಶವ ಕಷ್ಟದಿಂದ ಮಾತಾಡಿದನು "ಏನು ಹೇಳಲಿ? ಹೇಳಿ "

ಗತಪ್ರಾಯವಾದ ಚೈತನ್ಯ ಮತ್ತು ಶಕ್ತಿಯನ್ನು ಹೇಗೋ ಒಂದು ಗೂಡಿಸಿ ರಾಮಚರಣರು ಕೇಶವನ ಮುಖದಲ್ಲಿ ಸ್ಥಿರಮಾಡಿ ಕೇಳಿದರು "ಹೇಳು. ಗ್ರಹಣಮಾಡಿದೆಯಾ?''

ಒಂದು ಕ್ಷಣ ವಿಚಾರದಲ್ಲಿ ಬಿದ್ದು ಕೇಶವ ನುಡಿದ "ದುಲಾರಿಯ ಎಲ್ಲಾ ಭಾರ ನಾನು ತೆಗೆದುಕೊಂಡೆ ನೀವು ನಿಶ್ಚಿಂತರಾಗಿರಿ"

ಕೇಶವ ಏನು ಉತ್ತರಿಸುವನೋ ಎಂದು ಎಲ್ಲರೂ ಅತ್ತಕಡೆಗೆ ಗಮನ ವಿಟ್ಟಿದ್ದರು ಕೇಶವನ ಉತ್ತರದಿಂದ ಯಾರ ಲಾಭ—ಹಾನಿಯೂ ಆಗುವಂತಿರಲಿಲ್ಲ ಹೀಗಿದ್ದರೂ ಒಂದು ಜೀವ ಉಸಿರು ಹಿಡಿದು ನೋಡುತ್ತಿದ್ದಿತು. ಕೇಶವನ ಉತ್ತರ ಕೇಳಿ ಆಕೆಯ ಕೆಂಪು ಮೋರೆ ಹಿಂಜಿದ ಹತ್ತಿಯಂತೆ ಬಿಳುಪಿಟ್ಟುದೇಕೆ? ಎಂಬ ರಹಸ್ಯವು ಕಡನು ಕೌತು ಕದ್ದಲ್ಲ ಮಾಲತಿಯ ಅಭಿಮಾನಕ್ಕೆ ಒಮ್ಮೆ ಪೆಟ್ಟು ಬಿದ್ದಮೇಲೆ ಆಕೆಯ ಹೃದಯದಲ್ಲಿ ಒಂದೂ ಆಶಾ-ಕಿರಣವಿರಲಿಲ್ಲ ಈರ್ಷೆದ್ವೇಷಾದಿಗಳ ಮಾತೂ ಇಲ್ಲ ಯಾವ ಹಾನಿ ಮೊದಲೇ ಆಗಿಹೋಗಿದ್ದಿತೋ, ಅದರಲ್ಲಿ ಹೆಚ್ಚೇನೂ ಆಗಲಿಲ್ಲ ಆದರೆ ಮೃತ್ಯು-ಶಯ್ಯೆಯ ಮೇಲೆ ರಾಮಚರಣರು ಬಿದ್ದಿರುವಾಗ ಕೇಶವನೇನು ವಚನ ಕೊಟ್ಟನೋ, ಅದರಿಂದ ಮಾತ್ರ ಮಾಲ ತಿಯ ಹೃದಯದ ಯಾವುದೋ ಅಜ್ಞಾತ ದೇಶದಲ್ಲಿ ಆಘಾತವಾಯಿತು ಅಂಥ ಆಘಾತ ತಾನು ಮೊದಲು ಎಲ್ಲಾ ಕಳೆದುಕೊಂಡಿದ್ದರೂ ಆಗಿರಲಿಲ್ಲ

ಕೇಶವನ ಮಾತುಗಳಿಂದ ಮೃತ್ಯುಮುಖದಲ್ಲಿರುವ ರೋಗಿಯ ತೇಜ ಹೀನ ಕಣ್ಣುಗಳು ಸಹ ಕ್ಷಣಮಾತ್ರ ಹೊಳೆದವು ಒಣಗಿದ ಮೇಲುದುಟಿ ತುಸು ಅಲುಗಿ ಏನೋ ಅಸ್ಪಷ್ಟ ಶಬ್ದ ಹೊರಟವು-ಮಾತ್ರ ಏನೂ ತಿಳಿಯ ಲಿಲ್ಲ ಆದರೂ ಇದು ಅವರ ಅಂತಿಮ ಆಶೀರ್ವಾದವೇ ಎಂದು ಎಲ್ಲರೂ ಭಾವಿಸಿಕೊಂಡರು

ರಾತ್ರಿ ಎಷ್ಟೋ ಸಲ ಡಾಕ್ಟರರು ಬಂದರು ಎಷ್ಟೋ ಸಲ ಔಷಧ ಕುಡಿಸಿಯೇ ಕುಡಿಸಿದರು. ಆದರೆ ಕೇಶವ ಬಂದಾಗೊಮ್ಮೆ ತೆರೆದ ಕಣ್ಣು ಪುನಃ ತೆರೆಯಲಿಲ್ಲ ಉತ್ತೇಜಕ ಔಷಧಗಳು ಸಹ ಕಣ್ಣು ತೆರೆಸಲು ಸಮರ್ಥ ವಾಗಲಿಲ್ಲ. ದುಲಾರಿಯ ಕರುಣಾ-ಕ್ರಂದನವೂ ಅಷ್ಟೇ ದುಲಾರಿ ಮೃತ

ನಾದ ತಂದೆಯ ಎದೆಯ ಮೇಲೆ ಒಳಲಿ ಬಿದ್ದುಕೊಂಡಿದ್ದಳು ಕೇಶವನು ಮೃತರ ತಲೆಯ ಕಡೆಗೆ ಕುಳಿತು, ಕಣ್ಣೀವೆ ಹಳಚದೇ ಮೃತರು ಮತ್ತು ಅರ್ಧ ಮೃತಳಂತಾದ ದುಲಾರಿಯನ್ನು ನೋಡುತ್ತಿದ್ದನು. ತುಸು ದೂರ ಮಾಲತಿ ರಾಮಕಲಿಯರು ಕಣ್ಣೀರ್ಗರೆಯುತ್ತ ಕುಳಿತಿದ್ದರು.

ಅನಂತನು ಅಂತಿಮ ಸಂಸ್ಕಾರದ ಸಿದ್ಧತೆಗೆ ಕೆಳಗಿಳಿದು ಹೋಗಿದ್ದನು

## (೧೯)

ರಾಮಚರಣರು ತೀರಿ ಹದಿಮೂರು ದಿನ ಮುಗಿದವು ಆ ನಂತರದಲ್ಲಿ ಸಹ ದುಲಾರಿ ಹಜರತಗಂಜದ ಮನೆಯಲ್ಲಿಯೇ ಎಷ್ಟೋ ದಿನ ಇದ್ದಳು. ತಂದೆ ತೀರಿದ ಮೇಲೆ, ಅವನ ಸ್ಮೃತಿಯು ವಿನಾ ಆ ಮನೆಯಲ್ಲಿ ಇನ್ನೇನೂ ಉಳಿಯಲಿಲ್ಲ ಆದರೆ ದುಲಾರಿಯ ನೊಂದ ಮನಸ್ಸು ಇದನ್ನೊಪ್ಪುತ್ತಿರಲಿಲ್ಲ ಇದೇ ಮನೆಯಲ್ಲಿ ಆಕೆ ತಂದೆಯ ಸೇವೆ ಮಾಡಿದ್ದಾಳೆ, ಇಲ್ಲಿಯೇ ಕಡೆಯ ಆಶೀರ್ವಾದ ಹೊಂದಿದ್ದಾಳೆ, ಕಾರಣ ಕ್ರಿಯಾ-ಕರ್ಮ ತೀರಿದರೂ ಮನೆ ಬಿಡಲು ಆಕೆ ಒಪ್ಪಿಕೊಳ್ಳುತ್ತಿರಲಿಲ್ಲ,

ದುಲಾರಿಯ ಮನದ ಈ ಮಾತು ತಿಳಿದ ಕೇಶವನು, ಎಷ್ಟು ತಡೆ ಮಾಡಲಿಲ್ಲ ಆಕೆಯ ಜೊತೆಗೆ ಮಾಲತಿಯೂ ಬಂದು ಇರತೊಡಗಿದ್ದಾಳೆ ಈ ಇಬ್ಬರು ಯುವತಿಯರ ಭಯ ನಿವಾರಣೆಗೆ ಕೇಶವನು ಬಂದು ಹೊರಗಿನ ಕೊಟಡಿಯಲ್ಲಿ ಮಲಗುತ್ತಿದ್ದಾನೆ

ಆಗ ಬಹುಶಃ ನಾಲ್ಕು ಗಂಟೆ. ಸಾಲೆಗಳಿಗೆ ಬಿಡುವಾಗಿದೆ ಹುಡುಗರ ದೊಂದು ತಂಡ ಹಿಂಡುಗಟ್ಟಿ ಮನೆಗೆ ತಿರುಗಿದ್ದಿತು ದುಲಾರಿ ಮತ್ತು ಮಾಲತಿಯರು ಕಿಟಕಿಯ ಬದಿಯಲ್ಲಿ ಕುಳಿತು, ಆ ಹುಡುಗರ ಚಾಪಲ್ಯ ನೋಡುತ್ತ ಮಾತಾಡುತ್ತಿದ್ದರು.

ಮಾಲತಿ ನುಡಿದಳು. "ನನಗೇನೋ ವಿಶ್ವಾಸವಿದೆ ದುಲಾರಿ ನಿನ್ನ ದುಃಖದ ದಿನ ಹಿಂದಾದವು ಸುಖದ ದಿನ ಬೇಗ ಬರುತ್ತವೆ "

ಬೀದಿಯ ಕಡೆಗೆ ನೋಡುತಿರುವ ದುಲಾರಿ ಅಂದಳು 'ಯಾರು ಬಲ್ಲರಮ್ಮ ನನಗೆ ಎಷ್ಟು ಭರವಸೆ ಇಲ್ಲ. ಇದಕ್ಕೂ ಮೊದಲು ನಾನೆಷ್ಟು ಕಷ್ಟಪಟ್ಟೆ

ನೆಂಬುದನ್ನು ನೀನು ಬಲ್ಲೆ. ಅಪ್ಪನ ಆಶ್ರಯವೊಂದಿತ್ತು. ಅವನೂ ಹೋಗಿಬಿಟ್ಟ."

ತುಸು ವಿಚಾರಿಸಿಕೊಂಡು ಮಾಲತಿ ಹೇಳಿದಳು. "ಅವರೇನೂ ನಿನಗೆ ಆಶ್ರಯ ಮಾಡಿಕೊಡದೇ ಹೋಗಲಿಲ್ಲ ದುಲಾರೀ! ತಾವು ಕೈಬಿಡುವ ಮೊದಲೇ ನಿನ್ನ ಕೈ ಮತ್ತೊಬ್ಬರ ಕೈಯ್ಯಲ್ಲಿಕೊಟ್ಟಿದ್ದಾರೆ " ಎಂದು ಹೇಳಿ ದುಲಾರಿ ಮಾತಾಡಲು ಸಮಯವನ್ನೇ ಕೊಡದೇ ಮಾಲತಿ ಕೇಳಿದಳು— "ನೀನು ಸಣ್ಣವಳಿರುವಾಗ ಗೌರಿಯನ್ನು ಪೂಜಿಸಿದ್ದೀಯಾ?"

ಆಶ್ಚರ್ಯದಿಂದ ಮಾಲತಿಯನ್ನು ನಿರೀಕ್ಷಿಸಿ ದುಲಾರಿ ಅಂದಳು. "ಇಲ್ಲ ಅದೇಕೆ?"

''ಮತ್ತೇನಾದರೂ ಪೂಜೆ, ಪುನಸ್ಕಾರ–ವ್ರತ . "ಸಹಸಾ ತನ್ನಲ್ಲಿಯೇ ಜಾಗ್ರತಳಾಗಿ ಮಾಲತಿಯ ಮಾತು ನಿಲ್ಲಿಸಿದಳು ಆಕೆಯ ಮನದಲ್ಲಿ ಹುದುಗಿದ್ದ ವೇದನೆ ಹೇಗೋ ಶಬ್ದಗಳಲ್ಲಿ ಹರಿದು ಬರುತ್ತಿದ್ದಿತು ಇದನ್ನು ಮೊದಲು ಆಕೆ ತಿಳಿದಿರಲಿಲ್ಲ. ಆದರೆ ಯಾವಾಗ ತಿಳಿದಳೋ ಬೇಗಲೇ ತಡೆದು ಬಿಟ್ಟಳು. ಚಲಾಕಿಯುಳ್ಳ ಕುದುರೆ ಓಡೋಡುತ್ತ ಮುಂದೆ ಖಂದಕ ನೋಡಿ ಒಮ್ಮೆಲೇ ನಿಂತುಕೊಂಡಂತಾಯಿತು

ಮಾತೇನೋ ಮೊದಲೇ ಅರ್ಧ–ಮರ್ಧ ಹೊರಬಿದ್ದು ಹೋಗಿತ್ತು ಆದರೆ ದುಲಾರಿ ಅರ್ಥಕ್ಕಿಂತ ಹೆಚ್ಚು ತಿಳಿದುಬಿಟ್ಟಳು. ಅಲ್ಲದೆ ಮಾಲತಿಯ ಮುಗಿಯದ ಮಾತನ್ನೇ ಅನುಲಕ್ಷಿಸಿ ದುಲಾರಿ ನುಡಿದಳು ''ಅದರಿಂದೇನು–ವ್ರತಾದಿಗಳಿಂದ?"

ಮಾತು ಮುಗಿಸದೇ ವಿಧಿ ಇಲ್ಲವೆಂದು ಮಾಲತಿ ಅಂದಳು 'ಅದರಿಂದ ಕೇಶವಣ್ಣ ನಿನ್ನ ಸ್ವಾಮಿಯಾದ.' ಹೇಳಹೇಳುತ್ತ ಆಕೆಯ ಮೊಗ ಕೆಂಪೇರಿತು.

ದುಲಾರಿ ಮಾಲತಿಯ ಮೊಗದ ಕೆಂಪನ್ನು ಕಂಡಳು ಆಕಯ ಕಂಗಳ ಮೂಲೆಯಲ್ಲಿ ಯಾವ ಭಾವದ ಕ್ಷೀಣ ರೇಖೆ ಇತ್ತೋ, ಅದನ್ನು ಮಾತ್ರ ಕಾಣಲಿಲ್ಲ "ಈ ಜನ್ಮದಲ್ಲಂತೂ ಏನೂ ಮಾಡಿಲ್ಲ ಪೂರ್ವಜನ್ಮದ್ದೇನೋ ಇದ್ದರೆ ಇರಬಹುದು ''

ಅಜಾಗರೂಕತೆಯಿಂದ ಮಾಲತಿಯ ಪ್ರೇಮ–ವಂಚಿತ ಹೃದಯದಲ್ಲಿ ಕ್ಷಣ ಮಾತ್ರ ದೌರ್ಬಲ್ಯ ಬಂದು ತಾಗಿದ್ದಿತು ಅದನ್ನು ಹತ್ತಿಕ್ಕಿಕೊಂಡು

ಮಾಲತಿ ಸಹಜ ಭಾವದಿಂದ ಉದ್ಗರಿಸಿದಳು "ಈ ಜನ್ಮದಲ್ಲೇನೂ ಮಾಡ ದಿದ್ದರೂ ಸಹ, ದುಲಾರೀ ಅದು ಪೂರ್ವ ಜನ್ಮದ ಪುಣ್ಯ ಬಲವೆಂದು ತಿಳಿ ಅಂದರೆ ಹೀಗ ಫಲ ಸಿಗುವದು ಕೇಶವಣ್ಣನ ಆಶ್ರಯ ದೊರೆಯುವದರಿಂದ ನಿನ್ನ ದುಃಖವೆಲ್ಲಾ ದೂರವಾಗಿ ಹೋಗುವದು ''

ಆಶ್ವಾಸನದ ನುಡಿ ಕೇಳಿ ದುಲಾರಿಯ ಹೃದಯಕ್ಕೆ ತುಸು ಹಾಯೆನಿಸಿತು ತಂದೆಯ ಆಶ್ರಯ ಕಡಿದುಹೋದಮೇಲೆ, ಇಂಥ ಬಲಿಷ್ಠ ಹೊಸ ಆಶ್ರಯ ದೊರೆಕಿತಲ್ಲ, ಎಂದು ಸಂತಸಗೊಂಡು ತಂದೆ ತೀರಿದ ದುಃಖ ಮರೆತಳು ಆದರೆ ದೀಪದ ಬುಡಕ್ಕೆ ಕತ್ತಲೆ ಎಂಬಂತೆ ಸಂಶಯವೂ ತಲೆ ಎತ್ತಿತು ತಂದೆ ತೀರಿದ ಮೇಲೆ ಕೇಶವನ ಆಶ್ರಯದ ಮಾತನ್ನು ಆಕೆ ಯೋಚಿಸಿದುದೆಷ್ಟೋ ಬಾರಿ ಆದರೆ ಪ್ರತಿಸಲಕ್ಕೂ ಸಂಶಯವೆದ್ದು ತಲೆ ಕೊರೆಯುತಿತ್ತು. ಅದಕಾಗಿ ಮಾಲತಿಯ ಮಾತು ಕೇಳಿ ಅವಳಾಡಿದಳು "

"ಭಯವಾಗುವದು ತಂಗೀ ಮಂದಭಾಗ್ಯಳಾದ ನನಗೆ ಇಷ್ಟು ಸುಖ ಸಿಗುವದೆಂಬ ವಿಶ್ವಾಸ ಹುಟ್ಟುವದಿಲ್ಲ ನಿನ್ನ ಕೇಶವಣ್ಣ ಮನುಷ್ಯ ನಲ್ಲವೇ ಅಲ್ಲ ಅವನು ದೇವತಾ ಹೀಗಿರುವಾಗ ಅವನ ಆಶ್ರಯ ಸರ್ವದಾ ಹೊಂದಬಲ್ಲೆನೆನುವಷ್ಟು ನನ್ನ ಭಾಗ್ಯವುಂಟೇ ''

"ಅವನು ತೋರಿಸುವ ದಯೆಯಿಂದ ನೀನು ಆಶ್ರಯ ಪಡೆಯುವಿ ಅವನು ಕೃಪೆ ಮಾಡಿ ಆಶ್ರಯ ನೀಯುವನು ನೀನು ಸರಿಯಾಗಿ ಹೇಳಿದೆ, ದುಲಾರೀ ಅವನು ದೇವತಾ ಮನುಷ್ಯರಿಂದ ಬಹಳ ಮೇಲೆ ಅವನು ಬರಿ ಕೊಡುವದನ್ನಷ್ಟೇ ಬಲ್ಲ ತೆಗೆದುಕೊಳ್ಳುವದನ್ನು ಎಷ್ಟೂ ಒಲ್ಲ '' ತುಸು ತಡೆದು ಮಾಲತಿ ಮುಂದುವರಿಸಿದಳು "ಅಲ್ಲದೇ ಈ ಮಾತು ಸಹ ನಿಜವೇ ತಂಗಿ ಇಚ್ಛಿಸುವದರಿಂದ ಏನೂ ಸಿಗುವದಿಲ್ಲ ನಿರಿಚ್ಛೆಯಿಂದ ಎಲ್ಲ ಸಿಗುತ್ತದೆ ನಿನ್ನಲ್ಲಿರುವ ಈ ಪ್ರೇಮ ನೋಡು, ಇದು ಸಾಧಾರಣ ವಸ್ತುವಲ್ಲ ಇದೇನು ಅವನು ಬೇಡಿದನೆಂದು, ದೊರಕಿದುದೇ? ನಿರಿಚ್ಛೆ ಯಿಂದಲೇ ದೊರಕಿದ್ದು ''

ಪ್ರೇಮದ ಮಾತು ಕೇಳಿ ದುಲಾರಿಯ ಮೊಗದ ಕೆಂಪಿಳಿದು ಹೋಯಿತು ಶೋಕದಿಂದ ಬಾಡಿದ ತುಟಿಗಳ ಮೇಲೆ, ಏನೋ ಹುಸಿನಗೆಯು ಗೆರೆಯಷ್ಟೇ ಕ್ಷಣ ಮಾತ್ರ ಮೂಡಿಹೋಯಿತು

"ಪ್ರೇಮದ ಮಾತೇನೋ ಹೇಳಲಾರೆನಮ್ಮಯ್ಯಾ. ನನ್ನ ಭಕ್ತಿಯಾದರೂ ಇನ್ನೂ ಅವರಿಗೆ ತಲುಪಿಲ್ಲ. ಮೊದಲು ಅವರು ನನಗೆ ತೋರಿಸಿದ್ದು ದಯಾ, ನಂತರ ನಾನು ಅರ್ಪಿಸಲೆಳಸಿದ್ದು ಭಕ್ತಿ."

ನಗುತ್ತ ಮಾಲತಿ ಅಂದಳು. "ಹಾಗಾದರ ನಾನು ಹೇಳಿದ್ದು ನಿಜವಲ್ಲವೇ? ನಿರಿಚ್ಛೆಯಿಂದ ಅವನು ದಯೆ ತೋರಿದ ಮತ್ತು ನಿರಿಚ್ಛೆಯಿಂದ ಪ್ರೇಮ ಪಡೆದ ಇಂಥವರಿಗಲ್ಲದೇ ಇನ್ನಾರಿಗೆ ದೇವರೆಂದು ಹೇಳುವುದು?"

ನಗೆಯಿಂದಲೇ ದುಲಾರಿ ಮಾತಾಡಿದಳು. "ನಿಮ್ಮ ಕೇಶವಣ್ಣನಿಗೆ 'ದೇವತಾ' ಎಂದು ಕರೆಯಲು ನಿನಗೇನಾದರೂ ಅನುಮಾನವುಂಟೇ ಮಾಲತೀ?'

ಸ್ವಲ್ಪವೂ ಇಲ್ಲ. ಆದರೆ ಒಂದು ಮಾತು ಕೇಳುತ್ತೇನೆ ದುಲಾರೀ. ನೀನು ಈ ದೇವರ ಭಕ್ತಿಯನ್ನಷ್ಟೇ ಮಾಡುವೆಯೋ, ಪ್ರೀತಿ ಸಹ ಮಾಡುವಿಯೋ?

ವಿಚಾರಗ್ರಸ್ತಳಾಗಿ ದುಲಾರಿ ಕೇಳಿದಳು. "ಎರಡರಲ್ಲಿ ಏನಾದರೂ ಭೇದವುಂಟೇ?

"ಹೆಚ್ಚೇನು ಇರದಿದ್ದರೂ ತುಸು ಉಂಟು. ನಾನು ಅದನ್ನೇ ಕೇಳುತ್ತಿದ್ದೇನೆ. ಭಕ್ತಿಯ ಜೊತೆಗೆ ಪ್ರೇಮ ಕೂಡಿದುದು ಯಾವಾಗ?"

ನವಿನಗೆ ನಕ್ಕಳು ದುಲಾರಿ. "ಕೂಡಿಕೊಂಡಿದೆ ಎಂದು ಹೇಗೆ ಕಂಡೆ?"

"ನಿನ್ನ ಮಾತಿನಿಂದ."

ಮಾಲತಿಯ ಮಾತುಗಳನ್ನಾಲಿಸಿ, ತುಸು ವೇಳೆಯಿಂದ ದುಲಾರಿಯ ಮನದಲ್ಲೊಂದು ಸಂಶಯ ಮೇಲೆದ್ದಿತ್ತು. ಅದು ಸರಿಯೋ, ಅಲ್ಲವೋ, ಇದನ್ನು ನಿರ್ಣಯಿಸಲು ದುಲಾರಿ ಉತ್ಸುಕಳಾದಳು. ಯೋಗ್ಯಾ–ಯೋಗ್ಯ ವಿಚಾರವನ್ನು ಸಹ ಮಾಡದೇ ಮಾಲತಿಗೆ ಪ್ರಶ್ನೆ ಹಾಕಿಬಿಟ್ಟಳು. "ಇರಲಿ ಮಾಲತೀ—, ನಿಮ್ಮ ಕೇಶವಣ್ಣನ ವಿವಾಹ ನಿನ್ನ ಸಂಗಡ ಆಗಿದ್ದರೆ, ಚನ್ನಾಗುತ್ತಿರಲಿಲ್ಲವೇ?"

ದುಲಾರಿಯ ಈ ಅದ್ಭುತ ಪ್ರಶ್ನೆದಿಂದ ಮಾಲತಿ ತುಸು ವ್ಯಾಕುಲಳಾದಳು. ಆದರೂ ಕೂಡಲೇ ಜಾಗ್ರತೆಯಿಂದ ಉತ್ತರಿಸಿದಳು. "ಛಿಃ ದುಲಾರಿ ಅಣ್ಣನ ಸಂಗಡ ತಂಗಿಯ ಲಗ್ನವಾಗುವದುಂಟೇ?" ಎಂದು ನುಡಿದು, ತುಸು ತಡೆದು ಗಂಭೀರತೆಯಿಂದ ಹೇಳಿದಳು. "ಈಗ ಅದನ್ನೆಲ್ಲ ತೆಗೆಯಬೇಡ."

ದುಲಾರಿಯ ಮನದಲ್ಲಿ ಯಾವ ಸಂದೇಹ ಜನಿಸಿತ್ತೋ, ಅದು ಮಾಲತಿಯ ಮಾತಿನಿಂದ ದೂರಾಯಿತು. ತಾನು ಮಾಲತಿಯ ಮಧುರ-ಹಾಸ್ಯ ಮಾಡಿದುದಕ್ಕೆ ಆಕೆ ತುಸು ನಾಚಿದಳು. ಬೇಕೆಂದು ಪ್ರಸಂಗ ಬದಲಿಸುವ ಉದ್ದೇಶದಿಂದ ಕೇಳಿದಳು. "ಕೃಪಾಬಾಬುಗಳನ್ನು ನೀನು ನೋಡಿದ್ದೀಯಾ! ಮಾಲತಿ?

"ಹಾಂ—"

"ನಾವು ಕೇಳಿದ್ದೇವೆ. ರೂಪ, ಲಾವಣ್ಯ, ಗುಣ, ಧನ ಎಲ್ಲದರಲ್ಲಿ ಶ್ರೇಷ್ಠರಂತೆ."

"ನಾನು ಹಾಗೆ ಕೇಳಿದ್ದೇನೆ."

"ಅಲ್ಲವೇ, ಮೊದಲು ದಿನವೇ ಅವರು ಮುಗ್ಧರಾದರಂತಲ್ಲ?"

"ನಾನು ಅದನ್ನೂ ಕೇಳಿದ್ದೇನೆ."

"ಇದೇನು ಮಾಲತೀ?"

ದುಲಾರಿಯ ಮೊಗದಲ್ಲಿ ಪೂರ್ಣ ದಿಷ್ಟಿ ಇಟ್ಟು ಕೇಳಿದಳು ಮಾಲತಿ "ಏನು?"

"ನಿನ್ನ ಮನಸ್ಸೆಲ್ಲಿರುವದೋ ಏನು ತಾಯಿ. ನನಗಂತೂ ತಿಳಿಯದಾಗಿದೆ."

ದುಲಾರಿಯ ಮಾತು ಕೇಳಿ ಮಾಲತಿ ನಕ್ಕಳಷ್ಟೇ. "ನನ್ನ ಮನಸ್ಸಿರುವ ಸ್ಥಳ ತಿಳಿಯಲಿಕ್ಕೆ ನೀನು ಇಷ್ಟು ತವಕಿಸುವೆಯಾ? ಒಳ್ಳೇದು ನಿನ್ನ ಅನುಮಾನವೇನು ದುಲಾರೀ, ಹೇಳು ನನ್ನ ಮನವೆಲ್ಲಿರುತ್ತದೆ?"

ನನ್ನ ಅನುಮಾನ ಕೂಡ ಅಲ್ಲಿಗೋಡದಮ್ಮ. ಒಮ್ಮೇನೋ ಹೀಗೆ ಎನ್ನುತ್ತೇನೆ. ಮರುಕ್ಷಣ ಹಾಗಲ್ಲವೆನ್ನುತ್ತೇನೆ."

"ಆದರ ನಿನ್ನ ಮನಸ್ಸಿನ ಸ್ಥಳ ಮಾತ್ರ ಸರಿಯಾಗಿ ನಾನು ಗುರುತಿಸಿದೆ. ಅದೆಲ್ಲಿರುವದೋ, ನನಗೆ ಗೊತ್ತು, ಹೇಳಲಾ, ಅದೆಲ್ಲಿರುವದು?"

ಕೆಳಗು ಮೇಲಾಗಿ ದುಲಾರಿ ಅಂದಳು. "ಹೇಳಲ್ಲ"

ಕೆಳಗೆ ಕೇಶವನ ದನಿಗೇಳಿ ಇವರ ಸಲ್ಲಾಪ ನಿಂತುಹೋಯಿತು. ಮೇಲೆ ಬಂದು ಕೇಶವ ಹೇಳಿದನು. ನಾಳೆ ಈ ಮನೆ ಬಿಟ್ಟು ನಮ್ಮ ಮನೆಗ ಹೋಗಬೇಕು. ಈ ವಾರ್ತೆಯಿಂದ ಮಾಲತಿ ಬಹು ಪ್ರಸನ್ನಳಾದಳು. ಬೇರೆ

ಇರುವದು ಆಕೆಗೆ ರುಚಿಸಿರಲಿಲ್ಲ ಆದರೆ ದುಲಾರಿ ಮಾತ್ರ ಇನ್ನು ಕೆಲವು ದಿನ ಇರಬೇಕಂದಳು

ಕೇಶವ ಹೇಳಿದನು "ಕೆಲವು ದಿನಗಳಷ್ಟೇ ಏಕೆ? ಇಚ್ಛೆ ಇರುವಷ್ಟು ದಿನ ಇರಬಹುದಾಗಿತ್ತು ಆದರ ನಮ್ಮ ತಂದೆಯ ಮಿತ್ರರೊಬ್ಬರ ಮಗಳ ಲಗ್ನವಿದೆ. ಬೀಗರನಿಳಿಸಲು ಅವರಿಗೆ ಮನೆ ಬೇಕು ನಾಳೆ ಮೂರನೇ ಪ್ರಹರದ ಸುಮಾರಕ್ಕೆ ಬೀಗರು ಬರುತ್ತಾರೆ ಕಾರಣ ಬೆಳಗಿನಲ್ಲಿಯೇ ಇದನ್ನು ತೆರವು ಮಾಡಬೇಕು. ಅಲ್ಲದೆ ಅತ್ತಿಗೆ ನಿಮ್ಮಿಬ್ಬರ ಸಲುವಾಗಿ ಯಾವಾಗಲೂ ಚಿಂತಿಸುತ್ತಾಳೆ"

ಮನೆ ಬಿಡಲು ನಿಜವಾಗಿ ದುಲಾರಿಗೇನೂ ಪ್ರತಿಬಂಧವಿರಲಿಲ್ಲ ಬೆಳಗಿನಲ್ಲಿ ಹೋಗುವದು ನಿಶ್ಚಯವಾಯಿತು

ಮಾಲತಿಯು ಕೇಶವನ ಉಪಹಾರ ಸಿದ್ಧತೆಗೆ ಎದ್ದು ನಡೆದಳು

ಕೇಶವನ ಜೊತಗೆ ಕೋಟಡಿಯಲ್ಲಿ ಓರ್ವಳೇ ಇರುವಾಗ ದುಲಾರಿಗೆ ಇಂದೇಕೋ ತುಸು ಸಂಕೋಚವೆನಿಸುವಂತಿದ್ದಿತು ತಂದೆಯ ಮೃತ್ಯುವಿನಿಂದಾದ ದುಃಖದ ಕಾರ್ಮೋಡದಿಂದ ಕೇಶವನ ಮೇಲಿದ್ದ ಆಕೆಯ ಪ್ರೀತಿ ಹಾರಿಹೋಗಿತ್ತು ಆದೇ ಈಗ ಮಾಲತಿಯೊಡನಾದ ಮಾತಿನಿಂದ ಶರತ್ಕಾಲೀನ ಚಂದ್ರಿಕೆಯಂತೆ ತಿಳಿಯಾಗಿತ್ತು ಆ ಚಕೋರಿ ತನ್ನ ಹೃದಯದಲ್ಲಿ ಪ್ರೀತಿ ಚಂದ್ರಿಕೆಯ ಮಧುರ ರಸ ಪಾನವನ್ನು ಇದೀಗ ಆರಂಭಿಸಿದ್ದಳು

ಕೇಶವ ನುಡಿದನು "ಅತ್ತಿಗೆ ನಿನ್ನ ಸಲುವಾಗಿ ಮಾಲತಿಯು ಕೊಟಡಿಯ ಒಳಿಯಲ್ಲಿರುವ ಮತ್ತೊಂದನ್ನು ಇವತ್ತು ಬೆಳಗಿನಲ್ಲಿ ಸಜ್ಜುಗೊಳಿಸಿದ್ದಾಳೆ ನಿನಗೆ ಓದುವದಕ್ಕಾಗಿ, ರಾಮಾಯಣ—ಮಹಾಭಾರತಗಳಿಂದಾರಂಭಿಸಿ, ಸೇವಾಸದನ ಮತ್ತು ಗೋದಾನಗಳವರೆಗೆ ಹತ್ತಿಪ್ಪತ್ತು ಪುಸ್ತಕ ಕೊಂಡು ತಂದಿದ್ದಾಳೆ ಅಲ್ಲಿ ನಿನಗೇನೂ ತೊಂದರೆಯಾಗುವದಿಲ್ಲ ದುಲಾರೀ"

ಈ ಪ್ರಸಂಗದಲ್ಲಿ ಕೇಶವನ ಮನೆಯಲ್ಲಿರುವದು ದುಲಾರಿಗೆ ಒಳಿತಾಗಿದ್ದರೂ, ಕೆಲವು ದಿನಗಳಿಂದ ಅದು ಸರಿ ಎನಿಸದಾಗಿತ್ತು ಇನ್ನೂ ಲಖನೌದಲ್ಲಿ ಬೇರೆ ಇರುವದು, ಅಥವಾ ತಿವಾರಿಪುರದಲ್ಲಿ ಒಬ್ಬಳೇ ಇರುವದು ಅಷ್ಟು ಪ್ರಶಸ್ತವಾಗಿರಲಿಲ್ಲ ಹೀಗಿದ್ದರೂ ಕೇಶವನ ಮನೆಗ ಇರ ಹೋಗಲು ದುಲಾರಿಗೆ ಯಾಕೆ ಸಂಕೋಚವೆನಿಸುತಿದ್ದಿತೋ ಯಾರು ಬಲ್ಲರು?

ದುಲಾರಿ ಹೇಳಿದಳು "ನಿಮ್ಮಲ್ಲಿ ನನಗೇನೂ ತೊಂದರೆ ಇಲ್ಲವೆಂದು ಬಲ್ಲೆ. ಆದರೆ ನಾನೇ ಎಲ್ಲರಿಗೆ ತ್ರಾಸದಾಯಕಳಾಗುತ್ತೇನೆ. ಅಲ್ಲದೇ ನಾನು ಕೆಲವು ದಿವಸ ತಿವಾರಿಪುರ " ದುಲಾರಿಯ ಬಾಯಿಂದ ಮುಂದೆ ಏನೂ ಹೊರಡಲಿಲ್ಲ.

ಕೇಶವನ ತುಟಿಗಳಲ್ಲಿ ಕಿರುನಗೆ ಕಾಣತೊಡಗಿತು "ಹಾಗಾದರೆ ನಾವು ಇನ್ನಷ್ಟು ತೊಂದರೆ ಹೊಂದುತ್ತೇವೆ ನಿನ್ನಿಂದ ನಮಗಾಗುವ ತೊಂದರೆಗಳನ್ನು ನಿನಗಿಂತ ನಾವು ತಿಳಿಯಲಾರೆವೇ? ಇದಿರಲಿ ನೀನು ಎಲ್ಲಿ ಹೆಚ್ಚು ತೊಂದರೆ ಪಡುವಿ? ಒಬ್ಬಳೇ ತಿವಾರಿಪುರದಲ್ಲಿಯೋ? ಅಥವಾ ಅತ್ತಿಗೆ ಮಾಲತಿಯರ ಜೊತೆಗೆ ನಮ್ಮ ಮನೆಯಲ್ಲಿರುವದಾದರೋ?"

ಈ ಸ್ಪಷ್ಟೋಕ್ತಿಗೆ ದುಲಾರಿಯಿಂದ ಉತ್ತರಿಸುವದಾಗಲಿಲ್ಲ ಆಕೆ ಸುಮ್ಮನಾದಳು ಆಕೆಯ ಸೂಕ್ಷ್ಮ ಆತ್ಮಮರ್ಯಾದಾಭಾವ–ಕೇಶವನ ಸರಲ—ಸಬಲ ಆತ್ಮೀಯತೆಯ ಕವಚವನ್ನು ಭೇದಿಸಲು ದಾರಿಗಾಣಲಿಲ್ಲ!

ಆಕೆಯ ಮನಸ್ಥಿತಿ ತಿಳಿದು ಕೇಶವ ನುಡಿದನು "ಕಕ್ಕ ನನಗೆ ಕೊಟ್ಟ ಅಧಿಕಾರವನ್ನು ನೀನು ಮರೆತುಬಿಟ್ಟೆಯಾ? ದುಲಾರೀ ಈ ವೇಳೆಯಲ್ಲಿ ವಿಚಾರಿಸಿದರೆ ನಿನ್ನ ಮೇಲೆ ಎಲ್ಲರಿಗಿಂತ ಹೆಚ್ಚು ನನ್ನ ಅಧಿಕಾರವಿದೆ ನಾನೇನಾದರೂ ತೊಂದರೆ ಕೊಟ್ಟರ ಮಾತ್ರ ನೀನು ಆ ನನ್ನ ಮರ್ಯಾದೆ ಕಾಯುವದಿಲ್ಲವೆಂಬುದನ್ನು ನಾನು ತಿಳಿದುಕೊಂಡಿದ್ದೇನೆ ಸರ್ವದಾ ಚಿಂತೆ ಬಿಟ್ಟು ನೀನು ನನ್ನ ಮೇಲೆ ಎಲ್ಲಾ ಭಾರ ಹಾಕು ನಾನು ಮಾಡುವ ವ್ಯವಸ್ಥೆಯಿಂದ ನೀನು ಗೌರವಶಾಲಿಯಾಗಿ ಬಾಳುವಿ"

ನಂತರ ದುಲಾರಿಯ ಮನದಲ್ಲಿ ಸಂಕೋಚವೇನೂ ಉಳಿಯದೇ ಕೇಶವನ ಮನೆಗೆ ಹೋಗಲು ಆಕೆ ಒಪ್ಪಿದಳು ಮತ್ತು ಬೇರೆ ಇರುವ ಮಾತಾಡಿ ಕೇಶವ ಮೊದಲಾದವರನ್ನು ದೂರವೆಂಬ ಭಾವ ವ್ಯಕ್ತಪಡಿಸಿದುದಕ್ಕಾಗಿ ದುಃಖಿತಳಾಗಿ ಹೇಳಿದಳು "ನಾನು ನಿಮ್ಮ ವಿಷಯವಾಗಿ ಇನ್ನೇನೂ ಚಿಂತಿಸುವದಿಲ್ಲ ನೀವು ಹೇಳಿದಂತೆ ನಾನು ನಡೆಯುವವಳು ನಿಮ್ಮ ಮನೆಗೆ ಹೋಗುವಾ."

"ಬರಿ ನಮ್ಮ ಮನೆಯಷ್ಟೇ ಏಕೆ ದುಲಾರೀ, ಅದು ನಿನ್ನ ಮನೆಯೂ ಸರಿಯೇ"

ಹೀಗೆ ನುಡಿದು ಕೇಶವ ತೋರಿಸಿದ ತಮ್ಮ ಆಸನ್ನ-ಮಿಲನದ ಆಭಾಸ ನೆನೆದು ದುಲಾರಿ ನಾಚಿದಳು ಆಕೆ ಭಾವಿಸಿದುದೇನೆಂದರೆ— ಕೇಶವನು ತನ್ನ ಮನೆಯಲ್ಲಷ್ಟೇ ಅಲ್ಲ, ತನ್ನ ಹೃದಯದಲ್ಲಿ ಕೂಡ ಆಶ್ರಯ ಕೊಡಲು ಕರೆಯುತ್ತಾನೆ ತಾನೇ ಭಾವಿಸಿಕೊಂಡ ಈ ಮಾಧುರಿಯಿಂದ ದುಲಾರಿಯ ಹೃದಯ ರಸಮಯವಾಯಿತು. ಬಾಯಿಂದ ಮಾತ್ರ ಮಾತಾಡಲಿಲ್ಲ

ಮೌನವಾದ ದುಲಾರಿಯನ್ನು ನೋಡಿ ಕೇಶವ ಅಂದನು. "ಏನು ಇದರಲ್ಲಿ ನಿನಗೆ ಸಂದೇಹವೋ? "

"ಯಾವದರಲ್ಲಿ ? "

"ನಮ್ಮ ಮನೆ ನಿನ್ನದೇ ಎಂಬ ಎಂಬುವ ವಿಷಯದಲ್ಲಿ "

"ತುಸೂ ಕೂಡಾ ಇಲ್ಲ "

ಅದೇನು ನನ್ನ ಹೇಳಿಕೆಯಿಂದಷ್ಟೇ ಅಲ್ಲ, ನಾಳೆ ನೀನೇ ಸ್ವತಃ ನಮ್ಮ ಮನೆಗ ಬರುವಿ."

ಮಾಲತಿ ಉಪಹಾರ ತಂದಳು ಆಕೆಯ ಕೈಯಿಂದ ತಟ್ಟೆ ಸ್ವೀಕರಿಸಿ ಕೇಶವ ನುಡಿದನು "ಕೆಳಗೆ ರಾಜಮಿಸ್ತ್ರಿ ಬಂದಿದ್ದಾನೆ ನಾನು ಹೋಗಿ ಸುಣ್ಣ-ಬಣ್ಣ ಬಳಿಯಲು ಅವನಿಗೆ ಹೇಳುತ್ತೇನೆ ಆ ವರೆಗೆ ನೀವು ಸಾಮಾನು ಕಟ್ಟಿಡಿರಿ."

ತುಸು ವೇಳೆ ಏನೋ ವಿಚಾರಿಸುತ್ತಿದ್ದು ದುಲಾರಿ ಕೂಗಿದಳು "ಮಾಲತೀ "

"ಏನು? "

"ನಿಮ್ಮ ಕೇಶವಣ್ಣ ನಿಜವಾಗಿಯೂ ದೇವತಾ "

'ಮಾನವನಲ್ಲವೇ? "

"ಅಲ್ಲ "

'ಅಮಾನವ ? "

ಮಾಲತಿಯ ಮಾತಿಗೆ ಖಿನ್ನಳಾಗಿ ದುಲಾರಿ ನುಡಿದಳು ಛೀ ತಾಯೀ ಅವರ ಸಂಬಂಧವಾಗಿ ಇಂಥ ಮಾತು ಬಾಯಿಂದಾಡುವದೂ ಸಹ ಪಾಪ!"

ಮಾಲತಿ ಏನೂ ಮಾತಾಡಲಿಲ್ಲ. ಖರಿ ನಕ್ಕುಬಿಟ್ಟಳಷ್ಟೇ. ಯಾವ ಮಾತು ಹಗಲು ರಾತ್ರಿ ಆಕೆಯ ಹೃದಯದಲ್ಲಿ ನೆಲೆಸಿರುವದೋ, ಅದನ್ನೇನು,

ಒಂದು ಸಲ ಬಾಯಿಂದಾಡಿದರೆ ಪಾಪವೇ ? ಈ ಮಾತನ್ನು ಆಕೆ ತನ್ನ ಜಾಳಿಸ ಸುಖ ಸೌಭಾಗ್ಯವನ್ನೆಲ್ಲ ಸೂರೆಗೊಂಡು ಕಲಿತಿದ್ದಳು ಏನೆಂದರೆ ಕೇಶವನು ದೇವತಾ, ಎಂದು ಹೇಳಬಹುದು ಅವಮಾನವನೆಂದೂ ಆಡಬಹುದು ಬರಿ ಮಾನವನೆಂದು ಮಾತ್ರ ಕರಯುವಂತಿರಲಿಲ್ಲ ತನ್ನ ಜೀವನದಲ್ಲಿ ಇದಕ್ಕೂ ಹೆಚ್ಚು ದೃಢ-ನಿಷ್ಠುರ ಸತ್ಯ-ಅವಳಿಗೇನೂ ಗೊತ್ತಿರಲಿಲ್ಲ

## (೨೦)

ಫಾಲ್ಗುಣ ಮಾಸ ಆಗಲೇ ಎರಡು ಪ್ರಹರವಾಗಿದ್ದಿತು ಬಾಗಿಲಿನಲ್ಲಿ ನಾಗಸ್ವರ ಬಾರಿಸುತ್ತಿದ್ದಿತು ನಾಳೆಯೇ ಮಾಲತಿಯ ವಿವಾಹ ಮಾಲತಿ ತನ್ನ ಕೋಟೆಡಿಯಲ್ಲಿ ಕುಳಿತಿದ್ದಾಳೆ ಜೊತೆಗೆ ಈ ದುಲಾರಿ ಮತ್ತು ರಾಜರಾಣಿಯು ರಾಜರಾಣಿಯು ಒಂದು ರೇಶಿಮೆ ವಸ್ತ್ರದ ಮೇಲೆ ಮಾಲತಿಯಲ್ಲಿ ಜೊತೆ-ಜೊತೆಯಾಗಿ ಮಾಲತಿ ಮತ್ತು ಕೃಪಾಶಂಕರ ಹೆಸರುಗಳನ್ನು ಕಸೂತಿ ಹಾಕುತ್ತಿದ್ದಾಳೆ. ಅದು ಬೆಳಗಿನ ತಿಂಡಿ ತೀರ್ಥದ ಸಮಯದಲ್ಲಿ ವರನಿಗೆ ಒಂದು ಕಾಣಿಕೆಯನ್ನು ಕೊಡಲಿಕ್ಕೆ ದುಲಾರಿ ಒಂದು ಜಮಖಾನೆಯ ಮೇಲೆ ಕುಳಿತು ರಾಜರಾಣಿಯ ಕೈಗಾರಿಕೆ ನೋಡತೊಡಗಿದ್ದಾಳೆ ಮಾಲತಿ ಮುಖ ತಿರುಗಿಸಿ, ಈ ಎದೆ ಸುಡುವ ನೋಟದಿಂದ ತನ್ನ ಕಣ್ಣುಗಳನ್ನು ಬೇರ ಕಡೆಗೆ ಹೊರಳಿಸುವದರಲ್ಲಿದ್ದಾಳೆ ಆದರೆ ನಗೆಗಾರ್ತಿಯಾದ ರಾಜರಾಣಿಯ ನಗೆ ಮಾತುಗಳಿಂದ ಕಿವಿಗಳನ್ನು ತಿರುಗಿಸುವ ಉಪಾಯ ಮಾತ್ರ ಆಕೆಗೆ ತಿಳಿಯದಾಗಿದ್ದಿತು ರಾಜರಾಣಿ ಮಾಲತಿಯ ಮೌನವು ಸ್ವಾಭಾವಿಕ ಲಜ್ಜೆಯೆಂದು ಭಾವಿಸಿ ನಗ ಮಾತುಗಳನ್ನು ಆಡೇ ಆಡುತ್ತಿದ್ದಳು ಮತ್ತು ನಡುನಡುವೆ ದುಲಾರಿಯುವೂ ಒಂದೆರಡು ಚಟುಪಟಿಕೆ ಹಾರುತ್ತಿದ್ದವು

ಎಷ್ಟು ವಾಗ್ಬಾಣಗಳ ಪೆಟ್ಟು ಹಾಕಿದರೂ ಮಾಲತಿ ಬಾಯಿ ಬಿಚ್ಚದಿರುವದನ್ನು ಕಂಡು ರಾಜರಾಣಿ ಅಭಿಮಾನದಿಂದಾಡಿದಳು “ಏಕೆ ಮಾತಾಡುವದಿಲ್ಲ, ಮಾಲತೀ? ನನ್ನ ಮೇಲೆ ಸಿಟ್ಟೇ?” ಈಗ ಮಾತಾಡದೇ ಮಾಲತಿಗೆ ಗತಿ ಇರಲಿಲ್ಲ.

ಆಕೆ ತನ್ನ ನೊಂದುಕೊಂಡು ಮೊಗವನ್ನು ಸಾಧ್ಯವಿದ್ದಷ್ಟು

ಪ್ರಸನ್ನಗೊಳಿಸಿ ನುಡಿದಳು "ಸಿಟ್ಟೇತಕ್ಕದು, ಅಕ್ಕಾ ರಾಜರಾಣಿ ! ನಿನಗೆಲ್ಲ ಆನಂದವಾಗಿದೆ ನಾನೇಕೆ ಸಿಟ್ಟಾಗಲಿ ? "

ರಾಜರಾಣಿ ಕಸೂತಿ ನಿಲ್ಲಿಸಿ ಅಂದಳು "ಆದರೆ ನಮ್ಮ ಆನಂದದಲ್ಲಿ ನೀನು ಭಾಗಿಯಾಗದಿದ್ದರೆ, ನಾವು ಸಿಟ್ಟಾಗುತ್ತೇವೆ ಇದೇನೆ, ನಾವು ನಿನ್ನ ಆನಂದಕ್ಕೆ ಭಾಗಿಯಲ್ಲವೇ ? '

ಮಾತು ಕೇಳಿ ಮಾಲತಿ ದುಃಖಿತಳಾದರೂ ನಕ್ಕಳು 'ನನ್ನ ಆನಂದದಲ್ಲಿ ನೀವು ಭಾಗಿಯಾಗಿದ್ದರೆ, ಹೀಗೆ ಮನಗುಂದುತಿರಲಿಲ್ಲ ನಿಮ್ಮ ನಗೆ ಹಾಸ್ಯದಲ್ಲಿ ನಾನು ಹೇಗೆ ಬೆರೆಯಲಿ ? ಇದು ನನ್ನದೇ ವಿವಾಹ "

"ಹಾಂ ಅಮ್ಮಯ್ಯಾ ವಿವಾಹ ನಿನ್ನದೇ ಪರವೂ ನಿನ್ನವನು ಆದರಲ್ಲಿ ನಮ್ಮ ಪಾಲು ಇಲ್ಲವೇ ? ನಿನ್ನದೇ ಲಗ್ನವೆಂದು ನಗೆ ಹಾಸ್ಯದಲ್ಲಿ ಬೆರೆಯುವದಲ್ಲವೆಂದು ಹೇಳೋಣವಾಯಿತು ಸರಿ ಮತ್ತು ಹಗಲು ರಾತ್ರಿ ತಲೆ ತಗ್ಗಿಸಿ ಕೃಪಾಬಾಬುವಿನ ಧ್ಯಾನ ಮಾಡಲು ಹೇಳಿದ್ದಾರೋ ? "

ರಾಜರಾಣಿ ಎಷ್ಟೋ ಇಂಥ ಮಾತಾಡಿದರೂ ಮಾಲತಿ ದುಃಖಿಸಲಿಲ್ಲ ಬರಿ ಒಣ ನಗೆಯೊಂದನ್ನು ಮಾತ್ರ ಆಕೆ ಆಗಾಗ್ಗೆ ತೋರುತಿದ್ದಾಳಷ್ಟೇ "ಲಗ್ನವಾದಮೇಲೇನೂ ಧ್ಯಾನಮಾಡುವದಿಲ್ಲವೆಂದು, ಈಗಲೇ ಮಾಡಿ ಮುಗಿಸುತ್ತೇನೆ "

ರಾಜರಾಣಿ ಅಂದಳು "ಇನ್ನು ಮೇಲೆ ನೀನು ಹೆಚ್ಚು ಧ್ಯಾನ ಮಾಡುವ ಅವಶ್ಯವೇನೂ ಇಲ್ಲ ವರ ನಿನಗೆ ಸಿಕ್ಕುಹೋಗಿದೆ ಜಗತ್ತಿನಲ್ಲಿ ಧ್ಯಾನಮಾಡಿದ ಮೇಲೆ ವರ ಸಿಗುವದು ವರ ಸಿಕ್ಕ ಮೇಲೆ ಧ್ಯಾನಿಸುವದಿಲ್ಲ "

ಮಾಲತಿ ಹುಚ್ಚು ನಗೆ ನಗುತ್ತ ಹೇಳಿದಳು "ನಾನೂ ವರ ಸಿಕ ಮೇಲೆ ಧ್ಯಾನ ಮಾಡುವದಿಲ್ಲ ಇನ್ನೂ ಆ ವರ ಸಿಕ್ಕಿಲ್ಲ."

ದುಲಾರಿ ಸವಿಯಾಡಿದಳು "ನಾಳೆ ಹೊಂದುವಿ "

ರಾಜರಾಣಿ ಪುನಃ ಕಸೂತಿ ಹಾಕುತ್ತ ನುಡಿದಳು "ಏನು ತವಕಿಸುತ್ತೀಯ ? "

ಒಣ ನಗೆಯಿಂದ ಮಾಲತಿ ಮಾತಾಡಿದಳು "ಬಹಳವಮ್ಮಾ "

ದುಲಾರಿ ನುಡಿದಳು "ನೀನು ಒಳ್ಳೇ ಮಾತುಗಾರ್ತಿ ಈಗ ಸುಮ್ಮನೇಕೆ ?"

"ನಿಮ್ಮೆಲ್ಲರ ಆಸಂಪದಲ್ಲಿ ಜೇರಯದೇ ನನಗೆ ಬಿಡುಗಡೆ ಇರಲಿಲ್ಲ"

ಕಳೆ ಏನೋ ಒಳ್ಳೇ ಏರಿತ್ತು. ಇದರಿಂದ ರಾಜರಾಣಿ ತನ್ನಲ್ಲಿಯೇ ಪ್ರಸನ್ನಳಾಗಿದ್ದಳು. ಆದರೆ ಎಲ್ಲಾ ಪ್ರಯೋಗ ಮಾಲತಿಯ ಮೇಲೆ ಸಾಗಿದ್ದವು. ಇದರಿಂದೇನೂ ಹದಗೆಡಬಾರದು ಎಂದು ದುಲಾರಿಯು ಸಮಾಚಾರಕ್ಕಾರಂಭಿಸಿದಳು. "ನೀನು ವರ ಹೊಂದಿಬಿಟ್ಟಿರುವೆ ಈಕೆ ಇನ್ನೂ ಧ್ಯಾನದಲ್ಲಿಯೇ ಇದ್ದಾಳೆ–ದುಲಾರೀ."

ರಾಜರಾಣಿಯ ಮಾತಿನಿಂದ ದುಲಾರಿಯ ಮೊಗ ಕೆಂಪಾಯಿತು. ನಗುತ್ತ ಅಂದಳು. 'ಧ್ಯಾನ ಮಾಡದೇ ವರ ಸಿಗುವದೇ ಅಕ್ಕಾ ರಾಜಾರಾಣಿ.'

"ಅದು ಹೇಗೆ ಸಿಕ್ಕೀತು?"

"ನೀನು ಧ್ಯಾನ ಮಾಡಿದ್ದೆಯಾ?"

"ಹಾಂ–ಅವಶ್ಯ ಮಾಡದೇ ವರ ಹೊಂದಿದ್ದು ಹೇಗೆ?"

ರಾಜರಾಣಿಯ ಮಾತು ಕೇಳಿ ದುಲಾರಿ ನಗಲಾರಂಭಿಸಿದಳು

ರಾಜರಾಣಿ ನಗುತ್ತ ಹೇಳಿದಳು "ಒಂದು ವರವನ್ನೇನೋ ಹೊಂದಬೇಕು. ತಿರುಗಿ ಮುಂದೆ ಅದನ್ನು ಹಾದಿಗೆ ತರಬೇಕಾದರೆ ಎಷ್ಟು ವೇಳೆ ಹಿಡಿಯುವದು? ಬಲ್ಲೆಯಾ? ನೀನು ಬೇದರ ಬೇಡಮ್ಮಾ ಮಾಲತೀ ಕೃಪಾ ಒಳ್ಳೇ ಸರಳ ವರ ಮುಂದೆ ಏನಾದರೂ ತುಸು ಇದ್ದರೆ ನನಗೆ ಹೇಳು. ನಾನು ಮಂತ್ರ ಕಲಿಸುತ್ತೇನೆ ಎರಡು ದಿನಗಳಲ್ಲಿಯೇ ಸರಲವಾಗಿ ಹೋಗುತ್ತಾನೆ '

ನಗುತ್ತಲೇ ದುಲಾರಿ ಆಡಿದಳು "ಈ ವಿದ್ಯೆಯನ್ನು ನೀನು ಬಲ್ಲೆಯಾ ಅಕ್ಕಾ! ಮಾಟ–ಮರಡಿ ತಿಳಿಯುವೆಯಾ? ವಿರುದ್ಧವಾದವರನ್ನು ಹೇಗೆ ದಾರಿಗೆ ತರುತ್ತಾರೆ? ತುಸು ಹೇಳು ಕೇಳುವಾ"

ದುಲಾರಿಯನ್ನು ನೋಡಿ ರಾಜರಾಣಿ ನುಡಿದಳು "ತಿಳಿಯಿತು ನೀನು ಮೊದಲೇ ಕಲಿತು ಇಡಬೇಕೆನ್ನುವಿಯಾ? ಹುಂ—ಚಿಕ್ಕಣ್ಣ ತುಸು ವಕ್ರ, ಅವನನ್ನು ತುಸು ಸರಲ ಮಾಡುವ ಅವಶ್ಯಕತೆ ಬಿದ್ದೀತು ಕೇಳು ಮನಸ್ಸುಗೊಟ್ಟು ಡೊಂಕು ದೊಣ್ಣೆ–ಡೊಂಕು ಬಡಿಗೆ–ಸರಲ ಮಾಡುವ ಉಪಾಯ ತಿಳಿದುಕೊಳ್ಳುವೆಯಾ? ಎಲ್ಲಿ ಡೊಂಕಾಗಿರುವದೋ, ಅದರ ವಿರುದ್ಧ ಒದಿಗೆ ಜೋರಾಗಿ ಮಣಿಸಬೇಕಾಗುತ್ತದೆ. ಡೊಂಕು ವರವನ್ನು ಸರಲ ಮಾಡಲಿಕ್ಕೆ

ಇದೇ ನಿಜವು ಅವನೆಲ್ಲಿ ಡೊಂಕುತನ ಮಾಡುವನೋ, ಅದರ ವಿರುದ್ಧ ದಿಶೆಗೆ ನೀವು ಇನ್ನೂ ಡೊಂಕಾದರೆ ತೀರಿತು ಅವನು ನಕ್ಕ, ನೀವು ಅಳುವುದು ಅವನು ಮೋರೆ ಬಿಗಿದುಕೊಂಡಿದ್ದ, ನೀವು ನಗಲಾರಂಭಿಸಿರಿ ಅವನು ಮಾತಾಡದಿದ್ದ, ನೀವು ಕಂಡವರ ಮುಂದೆಲ್ಲಾ ಬೊಗಳಿರಿ ಒಂದು ವೇಳೆ ಗೆಳೆಯರ ಮನೆಯಲ್ಲಿ ಹೋಗಿ ಕುಳಿತ, ನೀವು ನೆಟ್ಟಗೆ ತವರು ಮನೆಗೆ ಹೋಗಿ ಕೂತುಬಿಡಿರಿ ಕೆಲವು ದಿವಸ ಹೀಗೆ ಮಾಡಿ ನೋಡಿರಿ. ಡೊಂಕು ವರ ಒಳ್ಳೇ ಸರಲನಾಗಿ ಹೋಗುತ್ತಾನೆ."

ರಾಜರಾಣಿಯ ಮಾತು ಕೇಳಿ ದುಲಾರಿ ಬಿದ್ದು ಬಿದ್ದು ನಕ್ಕಳು

ಮಾಲತಿ ಕೇಳಿದಳು "ಅಕ್ಕಾ ರಾಜರಾಣೀ ಈ ವಿದ್ಯೆಯನ್ನು ನೀನು ಪೆಟ್ಟು ತಿಂದು ಕಲಿತಿದ್ದೀಯಾ? ಅಥವಾ ಪುಸ್ತಕ ಓದಿಯೋ?"

ಇವರ ಉತ್ತರ ಕೊಡುವ ಮೊದಲೇ ರಾಜರಾಣಿಯನ್ನು ಹೊರಗಿನಿಂದ ರಾಮುಕಲಿ ಕೂಗಿದಳು. ಆಕೆ ಹೊರಗೆ ಹೋಗಬೇಕಾಯಿತು.

ರಾಜರಾಣಿ ಹೋದ ಮೇಲೆ ಮಾಲತಿ ಅಂದಳು. "ದುಲಾರೀ"

"ಏನಮ್ಮಾ?"

"ನಿನ್ನ ವಿವಾಹ ಎಂದು?"

ನಾಚಿಕೆಯಿಂದ ದುಲಾರಿ ಹೇಳಿದಳು. "ಅದನ್ನು ನಾನೇನು ಹೇಳಲಿ?"

ಕೇಶವಣ್ಣ ಏನೂ ಹೇಳಿಲ್ಲವೇ?

ನಗುತ್ತ ತಡೆತಡೆದು ದುಲಾರಿ ಅಂದಳು. "ಏನೂ ಇಲ್ಲ"

"ಯಾವಾಗಲೂ"

"ಹೇಳಿದ್ದರು ನಿನ್ನ ಲಗ್ನವಾದ ಮೇಲೆ, ಒಂದು ಸಾರೆ ತಿವಾರಿಪುರಕ್ಕೆ ಹೋಗಬೇಕು"

"ಅಲ್ಲಿ ನಿನ್ನ ಲಗ್ನವೇನು?"

"ಅಲ್ಲ. ಅಲ್ಲಿ ತುಸು ವ್ಯವಸ್ಥೆ ಮಾಡಿ ತಿರುಗಿ ಬರಬೇಕು"

"ಹಾಗಾದರೆ ಇಲ್ಲಿ ಬಂದ ಮೇಲೆ ನಿನ್ನೊಡನೆ ವಿವಾಹವಷ್ಟೇ?"

"ಬಹುಶಃ ಹಾಗೇ."

"ದುಲಾರೀ!"

"ಏನು?"

"ತುಸು ಪಂಖಾ ಉಚ್ಚು"

"ಇಂಥ ಚಳಿಯಲ್ಲಿ ಆಮೇತಕ್ಕೆ?"

'ನನ್ನ ಮೈಯ್ಯಲ್ಲಿ ಸರಿಯಾಗಿಲ್ಲ. ಪಂಖಾ ಉಚ್ಚು ನನಗೆ ಬಹಳ ಸೆಕೆ.'

ಬೇಗನೆ ಪಂಖಾ ಉಚ್ಚಿ ದುಲಾರಿ ಕೇಳಿದಳು "ಅತ್ತಿಗೆಯನ್ನು ಕರೆಯಲಾ?"

ಬಹಳ ಕಷ್ಟದಿಂದ ಒಂದು ಒಣ ನಗೆ ನಗುತ್ತ ಬಣ್ಣ ಗುಂದಿದ ಮೊಗದಿಂದ ಮಾಲತಿ ಮಾತಾಡಿದಳು "ಬೇಡ, ಬೇಡ, ಯಾರನ್ನೂ ಕರೆಯಲವಶ್ಯವಿಲ್ಲ ಯಾವಾಗಾದರೊಮ್ಮೆ ನನಗೆ ಹೀಗೆ ಆಗುವದುಂಟು."

ಪಂಖಾದ ಗಾಳಿಯಿಂದ ರಾಜರಾಣಿಯ ರೇಸಿಮೇ ವಸ್ತ್ರ ಹಾರಿ ಮೇಜಿನ ಮೇಲೆ ಬಿಚ್ಚಿ ಬಿದ್ದುಕೊಂಡಿತು. ಸಹಸಾ ಅದರ ಮೇಲೆ ಮಾಲತಿಯ ದೃಷ್ಟಿ ಹೋಯಿತು ಕೆಂಪು ರೇಶಿಮೆಯಿಂದ ಅದರ ಮೇಲೆ ಕಸೂತಿ ಹಾಕಿದೆ ತನ್ನ ಮತ್ತು ಕೃಪಾಶಂಕರನ ಹೆಸರುಗಳನ್ನು ಆಕೆ ತಿಳಿದಳು ಈ ಅಕ್ಷರಗಳು ಕೆಂಪು ರೇಶಿಮೆಯಿಂದ ಬರೆದವುಗಳಲ್ಲ ತನ್ನ ಹೃದಯದ ರಕ್ತದಿಂದ ಬರೆದವುಗಳು—ಭಯದಿಂದ ಕಣ್ಮುಚ್ಚಿಕೊಂಡಳು

## (೨೧)

ಅದೇ ದಿನ ಸಾಯಂಕಾಲದಲ್ಲಿ ಮಾಲತಿ ತನ್ನ ಕೊಟಡಿಯಲ್ಲಿ ವಿಷಣ್ಣಳಾಗಿ ಕುಳಿತಿದ್ದಾಳೆ. ಆಗ ಬಾಗಿಲಕಡೆಯಿಂದ ದನಿ ಕೇಳಬಂದಿತು "ಮಾಲತೀ ಇದ್ದೀಯಾ?" ಕೇಶವನ ದನಿ ಗುರುತಿಸಿದ ಮಾಲತಿಗೆ ಮಾತಾಡಬಾರದೆನ್ನಿಸಿತು ಬಾಗಿಲು ಹಾಕಬೇಕೆಂದಳು ಆದರೆ ಹಾಗೇನೂ ಮಾಡಲಿಲ್ಲ ಕುಳಿತಲ್ಲಿಂದಲೇ ಹೇಳಿದಳು. "ಹುಂ" ಒಳಗೆ ಬರಲು ಮಾತ್ರ ಹೇಳಲಿಲ್ಲ ಬರೀ ಹಾಸಿಗೆಯಿಂದ ಇಳಿದಳಷ್ಟೇ

ಬಾಗಿಲು ತೆರೆದು ಕೇಶವ ಒಳಗೆ ಬಂದು ಮಾಲತಿಯ ಮುಂದೆ ನಿಂತುಕೊಂಡನು. ಮಾಲತಿಯ ಮೊಗ ನೋಡಿ ಆಶ್ಚರ್ಯಚಕಿತನಾದನು

"ಮಾಲತೀ, ನಿನ್ನ ಪ್ರಕೃತಿ ಸರಿಯಾಗಿಲ್ಲವೇ?"

ಇದಕ್ಕೇನೂ ಉತ್ತರ ಕೊಡದೇ ಮಾಲತಿ ಕೇಳಿದಳು ಏನು ಕೆಲಸ ಕೇಶವಣ್ಣಾ?"

ಕೇಶವನೂ ಪ್ರಕೃತಿಯ ಬಗ್ಗೆ ಪ್ರಶ್ನೆ ಕೇಳದೇ ನುಡಿದನು "ಇದನ್ನು ನಾನು ನಿನಗೆ ಬಹುಮಾನ ಕೊಡುತ್ತೇನೆ ಕೊರಳಿಗೆ ಸರಿಯಾಗುವದೋ ಹೇಗೆ? ನೋಡುವಾ ಎಂದು ಬಾದಿದ್ದೆ" ಎಂದು ಹೇಳಿ ಮಖಮಲಿನ ಡಬ್ಬಿ ಯೊಳಗಿಂದ ಒಂದು ಬಹು ಬೆಲೆಯ ಮುತ್ತಿನ ಮಾಲೆಯನ್ನು ಹೊರ ತೆಗೆದನು ದೀಪ ಪ್ರಕಾಶದಲ್ಲಿ ಅವೆಲ್ಲ ಥಳಗುಟ್ಟಿದವು

ಮನಸ್ಸಿನಲ್ಲಿ ಎದ್ದುಬಂದ ಕುತೂಹಲವನ್ನು ಮಾಲತಿ ಹೇಗೆ ಹೇಗೋ ಹತ್ತಿಕ್ಕಲಾರಂಭಿಸಿದಳು. ಆದರೆ ಕಂಠಿ ತೋರಿಸುವ ಈ ಸಾಧಾರಣ ಮಾತಿನಿಂದ ಆಕೆಯಲ್ಲಿ ವಿದ್ಯುತ್ಸಂಚಾರವಾಯಿತೇನೋ? ಬಾಡಿ ಬತ್ತಿದ ಆಕೆಯ ಮೊಗವು ಕಠೋರವಾಗಿ ಕೆಂಪೇರಿತು ಆ ಕಂಠಿಯಲ್ಲಿಯ ರತ್ನಗಳಂತೆ ಕಂಗಳಲ್ಲಿ ಕಾಂತಿ ತೋರಲಾರಂಭಿಸಿತು

"ಇನ್ನೂ ಎಷ್ಟು ರೀತಿಯಿಂದ ಅಪಮಾನಗೊಳಿಸಬೇಕೆಂದಿರುವೆ; ಕೇಶವಣ್ಣಾ? ಆಗಲಿ ಮುಗಿಸಿಕೋ ಯಾವ ತರಹದಿಂದ ದುಃಖ ಕೊಡಲು ಒರುವದೋ ಅದೆಲ್ಲ ಕೊಡು."

ಕ್ಷಣ ಮಾತ್ರದಲ್ಲಿ ಕೇಶವನ ಮೋರೆ ಕಪ್ಪಿಟ್ಟಿತು. ಏನು, ನಾನು ನಿನ್ನನ್ನು ಅಪಮಾನಗೊಳಿಸುವೆನೇ? ನಿನಗೆ ದುಃಖ ಕೊಡುವೆನೇ?"

ತುಸು ಮುಂದೆ ಬಂದು ಮಾಲತಿ ಉತ್ತೇಜಿತವಾದ ಗೊಗ್ಗರು ದನಿಯಿಂದ ನುಡಿದಳು. "ಹಾಂ–ನೀನೇ! ನೀನು ನನ್ನನ್ನು ಅಪಮಾನ ಗೊಳಿಸುತ್ತಿರುವೆ. ನೀನು ದುಃಖ ಕೊಡುತ್ತಿರುವೆ ಕೇಳಿತೇ? ಈಗ ಹೋಗು ಇನ್ನು ನಿಂತುಕೊಳ್ಳುವ ಶಕ್ತಿ ನನಗೆ ಉಳಿದಿಲ್ಲ" ಹಿಂತಿರುಗಿ ಒಂದು ಕಾಲನ್ನು ಹಾಸಿಗೆ ಮೇಲಿಟ್ಟು ಪುನಃ ಏಕೋ ತಿರುಗಿ, ಮಾತಾಡಿದಳು. ನಾನೆಂದರೆ ಒಂದು ಅರಿವೇ ಗೊಂಬಿ ಎಂದು ನೀನು ತಿಳಿದಿರುವೆಯಾ? ನೀನು ಇಟ್ಟಲ್ಲಿ ಇರುತ್ತೇನೆ ಹೇಗೆ ನೀನು ಸಿಂಗರಿಸುವೆಯೋ ಹಾಗೆಲ್ಲ ಸಜ್ಜಾಗು ತ್ತೇನೆ. ಶರೀರದಲ್ಲೇನೂ ರಕ್ತ ಮಾಂಸವಿಲ್ಲದ ನಾನೊಂದು ಆಟದ ಗೊಂಬೆಯೇ? ನೀನು ಬೇಕಾದಷ್ಟು ಆಘಾತ ಮಾಡುತ್ತಿದ್ದರೂ ನಾನು ಸುಮ್ಮನೇ ಇರಲಾ?"

ಕೇಶವನ ಮೊಗ ಇಳಿದುಹೋಯಿತು. ಒಂದು ಕ್ಷಣ ಅವನು ಸುಮ್ಮನೆ ನಿಂತನು. ಅತ್ಯಂತ–ಶಾಂತಳೂ, ಅಲ್ಪ ಭಾಷಿಯೂ ಆದ ಮಾಲತಿ ಪ್ರಸಂಗ

ವಿಶೇಷದಲ್ಲಿ ಇಂಥ ರೂಪವನ್ನು ತಾಳುವಳೆಂದು ಅವನು, ಕನಸಿನಲ್ಲಿಯೂ ಯೋಚಿಸಿರಲಿಲ್ಲ

ಹೊಳೆಯುವ ಮಾಲತಿಯ ಕಂಗಳನ್ನೇ ದಿಟ್ಟಿಸುತ್ತ ಕೇಶವ ನುಡಿದ "ಇವನ್ನೆಲ್ಲ ಯೋಚಿಸಿದ್ದೀಯಾ? ಮಾಲತೀ. ಕೇವಲ ಆಘಾತ, ಕೇವಲ ಅಪಮಾನವೋ? ಆರು ವರ್ಷಗಳ ಹಿಂದೆ ನೀನು ನಮ್ಮ ಮನೆಗೆ ಬಂದೆ, ಆಗಿನಿಂದ ನಿನಗೆ ದೊರೆತವುಗಳೆಂದರೇ ಇವೇ ಮತ್ತೇನೂ ಇಲ್ಲವೋ?"

ತನ್ನ ಕರುಣ-ಕತೆಯ ವರ್ಣನೆಯಿಂದ ಮಾಲತಿಯ ಮುಖ ಕಳೆಗುಂದಿತು ಆದರೂ ಆಕೆ ಕಠೋರತೆಯಿಂದ ಹೇಳಿದಳು "ತಿಳಿದಿದ್ದೇನೆ. ತಿಳಿದಿದ್ದೇನೆ ನೀವು ಬಹಳ ದಯೆ ತೋರಿಸಿದ್ದೀರಿ ಈ ದೇಹದ ಸಲುವಾಗಿ ನಿಮ್ಮ ಖರ್ಚು ಬಹಳವಾಗಿದೆ ಈಗ ಅದರ ವ್ಯವಸ್ಥೆ ಕೂಡ ಆಗಿದೆಯಲ್ಲ ಸಿರಿವಂತರ ಸಂಗಡ ನನ್ನ ಲಗ್ನ ಮಾಡುತ್ತೀರಿ. ಚಕ್ರಬಡ್ಡಿ ಸಹಿತ ನಿಮ್ಮ ಋಣ ಮುಟ್ಟಿಸಿದೆನೆಂದರೆ ನಾನು ಮುಕ್ತಳಾಗುತ್ತೇನೆ"

ವ್ಯಾಕುಲನಾದ ಕೇಶವನ ಕಂಗಳು ಕ್ಷಣಮಾತ್ರ ನೀರು ತುಂಬಿದವು. ಆದರೂ ನಿಗ್ರಹಿಸಿಕೊಂಡನು "ಅದಂತೂ ತೀರುವದು, ಸರಿ ಬರಿರುಪಾಯಿಗಳದಷ್ಟೇ ಋಣವಲ್ಲ ಮಾಲತೀ ಪ್ರೀತಿ ಸಹ ಒಂದು ಬಗೆಯ ಋಣವೇ ಅದು ಈ ಧನಾದಿಗಳಿಂದ ತೀರುವದಿಲ್ಲವಲ್ಲ?"

ಧೃಢ ಸ್ವರದಿಂದ ಮಾಲತಿ ಆಡಿದಳು "ಹಾಂ-ಈ ರೀತಿಯಾಗಿ ಅದನ್ನು ತೀರಿಸುತ್ತೇನೆ. ಹೀಗೆ ನಿನ್ನ ದಾಸೀತ್ವವನ್ನು ಸ್ವೀಕಾರ ಮಾಡಿ ನಿನ್ನ ಹುಕುಮು, ನಿನ್ನ ಬಲಾತ್ಕಾರ, ಬಲುಮೆ, ಇವುಗಳನ್ನೆಲ್ಲ ಶಿರಸಾವಹಿಸಿ ಇಷ್ಟಾದರೂ ಉಳಿಯುವಂತಿದ್ದರೆ ಹೇಳಿಬಿಡು, ಇನ್ನೂ ಏನು ಮಾಡಬೇಕು?"

ಕೇಶವ ನಿರ್ವಿಣ್ಣನಾದನು. ಆದರೂ ತುಸು ಗಂಭೀರತೆಯಿಂದ ಹೇಳಿದನು. ಇನ್ನೂ ನಿನಗೆ ಏನಾದರೂ ಮಾತಾಡಬೇಕೆಂದಿದ್ದರೆ ಮಾತಾಡಿಬಿಡು. ಎಷ್ಟು ಕಠೋರ ಬೇಕೋ ಅಷ್ಟು. ಎಷ್ಟು ಸುಳ್ಳೋ ಅಷ್ಟು ನಿನಗೆ ಎನಿಸಿದಷ್ಟು ನಿಷ್ಠುರಳಾಗು"

ಸಹಸಾ ಕೇಶವ ಮಾಲತಿಯ ಮೊಗ ನೋಡಿದನು ಆಕೆಯ ಮೊಗದ ಮೇಲಿದ್ದ ರಕ್ತ ಹಿಂಡಿದಂತಾಗಿದ್ದಿತು. ಇದನ್ನು ಅವನು ನೋಡ ನೋಡುತಿರುವಾಗ ಮಾಲತಿ ಅವನ ಕಾಲ ಮೇಲೆ ಉರುಳಿ ಬಿದ್ದಳು. ಕೇಶವ ಬೇಗನೇ

ಬಾಗಿಲ ಕೊಂಡಿ ಹಾಕಿದನು. ಮತ್ತು ಮಾಲತಿಯನ್ನು ಮೆಲ್ಲನೆ ಎಬ್ಬಿಸಿ ಹಾಸಿಗೆ ಮೇಲೆ ಮಲಗಿಸಿದನು. ಗಾಳಿ ಬೀಸಿದನು, ಮೊಗದ ಮೇಲೆ ನೀರು ಚಿಮುಕಿಸತೊಡಗಿದನು

ಎರಡು ಮೂರು ಕ್ಷಣಗಳಲ್ಲಿ ಮಾಲತಿ ಎಚ್ಚತ್ತು ಹಾಸಿಗೆ ಮೇಲೆ ಎದ್ದು ಕುಳಿತಳು ಕೇಶವ ತುಸು ದೂರ ಸರಿದು ಕುಳಿತನು 'ಯಾರನ್ನಾದರೂ ಕರೆಯಲಾ? ಇನ್ನೂ ನಿನಗೆ ಅಶಕ್ತತೆ ಎನಿಸುವದೋ?'

ಮಾಲತಿ ತಲೆಯಲ್ಲಾಡಿಸಿ ಬೇಡವೆಂದು ತಿಳಿಸಿ ಬಾಗಿಲದತ್ತ ನೋಡಿ ಹೇಳಿದಳು "ಬಾಗಿಲು ತೆರೆ, ಕೇಶವಣ್ಣಾ"

ಬಾಗಿಲು ತೆರದು ಕೇಶವ ಮಾಲತಿಯ ಹಾಸಿಗೆ ಬಳಿಗೆ ಬಂದು ಸ್ನೇಹ ದಿಂದ ನುಡಿದನು "ಈಗ ನಾನು ಹೋಗುವೆ ಮಾಲತೀ ನೀನು ನಿನ್ನ ಮನಸ್ಸನ್ನು ಶಾಂತಗೊಳಿಸು, ನಾನು ಹೆಚ್ಚೇನು ಹೇಳಲಿ? ಭಗವಂತ ನಿನಗೆ ಶಾಂತಿ ಕೊಡಲಿ ಒಂದು ಗೊತ್ತಾಗದೇ ನನ್ನಿಂದೇನಾದರೂ ಅನ್ಯಾಯಗಳಾಗಿದ್ದರೆ, ಅವುಗಳನ್ನು ಕ್ಷಮಿಸಿಬಿಡಮ್ಮಾ!" ನಿಲ್ಲದೇ ಕೇಶವ ನಾವಕಾಶ ಹೊರಗೆ ಹೋದನು ಆಗ ಮಾಲತಿಯ ಹೃದಯದಲ್ಲಿ ಗ್ರೀಷ್ಮ ಋತುವಿನನಂತರದ ವರ್ಷಾಋತು ಬಂದಿತೇನೋ? ಧಾರಾಕಾರ ಕಣ್ಣೀರು ಸುರಿಸಿ ಹಾಸಿಗೆಯನ್ನೇ ತೋಯಿಸಿಬಿಟ್ಟಳು ಕೇಶವ ಹೋದ ಮೇಲೆ ಬಾಗಿಲು ಚಿಲುಕ ಹಾಕಿಬಿಟ್ಟಳು ಹಾಸಿಗೆಯಲ್ಲಿ ಉರುಳಿಕೊಂಡು ಎಷ್ಟೋ ವೇಳೆ ಅಳುತ್ತಿದ್ದಳು

## (೨೨)

ಆ ಕೊಟಡಿಯಿಂದ ಹೊರಬಿದ್ದ ಕೇಶವ ರಾಮಕಲಿಯನ್ನು ಹುಡುಕ ತೊಡಗಿದನು ರಾಮಕಲಿ ಆಗ ದೇವರ ಮನೆಯಲ್ಲಿ ಪ್ರಾರ್ಥನೆ ಮಾಡುತ್ತಿದ್ದಳು ಕೇಶವನು ಅಲ್ಲಿಗೇ ಹೋಗಿ ನಿಂತನು ಪ್ರಾರ್ಥನೆ ಮುಗಿದ ನಂತರ ರಾಮಕಲಿ ಇತ್ತ ಹೊರಳಿ ಕೇಳಿದಳು. "ಏನಾಗಿದೆ, ನಿಮಗೆ?"

"ಊಹುಂ–ಏನೂ ಇಲ್ಲ"

"ಹಾಗಾದರೆ ಮೊಗವೇಕೆ ಬಾಡಿದ್ದು?"

"ನನಗೇನು ಚಿಂತೆ ಕಡಮೆಯಾಗಿವೆ, ಅತ್ತಿಗೆ? ಲಗ್ನವೆಂದರೆ ಅದೇನು ಸಣ್ಣ ಮಾತೇ?"

ಈ ಉತ್ತರದಿಂದ ರಾಮುಕಲಿ ಪ್ರಸನ್ನಳಾದಳು ಆದರೆ ಆಕೆ ಮಾತಾಡುವ ಮೊದಲೇ ಕೇಶವ ಆರಂಭಿಸಿದನು "ಅತ್ತಿಗೆ"

ಕೇಶವನ ದನಿಗೇಳಿ ರಾಮುಕಲಿ ಚಿಂತಿತಳಾಗಿ ನುಡಿದಳು "ಹೇಳಿರಿ ಏನದು ?"

ಹಿಂದೆಳಸುತ್ತ ಕೇಶವ ನುಡಿದ "ನಿನ್ನ ಮಾತನ್ನು ಕೇಳಲಿಲ್ಲ ಈಗ ಕೆಲಸ ಯೋಗ್ಯವಾಗಲಿಲ್ಲ"

"ನನಗೆ ಏನೂ ತಿಳಿಯುದಾಗಿದೆ, ಏನದು ? ಸರಿಯಾಗಿ ಹೇಳಿ"

ತುಸು ವಿಚಾರಿಸಿ ಸಾವಕಾಶ ಕೇಶವ ಅಂದ "ಕೃಪಾಶಂಕರನ ಸಂಗಡ ವಿವಾಹವಾಗುವದರಿಂದ ಮಾಲತಿ ಸುಖಿಯಾಗುವದಿಲ್ಲ ಅತ್ತಿಗೇ ಏನು ಮಾಡಲಿ ! ಈ ವಿಷಯಕ್ಕೆ ವಿಚಾರ ಮಾಡಲು ಸಮಯವಿಲ್ಲವಷ್ಟೇ"

ರಾಮುಕಲಿಯೂ ಚಿಂತಿತಳಾದಳು ನಾಲ್ಕು ದಿನಗಳ ಮೊದಲು ಕೇಶವನು ಇದಕ್ಕೆ ವಿರುದ್ಧವಾಗಿ ಮಾತಾಡುತ್ತಿದ್ದನು ಈಗ ಅವನೇ ರಾಮುಕಲಿಯನ್ನು ಹುಡುಕಿ ಈ ಮಾತಾಡುತ್ತಾನೆ. ಇದರ ಮರ್ಮವನ್ನು ಹೇಳದಿದ್ದರೂ ರಾಮುಕಲಿ ಗುರುತಿಸಿದಳು ಸ್ವಲ್ಪ ವೇಳೆ ವಿಚಾರಗ್ರಸ್ತಳಾಗಿ ನೋಡಿದಳು, ಒಳಿತು, ಕೆಡುಕು, ಏನಾದರೂ ಆಗಲಿ, ಇನ್ನು ವಿಚಾರಕ್ಕೆ ಆಸ್ಪದವಿರಲೇ ಇಲ್ಲ ಲಗ್ನದ ಸುದ್ದಿ—ಎಲ್ಲರಿಗೂ ಈಗ ತಿಳಿದುಹೋಗಿದ್ದಿತು ಅದರಂತೆ ಸಿದ್ಧತೆಯೂ ಮುಗಿದು ಹೋಗಿತ್ತು ಹೀಗಿರುವಾಗ ಅದನ್ನು ತಿರುಗಿಸಿ ವಿರುದ್ಧವೇನಾದರೂ ನಡೆಸುವಷ್ಟು ಸಾಹಸ ರಾಮುಕಲಿಯಲ್ಲಿರಲಿಲ್ಲ. ಮತ್ತು ಹಾಗೆ ಏನಾದರೂ ಮಾಡುವದು ಆಕೆಗ ಉಚಿತವೂ ಎನಿಸಲಿಲ್ಲ ಇದಲ್ಲದೆ ಮತ್ತೊಂದು ಜೀವದ ಸುಖ—ದುಃಖಗಳು ಈ ವಿಷಯಕ್ಕೆ ಸಂಬಂಧ ಬೆಳೆಸಿಕೊಂಡಿದ್ದವು. ರಾಮುಕಲಿ ಅಷ್ಟು ವಿಚಾರ ಮಾಡದಿರಲಿಕ್ಕೆ ಇದೂ ಒಂದು ಕಾರಣ ದುಲಾರಿ ಕೇಶವನನ್ನು ಎಷ್ಟು ನಂಬಿಕೊಂಡಿದ್ದಾಳೆ ! ಎಂಬ ಮಾತು ರಾಮುಕಲಿಗೆ ಅರಿಯದ್ದಲ್ಲ ಒಂದು ಬಳ್ಳಿಯನ್ನು ಒಂದು ಗಿಡದಿಂದ ಬಿಡಿಸಿ ಮತ್ತೊಂದಕ್ಕೆ ಹಬ್ಬಿಸುವ ವ್ಯವಸ್ಥೆಯಾಗಿದೆ, ಪುನಃ ಅದನ್ನು ಮೊದಲಿನ ಗಿಡಕ್ಕೆ ಹಬ್ಬಿಸುವದೆಂದರೆ— ಆ ಮಧ್ಯದ ಅವಧಿಯಲ್ಲಿ ಮೊದಲಿನ ಗಿಡಕ್ಕೆ ಸುತ್ತಿಕೊಂಡು ಹಬ್ಬಲೆಳಸುತಿರುವ ಬಳ್ಳಿಯನ್ನು ಕಿತ್ತು ಬಿಸುಡಬೇಕಾಗುವದು, ಇದು ಅನುಚಿತವೆಂದು ರಾಮುಕಲಿ ಭಾವಿಸಿದಳು.

ಅಲ್ಲದೆ ರಾಮಕಲಿ–ಆರ್ಯ ಸತೀಮಣಿಯರ ಪ್ರವೃತ್ತಿಯನ್ನೂ ವಿಚಾರಿಸಿ ನೋಡಿಕೊಂಡಳು. ಇನ್ನೂ ನಾಲ್ಕು ದಿನಕ್ಕೆ ಮಾಲತಿ ತನ್ನ ಸ್ವಾಮಿಯ ಮನೆಗೆ ಹೋಗುತ್ತಾಳೆ, ವಿವಾಹದ ಅಭೇದ್ಯ ಬಂಧನದಲ್ಲಿ ಸಿಲುಕುತ್ತಾಳೆ. ತನ್ನ ಪತಿಯನ್ನು ಗುರುತಿಸಿ ಇದನ್ನೆಲ್ಲ ಮರೆಯುತ್ತಾಳೆ.

ಹೀಗೆಲ್ಲ ವಿಚಾರಿಸಿಕೊಂಡು ರಾಮಕಲಿ ಹೇಳಿದಳು. "ಇಲ್ಲ ಇನ್ನು ಯಾತಕ್ಕೂ ಸಮಯವಿಲ್ಲ. ಈಗ ಏನಾದರೂ ವಿರುಧ್ಧ ಮಾಡಲೆಳಸಿದರೆ ಕೆಲಸ ಕಟ್ಟು ಹೋದೀತು"

"ಮಾಲತಿ ಆದರಿಂದ ಸುಖಿಯಾಗದಿದ್ದರೂ–"

"ಎಂದೂ ಹಾಗೆ ಆಗುವದಿಲ್ಲ"

ಎಂದರೇನು ? ನಿನ್ನ ತರ್ಕವೊ ?"

"ಅಲ್ಲ ನನ್ನ ವಿಶ್ವಾಸ."

ಅಸ್ಯ ಮನಸ್ಕನಾಗಿ ಕೇಶವ ನುಡಿದ "ಅದೇನೋ ಸರಿ ಆದರೆ ಈಗ ಸಹ"

ಮಾತು ಇನ್ನು ಮುಗಿದಿರಲಿಲ್ಲ 'ಕೇಶವ ಎಲ್ಲಿದ್ದಾನೆ, ಎಲ ಅತ್ತಿಗೆಯೂ ಇಲ್ಲ' ಎನ್ನುತ್ತ ಕೃಷ್ಣಚಂದ್ರ ಪ್ರವೇಶಿಸಿದನು. ಕೇಶವನ ಬೆನ್ನಿಗೆ ಮೆಲ್ಲನ ಒಂದೇಟು ಹಾಕಿದನು, ಮತ್ತು ಅತ್ತಿಗೆಯನ್ನು ನಮಿಸಿದನು, ರಾಮಕಲಿ ಮನದಲ್ಲಿಯೇ ಆಶೀರ್ವದಿಸುತ್ತ ಮಾತಾಡಿದಳು "ವೇಳೆಗೆ ಬಂದೆ ಕೃಷ್ಣ, ನನಗೆನಿಸಿತ್ತು, ನೀನು ಮಾಲತಿ ಲಗ್ನಕ್ಕೆ ಬರುವದೇ ಇಲ್ಲ ಈಗ ಚನ್ನಾಯಿತು.

ನಗುತ್ತ ಕೃಷ್ಣಚಂದ್ರ ಹೇಳಿದ "ಹುಂ ಮಾಲತಿ ಲಗ್ನದ ಹೋಳಿಗ ತಪ್ಪಿಹೋಗುತ್ತಿತ್ತು ಕೇಶವನ ತಂತಿ ಬಂದುದೇ ತಡ–ಬಂದೇಬಿಟ್ಟೆ"

ಕೇಶವ ಅಂದ "ಅತ್ತಿಗೆ, ಕೃಷ್ಣನಿಗೆ ಏನಾದರೂ ತಿನ್ನಲಿಕ್ಕೆ ಕೊಡು ಬಹುಶಃ ಅವನು ಈದಿನ ಏನೂ ತಿಂದಂತೆ ಕಾಣುವದಿಲ್ಲ"

"ಈಗಲೇ ನಾನು ಹೊರಟೆ ಕೃಷ್ಣಾ ಕೈಕಾಲು–ಮೋರ ತೊಳೆದು ಕೊಂಡು ಬಾ."

ಕೃಷ್ಣಚಂದ್ರ ನುಡಿದ "ಅತ್ತಿಗೆ ಈಗ ತಿನ್ನುವ ಇಚ್ಛೆ ಏನೂ ಇಲ್ಲ ಇಲ್ಲಿಗೆ ಬರುವ ಮೊದಲೇ ನಾನು ಮನೆಗೆ ಹೋಗಿ ಸ್ನಾನ ಮಾಡಿ ಊಟ ತೀರಿಸಿಕೊಂಡು ಬಂದಿದ್ದೇನೆ ರಾತ್ರಿ ಬೇಕಾದರೆ ನಿಮ್ಮೊಡನೆಯೇ ಊಟ.

ಅತ್ತಿಗೆ, ಅಡಿಗೆ ಸಿದ್ಧವಾಗಿದೆಯನ್ನೋ? ಹೊಟ್ಟೆ ತುಂಬ ಊಟ ಕೊಡೆಯುವಾ ಒಳ್ಳೇನು ಸಕ್ಕಾನ್ನ ಯಾರ ಅಂಗಡಿಯಿಂದ ತರಿಸಿದ್ದೀರಿ?"

ನಗುತ್ತ ರಾಮಕಲಿ ಹೇಳಿದಳು "ತಿಂದು ಹೇಳಲ್ಲ ಯಾರ ಅಂಗಡಿಯುವೆಂಬುದನ್ನು"

ಈ ಪರೀಕ್ಷೆಯಲ್ಲಿ ನಾವೇನೂ ನಾಪಾಸು ಆಗುವದಿಲ್ಲ ಅತ್ತಿಗ ಲಖನೌದಲ್ಲಿ ಯಾವ ಅಂಗಡಿ ಅದು ? ನನಗರಿಯದ್ದು ?"

ಕೃಷ್ಣಚಂದ್ರನ ಮಾತಿಗೆ ರಾಮಕಲಿ ಮತ್ತು ಕೇಶವರು ನಕ್ಕರು ತುಸು ಮೊದಲು ಮಾಲತಿಯ ಸಂಬಂಧವಾದ ಮಾತುಗಳಿಂದ ಕವಿದ ಮೋಡ ಕೃಷ್ಣನ ವಿನೋದ ಪವನದಿಂದ ಹಾರಿಹೋಯಿತು ಮಾತು ಮಾತಿನಲ್ಲಿ ರಾಮಚರಣರ ಮೃತ್ಯು ಪ್ರಸಂಗದ ವಿಷಯ ಬಂದಿತು.

ರಾಮಕಲಿ ಕೇಳಿದಳು. "ದುಲಾರಿಯನ್ನು ಬೆಟ್ಟಿಯಾಗುತ್ತೀಯಾ?"

ದುಲಾರಿಯನ್ನು ನೋಡಲು ಕೃಷ್ಣಚಂದ್ರನಿಗೇನೋ ಆಶೆ ಆದರೆ ನಾಚಿಕೆಯೊಂದು, ಮುಂಬಯಿಯಿಂದ ತಿರುಗಿ ಬರುವಾಗ ಅವನು ದುಲಾರಿಯ ವಿಚಾರವನ್ನೇ ಮಾಡುತ್ತ ಬಂದಿದ್ದನು ಮತ್ತು ಅವನ ಯೋಚನೆ ಎಂದರೆ ಕೇಶವನು ಇಷ್ಟು ದಿನಗಳಲ್ಲಿ ದುಲಾರಿಯೊಡನೆ ತನ್ನ ವಿವಾಹದ ಮಾತು ಹೇಳಿಬಿಟ್ಟಿದ್ದಾನು ಎಂದು, ಹೀಗಾಗಿ ನಾಚಿಕೆ ಪ್ರಬಲವಾಗಿತ್ತು ಆದರ ರಾಮಕಲಿ ಹೇಳಿದ ಶೋಕ ಸಮಾಚಾರದಿಂದ ಅವನಿಗೆ ಸಂಧಿ ಸಿಕ್ಕಂತಾಯಿತು

"ಹಾಂ-ಆಕೆ ಎಲ್ಲಿದ್ದಾಳೆ"

"ನಡೆ, ನಿನಗೆ ತೋರಿಸುತ್ತೇನೆ" ರಾಮಕಲಿ ಹೇಳಿದಳು

"ಅಲ್ಲಿಂದ ತಿರುಗಿ ನನ್ನ ಕೊಟಡಿಗೆ ಬಾ ಕೃಷ್ಣ ನಾನು ಅಲ್ಲೇ ಇರುತ್ತೇನೆ"

ಕೃಷ್ಣಚಂದ್ರ ನುಡಿದ "ನೀನೂ ಬಾರಲ್ಲ"

"ಇಲ್ಲ ನಾನು ಹೊರಗಿರುತ್ತೇನೆ ಎಂದು ಹೇಳಿ ಕೇಶವ ಹೊರ ನಡೆದನು.

ಕೇಶವ ಬರದ ಕಾರಣವನ್ನು ರಾಮಕಲಿ–ಕೃಷ್ಣಚಂದ್ರ ಉಭಯತರೂ ತಿಳಿದರು. ಆದರೆ ಇಬ್ಬರ ರೀತಿಯೂ ಭಿನ್ನ.

## (೨೩)

ದುಲಾರಿ ತನ್ನ ಕೊಟಡಿಯಲ್ಲೇ ಇದ್ದಳು. 'ಕೃಷ್ಣಚಂದ್ರ ಬಂದಿದ್ದಾನೆ ದುಲಾರೀ" ಎನ್ನುತ್ತಾ ರಾಮಕಲಿ ಒಳಗೆ ಪ್ರವೇಶಿಸಿದಳು.

ದುಲಾರಿ ಕೃಷ್ಣಚಂದ್ರನಿಗೆ ನಮಸ್ಕರಿಸಿ ತನ್ನ ಕಳೆಗುಂದಿದ ಮೊಗ ಮೇಲಕೆತ್ತಿ ಮಾತಾಡಿದಳು. "ಕುಶಲವೇ! ನಿಮ್ಮ ತಂಗಿ ಗಂಡ ಈಗ ಸರಿಯಾಗಿರುವರಷ್ಟೇ?"

ದುಲಾರಿ ಇನ್ನೂ ತನ್ನ ವೇದನೆಯಿಂದ ಪೂರ ಮುಕ್ತಳಾಗಿರಲಿಲ್ಲ. ಇದನ್ನು ಆಕೆಯ ಕಳೆ ಇಲ್ಲದ ಮುಖ ನೋಡಿದ ಕೂಡಲೇ ಕೃಷ್ಣಚಂದ್ರ ತಿಳಿದನು. ಆವನ ಅಂತರಂಗದಲ್ಲಿ ಎಷ್ಟೋ ದಿನಗಳಿಂದ ಹುದುಗಿದ್ದ ಕಲುಷಿತ ಪ್ರೇಮವು-ತಾರುಣ್ಯದಿಂದ ತುಂಬಿ ಸಮವೇದನೆಯ ರೂಪದಲ್ಲಿ ಬದಲಿಸಿ ಹೋಯಿತು.

ದುಲಾರಿಯ ಪ್ರಶ್ನೆಗೆ ಸಂಕ್ಷೇಪವಾಗಿ ಉತ್ತರ ಕೊಟ್ಟು ಕೃಷ್ಣಚಂದ್ರ ಸುಮ್ಮನಾದನು. ಆವನ ಅಂತರಂಗದಲ್ಲಿ ರೂಪಗೊಂಡ ಸಮವೇದನಾ ಭಾವವನ್ನು ಮೊಗದಲ್ಲೇನೂ ತೋರಲು ಕೃಷ್ಣಚಂದ್ರನಿಗೆ ಶಕ್ಯವಾಗಲಿಲ್ಲ. ಆದರೆ ಆವನ ಮೂಕ ಸಹಾನುಭೂತಿಯನ್ನು ದುಲಾರಿ ಅರ್ಥ ಮಾಡಿಕೊಂಡಳು. ಕಾರ್ಮೋಡಕ್ಕೆ ತಂಪು ಗಾಳಿ ತಾಕಿದರೆ ಹೇಗೆ ಮಳೆ ಬರತೊಡಗುವದೋ, ಹಾಗೆ ಆಕೆಯ ಕಣ್ಣುಗಳಿಂದ ನೀರು ಸುರಿಯಲಾರಂಭಿಸಿದವು. ಆದರೆ ಮನೆಯಲ್ಲಿ ಶುಭ ದಿನ ಕಣ್ಣೀರಗರೆಯುವದು ಒಳಿತಲ್ಲವೆಂದು ನೆನೆಸಿದ ಕೂಡಲೇ ಕಣ್ಣೊರಸಿಕೊಂಡುಬಿಟ್ಟಳು.

ರಾಮಕಲಿ ಆದ್ರ ಸ್ವರದಿಂದ ನುಡಿದಳು. 'ಈ ಹುಡುಗಿಗೆ ಕೃಷ್ಣಾ, ಇಷ್ಟು ವಯಸ್ಸಿನಲ್ಲಿ ಎಷ್ಟಾದರೂ ಆಪತ್ತು ಬರಬೇಕು? ಇನ್ನಾದರೂ ದೇವರು ದಯ ಮಾಡಬೇಕು. ದುಃಖವನ್ನು ಮಾತ್ರ ಇವಳು ಕಾಣಬಾರದು.

ರಾಮಕಲಿಯ ಮಾತು ಕೇಳಿ, ದುಲಾರಿಯ ದುಃಖಿತ ಹೃದಯವನ್ನು ಇನ್ನಷ್ಟು ಪ್ರಸನ್ನಗೊಳಿಸಬೇಕೆಂದು ಕೃಷ್ಣಚಂದ್ರ ಮಾತಾಡತೊಡಗಿದನು. "ಇದೇ ಸರಿಯಾಗಿ ತಿಳಿಯುವದಿಲ್ಲ ಅತ್ತಿಗೆ. ಒಂದು ವೇಳೆ ದೇವರಿದ್ದರೆ, ಇಂಥ ಅನ್ಯಾಯ ಮಾಡುವದರಲ್ಲಿ ಅವನದೇನು ಉದ್ದೇಶ? ಪವಿತ್ರರಾದವರನ್ನು

ದುಃಖದ ಭಟ್ಟಿಯಲ್ಲಿ ಸುಟ್ಟು, ಪಾಪಿಗಳನ್ನು ಸುಖದ ಮಡಿಲಲ್ಲಿ ಮಲಗಿಸಿ ಅವನು ಹೊಂದುವದೇನೋ ?"

ರಾಮಕಲಿ ಅಂದಳು "ಇಂಥ ದೊಡ್ಡ ದೊಡ್ಡ ಮಾತುಗಳ ಚರ್ಚೆಯನ್ನು ನಾವು ಹೆಂಗಸರೇನು ಮಾಡಬಲ್ಲೆವು, ಕೃಷ್ಣಾ ಆದರ ನನಗೆನಿಸುವದೇನಂದರೆ— ನಾವು ಮನೆ ಸ್ವಚ್ಛ ಮಾಡಲು ಮೊದಲು ಪೊರಿಗೆ ತೆಗದುಕೊಂಡು ಉಡುಗುತ್ತೇನೆ ಆದರೂ ತುಸು ಕಸ ಉಳಿದೇ ಉಳಿಯುತ್ತದೆ ಅದು ಅಣ್ಣಿಗೆ ಕಾಣಲಿಕ್ಕಿಲ್ಲ ಅದನ್ನು ನೀರಿನಿಂದ ತೊಳೆದು ಕಳೆಯುತ್ತೇವೆ ಅದರಂತೆ ಯಾರ ಕಸ, ಕಣ್ಣಿಗೆ ಸಾಧಾರಣ ರೂಪದಿಂದ ಕಾಣಿಸುವದಿಲ್ಲವೋ, ಕಣ್ಣೀರು ಅದನ್ನು ತೊಳದು ಹಾಕುತ್ತದ

ರಾಮಕಲಿಯ ಮಾತು ಕೇಳಿ ಕೃಷ್ಣಚಂದ್ರ ತುಸು ನಕ್ಕನು 'ಅತ್ತಿಗೆ ನಿನ್ನ ಮನ ಹೇಗೋ ಹಾಗೇ ಮಾತು ನೀನಾಡಿದ್ದು ವಿಶ್ವಾಸದ ಮಾತು ತರ್ಕದ್ದಲ್ಲ ಅದೇನೂ ಕಡಿಮೆಯದಲ್ಲ ಇದರಿಂದ ಮನಸ್ಸಿಗೆ ಬಹಳ ಆನಂದವಾಗುತ್ತದೆ ಆದರೆ ಯಾವದೂ ಪ್ರಮಾಣಬದ್ಧವಾಗುವದಿಲ್ಲ ಈಶ್ವರನಾದರೋ ಸರ್ವಶಕ್ತಿಮಾನ್, ಸರ್ವತಂತ್ರಸ್ವತಂತ್ರ ಹೀಗಿದ್ದು, ಈ ರೀತಿ ಪೊರಿಕೆಯಿಂದುಡುಗಿ, ನೀರು ಚಿಮುಕಿಸಿ, ಜನ್ಮ ಜನ್ಮಾಂತರದವರಗೆ ಪೀಡೆ ಮುಟ್ಟಿಸಿ, ಏಕೆ ಸ್ವಚ್ಛ ಮಾಡಬೇಕು ? ಅದರಿಂದ ಲಾಭ ಯಾರಿಗ ? ಅವನಿಗೋ ಮಾನವನಿಗೋ ?"

ಕೃಷ್ಣಚಂದ್ರನ ಈ ಮಾತಿಗೆ ರಾಮಕಲಿ ಏನೂ ವಿರುದ್ಧವಾಡಲಿಲ್ಲ ನೀನು ಸರಿಯಾಗಿ ಹೇಳುವೆ ಕೃಷ್ಣಾ ಇದೆಲ್ಲ ಅನುಮಾನವಷ್ಟೇ ಸತ್ಯ ತಿಳಿಯಲು ಬೇರೇನೂ ದಾರಿ ಇಲ್ಲ.

ತರ್ಕದ ಕೊಡಲಿಯಿಂದ ರಾಮಕಲಿಯ ವಿಶ್ವಾಸ ದೃಢತೆಗೆ ಅವನು ಏಟು ಹೊಡೆದಿದ್ದ, ಇದರಿಂದ ಕೃಷ್ಣಚಂದ್ರನಿಗೆ ಕೊಂಚ ಮನದಲ್ಲಿಯೇ ಕೆಡುಕೆನಿಸಿತು "ಆದರೆ ಅತ್ತಿಗೆ, ತರ್ಕವೂ ಕಡೆಗೇನೂ ಕೊಡಲಾರದು, ವಿಶ್ವಾಸವನ್ನು ಮಾತ್ರ ಬಹಳ ದಿನಗಳಿಂದ ಜ್ಞಾನಿ ಪುರುಷರು ಹೊಗಳಿದ್ದಾರೆ ಆಗ ವಿಶ್ವಾಸವೇ ಶರಣ ಯೋಗ್ಯವೆನಿಸುವದು ಬೆಂಕಿಯಲ್ಲಿ ಬಂಗಾರ ಪುಟ ಹಾಕುವಂತೆ ದುಃಖದಲ್ಲಿ ಮನುಷ್ಯನನ್ನು ಹಾಕಿ ಭಗವಂತ ಅವನ

ಮಾಲಿನ್ಯವನ್ನೆಲ್ಲ ಕಳೆಯುತ್ತಾನೆ ಇದು ಬರಿ ಉಪಮೆಯಲ್ಲ ನಾವು ಇದನ್ನು ಸತ್ಯವೆಂದೇ ತಿಳಿಯಬೇಕು "

ಇನ್ನತ್ತು ಕೆಲಸಗಳು ಎಷ್ಟಿದ್ದವೆಂಬುದನ್ನು ಹೇಳುವಂತಿರಲಿಲ್ಲ ಬಹಳ ವೇಳೆ ರಾಮಕಲಿ ಅಲ್ಲಿ ಕೂಡುವದು ಸಾಧ್ಯವಾಗಲಿಲ್ಲ. ಕಲ್ಲೂ ಬಂದು ಹೇಳಿದನು 'ಅಮ್ಮಾ ದೊಡ್ಡಣ್ಣಾವರು ನಿಮ್ಮನ್ನು ಕರಯುತ್ತಾರ "

'ನೀವು ಮಾತಾಡುತ್ತಿರಿ ನಾನು ಈಗ ಬಂದೆ ' ಎಂದವಳೇ ರಾಮಕಲಿ ನಡೆದು ಬಿಟ್ಟಳು

ರಾಮಕಲಿ ಹೊರಟುಹೋದ ಕೂಡಲೇ ಕೃಷ್ಣಚಂದ್ರನಿಗೆ ಸಂಕೋಚ ವೆನಿಸತೊಡಗಿತು ಮಾತಾಡಲಿಕ್ಕೆ ಉಪಯುಕ್ತ ಮಾತೇ ತಿಳಿಯದಾದವು. ಮುಂಬಯಿಯಿಂದ ಲಖನೌದವರೆಗ ಅವನ ಮನಸ್ಸಿನಲ್ಲಿ ಯಾವ ವಿಚಾರ ಎದ್ದುಕೊಂಡಿದ್ದಿತೋ, ಆ ವಿಚಾರವೇ ಮುಂದೆಮುಂದೆ ಬರಲಾರಂಭಿಸಿತು.

ಒಮ್ಮೆಲೆ ಮೌನವನ್ನು ಭಂಗಿಸಿ ದುಲಾರಿ ನುಡಿದಳು 'ಅಪ್ಪ ತೀರಿದ ಮೇಲೆ ಬಂದ ನಿಮ್ಮ ಚೀಟಿಯಿಂದ, ಆ ದುಃಖದಲ್ಲಿಯೂ ನನಗೆ ಶಾಂತಿ ದೊರಯುತ್ತಿದ್ದಿತು ನಾನು ಸುಮಾರಾಗಿ ಆ ಚೀಟಿ ಇಪ್ಪತ್ತು ಸಲ ಓದಿರಬಹುದು '

ಕೃಷ್ಣಚಂದ್ರ ಮಾತಾಡಿದನು "ನಾನಾದರೂ ನೀವು ಬರದ ಅದರ ಉತ್ತರವನ್ನು ಐವತ್ತು ಸಾರೆ ಓದಿರಬಹುದು " ಹೀಗೆ ಮಾತಿಗಾರಂಭವಾದ ಕೂಡಲೇ ಕೃಷ್ಣಚಂದ್ರನ ಮೊಗ ಕೆಂಪೇರಲಾರಂಭಿಸಿತು ಅದಾವುದನ್ನೂ ಮಾತಾಡಬಾರದೆಂದೇನೋ ಅವನ ಇಚ್ಛೆ ಆದರ ಹೃದಯದ ವೇಗವು ಬಳ್ಳೇ ಪ್ರಬಲವೆನ್ನಬಹುದು ಹಠಾತ್ ಅವನು ಮನದಲ್ಲಿದ್ದುದನ್ನೇ ಒಡೆ ನುಡಿದುಬಿಟ್ಟನು ಹೀಗಾಗಿ ದುಲಾರಿಯು ಉತ್ತರವನ್ನು ಕೇಳದಿದ್ದರೂ ಯಾವುದೋ ಅಪರಾಧಿಯಂತೆ ತಾನೇ ಹೇಳತೊಡಗಿದಳು. "ನಿಮ್ಮ ಆ ಪತ್ರದಲ್ಲಿ ಪಿತೃಭಕ್ತಿ, ಹಾಗೂ ಸ್ಥಿರ–ಬುದ್ಧಿಗಳ ಬಳ್ಳೇ ಸುಂದರ ಪರಿಚಯ ವಿದೆ ಓದಿದಷ್ಟು ಸಲವೂ ನಾನು ಮುಗ್ಧಳಾಗಿ ಹೋಗುತ್ತೇನೆ "

ಈ ಮಾತು–ಕತೆ ಸಾಧಾರಣವೇನೋ ನಿಜ ಆದರಲ್ಲಿಯೂ ಒಂದೆರಡು ಮಾತು ಹೊಸ ಗಡಿಬಿಡಿಯುಪಾದವೆಂದೇ ಹೇಳಬೇಕು ಓರ್ವ ಅವಿವಾಹಿತ ಯುವಕನು, ಒಬ್ಬ ಅವಿವಾಹಿತ ಕನ್ಯೆಯ ಪತ್ರವನ್ನು ಒಂದು ಸಾರೆಯಲ್ಲ,

ಏನಕ್ಕು ಸಾರೆ ಓದಿಕೊಳ್ಳುವ. ಓದಿದಷ್ಟು ಸಲವೂ ಮುಗ್ಧನಾಗುವ. ಇವೆಲ್ಲ ಸ್ವತಃ ಕೃಷ್ಣಚಂದ್ರನಿಗೂ ಸಮಂಜಸವೆಂದು ತೋರಲಿಲ್ಲ

ಮಾತು ಸರಳ ಭಾವದಿಂದ ಸಾಗಿದ್ದರೂ ಆದರಲ್ಲಿಯೂ ಒಂದ ತನ್ನ ಸ್ತುತಿ ಕೇಳಿ ದುಲಾರಿ ಮುದುರಿಕೊಂಡಳು ಮಾತಿನ ದಿಕ್ಕು ಬದಲಾಯಿಸುವದಕ್ಕಾಗಿ ಆಕೆ ಹೊಸದೊಂದೇನೋ ಮಾತಾಡಿದಳು ಆದರ ಆಕೆಗೆ ಕೃಷ್ಣಚಂದ್ರನ ಮಾನಸಿಕ ಸ್ಥಿತಿಯ ಪರಿಚಯವಿದ್ದಿದ್ದರೆ ಆಕೆ ಹೀಗೆ ಮಾತು ಮುಂದುವರಿಸುತ್ತಿರಲಿಲ್ಲ

ದುಲಾರಿ ನುಡಿದಳು "ಇನ್ನು ಮೇಲೆ ನನಗೆ ಬಹುವಚನವನ್ನು ನೀವು ಉಪಯೋಗಿಸುವದು ಉಚಿತವಲ್ಲ"

ಕೃಷ್ಣಚಂದ್ರ ಕೇಳಿದನು "ಅದೇಕ ?"

ತುಸು ಹಿಂದುಮುಂದಾಗಿ ದುಲಾರಿ ಮಾತಾಡಿದಳು. "ಇನ್ನೂ ತಮಗ ನನ್ನನ್ನು ಏಕವಚನದಿಂದ ಮಾತಾಡಿಸುವ ಅಧಿಕಾರವಿಲ್ಲವೆಂದು ತಾವು ಯೋಚಿಸುವಿರಾ ?"

ಪುಲಕಿತನಾಗಿ ಕೃಷ್ಣಚಂದ್ರ ತನ್ನಲ್ಲಿಯೇ ಯೋಚಿಸಿದ ಇದೂ ನಿಜವೇ ಭಾವಿ ಪತಿಯಾಗತಕ್ಕವನು, ಬಹುವಚನವನ್ನು ಉಪಯೋಗಿಸುವದು ಸಹೃದಯಳಾದ ಸ್ತ್ರೀಗೆ ಸರಿ ಕಾಣದು? ಇಂಥ ಮಾತುಗಳು ಆತ್ಮೀಯತೆಯನ್ನು ದೂರ ಮಾಡುತ್ತವೆ ಅದರಿಂದ ಹೃದಯ ಮರುಗುವದು ಸಹಜ

ನಗುತ್ತ ನುಡಿದನು "ನೀವು ಎಂಬ ಬಹುವಚನ ಅಷ್ಟು ಕರ್ಕಶವೇ?"

"ಸಂಬಂಧದ ವಿಚಾರದಿಂದ ನೋಡಲು ಹಾಗೇ ಮೊದಲು ನೀವು ಬಹುವಚನದಿಂದ ಮಾತಾಡುವಾಗ ಅಭ್ಯಾಸವಶದಿಂದ ಅದು ಕರ್ಕಶವೆನಿಸುತ್ತಿರಲಿಲ್ಲ ಆದರೆ ಮುಂಬಯಿಯಿಂದ ಇಷ್ಟು ದಿನಗಳನಂತರ ಬಂದರೂ, ನಿಮ್ಮ ಬಹುವಚನದ ನುಡಿ ಕೇಳಿ, ಕಿವಿಗ ಹಾಗೆನಿಸುತ್ತದೆ"

"ನನಗೂ ಹಾಗೇ ಅನಿಸದೇ ಹೋಗುವದಿಲ್ಲ"

"ಸರಿ. ಆದರೆ ನಾನು ನಿಮ್ಮನ್ನು ಬಹುವಚನದಿಂದ ಮಾತಾಡಿಸಿದರೆ ಅನುಚಿತವಲ್ಲ ನೀವು ಮಾತ್ರ ಹಾಗೆ ಮಾತಾಡುವದು ಅನುಚಿತ"

ಕೃಷ್ಣಚಂದ್ರ ವಿಚಾರಿಸಿಕೊಂಡು ನೋಡಿದನು. ಅದು ನಿಜವಾಗಿದ್ದಿತು. ಭಾವೀ ಪತ್ನಿಯಾಗುವವಳಿಗೆ ನೀವು-ತಾವೆಂದು ಮಾತಾಡುವದು ತುಸು

ಅಪ್ರಸಕ್ತವೆನಿಸಬೇಕಾದುದು ಸಹಜ. ದುಲಾರಿಯ ಮುಖದಿಂದ ನೀವು ಎಂದು ಸಂಬೋಧನ ಕೇಳುವ ಆನಂದವನ್ನು ಯಾವುದೋ ಸನಿಹದ ಭವಿಷ್ಯ-ಮಧುರ ರಾತ್ರಿಗೆ ಮೀಸಲಾಗಿಟ್ಟು ಸ್ವಲ್ಪ ಆವೇಗದಿಂದ ಕೃಷ್ಣಚಂದ್ರ ಉಚ್ಚರಿಸಿದನು "ನನ್ನ ಈ ಅಧಿಕಾರ ಸ್ವೀಕೃತವಾಗುವಂತಿದ್ದರೆ ಇಂದಿನಿಂದ ನಾನು ನಿನಗೆ ನೀನೆಂದು ಸಂಬೋಧಿಸುತ್ತೇನೆ. ಮತ್ತು ದುಲಾರೀ ಎಂದು ಕರೆಯುತ್ತೇನೆ ಸರಿಯೇ?"

ತುಸು ಲಜ್ಜಿತಳಾಗಿ ದುಲಾರಿ ಆಡಿದಳು "ಅವಶ್ಯ. ಇದು ಎಷ್ಟೋ ಮೊದಲೇ ಆಗಬೇಕಾಗಿತ್ತು. ಆದರೆ ನೀವು ನಿಮ್ಮ ಕರ್ತವ್ಯವನ್ನು ಪೂರೈಸದೇ ಹೋದುದರಿಂದ, ನಾನು ನನ್ನ ಕರ್ತವ್ಯವನ್ನು ಪಾಲಿಸಬೇಕಾಯಿತು.'

ನಗುಮೊಗದಿಂದ ಸ್ನೇಹಯುಕ್ತನಾಗಿ ಕೃಷ್ಣಚಂದ್ರ ನುಡಿದನು "ಭಾಗ್ಯವಶದಿಂದ ನಾನು ಕರ್ತವ್ಯಪಾಲನವನ್ನು ಸ್ವತಃ ಮಾಡಲಿಲ್ಲ. ಹಾಗಿಲ್ಲದಿದ್ದರೆ ನಿನ್ನ ದ್ವಾರದಿಂದ ಸಂಬಂಧಿತನಾಗುವ ಈ ಸುಖ ಹೇಗೆ ದೊರಯುತ್ತಿದ್ದಿತು?"

ಈ ಸಾರ ದುಲಾರಿಯ ಮೊಗ ಕೆಂಪೇರಲಿಲ್ಲ. ಆದರೆ ಆಕೆಯ ಮನಸಲ್ಲಿ ಸಂದೇಹದ ಒಂದು ಅಸ್ಪಷ್ಟ ರೇಖೆ ಎದ್ದು ಬಂದಿತು. ಆಕೆ ಅಂದುಕೊಂಡಳು ಇದು ನನ್ನ ಸಂದೇಹವಾಗಿರಬಹುದು. ಕಾರಣ ಅದನ್ನುಪೇಕ್ಷಿಸಿ ಸಹಜ ಭಾವದಿಂದ ನಗುತ್ತ ದುಲಾರಿ ಮಾತಾಡಿದಳು "ಕರ್ತವ್ಯ ಪಾಲಿಸುವುದರಲ್ಲಿ ನಿಮಗೆ ಸುಖ ದೊರೆಯದೇ? ಯಾರಾದರೂ ಪ್ರೇರಿಸಿದರೆ ಮಾತ್ರ ಸುಖವೇ?"

ಉಸುಕಿನ ಗೋಡೆ, ಮತ್ತು ಪ್ರೇಮಿಗಳ ಪ್ರತಿಜ್ಞೆ ಇವರಡೂ ಸಮಾನ. ಎರಡೂ ನಷ್ಟವಾಗಲು ವೇಳೆ ಬೇಕಾಗುವದಿಲ್ಲ. ಒಂದು ಕ್ಷಣ ಮೊದಲು ಕೃಷ್ಣಚಂದ್ರ ಸಂಯಮವನ್ನು ಎಷ್ಟು ದೃಢಮಾಡಿಕೊಂಡಿದ್ದನೋ, ಅದು ಈಗ ಇಲ್ಲದಾಯಿತು. ದುಲಾರಿಯ ಮಾತಿನಿಂದ ಅವನಿಗೆ ಸಿಕ್ಕ ಉತ್ತೇಜನವೆಂದರೆ ಅಷ್ಟಿಷ್ಟಲ್ಲ. ಆಕಸ್ಮಾತ್ತಾಗಿ ಅವನು ನುಡಿದ ಮಾತು ದುಲಾರಿಗೆ ಉರುಲು ಹಾಕಿದಂತಾಯಿತು. ಅದೇನು ಲಜ್ಜೆಯೋ, ದುಃಖವೋ ವಿಸ್ಮಯವೋ, ಹೇಳುವುದು ಕಠಿಣವಾಗಿದೆ.

ಕೃಷ್ಣಚಂದ್ರ ನುಡಿದ "ನಿನ್ನ ಪ್ರೇರಣೆಯಿಂದ ನನಗೆ ಸುಖವಿದೆ. ಇದೇ ರೀತಿ ನೀನು ನನ್ನ ಎಲ್ಲ ಕಾರ್ಯಗಳ ಪ್ರೇರಣಾಶಕ್ತಿಯಾಗು. ನನ್ನ

ದುಷ್ಟ ಜೀವನವನ್ನು ಸಫಲಗೊಳಿಸು. ನನ್ನ ಜೀವನದ ಧ್ರುವತಾರೆಯಾಗು ದುಲಾರಿ! ಇದು ಇಂದೇ ನಾನು ಮಾಡಿಕೊಂಡ ಕಲ್ಪನೆಯಲ್ಲ ದುಲಾರಿ ಇದು ಸುಖ-ದುಃಖಗಳಿಂದ ಕಳೆದ ಅನೇಕ ದಿನಗಳ ಆಶೆಯಾಗಿದೆ ಒಂದು ಸಾರೆ ನುಡಿದುಬಿಡು, ಇದು ನಿನ್ನ ಸ್ವಪ್ನವಲ್ಲ ಎಂದು

ಕೃಷ್ಣಚಂದ್ರನ ಉತ್ತೇಜಿತ ಹೃದಯ ಇನ್ನೂ ಎಷ್ಟು ದೂರ ಒಯ್ಯುತ್ತಿದ್ದಿತೆಂಬುದು ಹೇಳಬರುವಂತಹದಲ್ಲ ಆದರ ಅದೇ ಕಾಲಕ್ಕೆ ರಾಮಕಲಿ ಸಹಸಾ ಬಂದುಬಿಟ್ಟಳು

ರಾಮಕಲಿ ಬಂದವಳೇ ಮೊದಲು ತಾನು ಎತ್ತಿದ ಮಾತನ್ನೇ ಎತ್ತಿದಳು "ಕೃಷ್ಣಾ ನಿನಗ ವಿಶ್ವಾಸದ ಮಾತನ್ನು ಹೇಳುತಿದ್ದೆ, ನನಗೆನಿಸುವದೇನೆಂದರೆ ಸತ್ಯಕ್ಕೆ—ವಿಶ್ವಾಸದ ನಿಕಟ ಸಂಬಂಧವಿದೆ ನಾವು ವಿಶ್ವಾಸವಿಟ್ಟದ್ದು ಬಹಳ ಸಾರೆ ಸತ್ಯವೇ ಆಗುವದು ಭಗವಂತನಿದ್ದಾನೆ, ಇದರಲ್ಲಿ ಅನೇಕ ದಿನಗಳಿಂದ ಎಲ್ಲರೂ ವಿಶ್ವಾಸವಿಟ್ಟಿದ್ದಾರೆ ಇದರಿಂದ ತಿಳಿಯಬೇಕಾದುದೇನೆಂದರೆ ಭಗವಂತನಿದ್ದಾನೆ" ಇಷ್ಟು ಮಾತಾಡಿ ರಾಮಕಲಿ ಯೋಚಿಸಿಕೊಂಡಳು ಬಹುಶಃ ದುಲಾರಿ-ಕೃಷ್ಣಚಂದ್ರರು ಮತ್ತೊಂದು ಮಾತಾಡುತಿರಬಹುದು, ನನ್ನ ಮಾತಿನಿಂದ ಅವರ ಮಾತಿನ ಎಳೆ ತಪ್ಪಿಹೋಗಬಹುದು, ಎಂದುಕೊಂಡು ಬೇಗನೆ ಕೇಳಿಬಿಟ್ಟಳು 'ನಾನು ಹೋದಮೇಲೆ ಸಹ ನೀವು ಇದನ್ನೇ ಮಾತಾಡುತಿದ್ದಿರಾ?"

ರಾಮಕಲಿ ಹೋದನಂತರ ಏನೇನು ಮಾತುಗಳಾಗಿದ್ದವೋ, ನಿಜವಾಗಿ ಅವು ರಾಮಕಲಿಗೆ ಗೊತ್ತಿರಲಿಲ್ಲ ಆದರೂ ಆಕೆಯ ಪ್ರಶ್ನೆಯಿಂದ ಲಜ್ಜಿತನಾಗಿ ಕೃಷ್ಣಚಂದ್ರ ಹೇಳಿದನು "ಇಲ್ಲ ಈ ಮಾತನ್ನೇನೂ ನಾವು ಆಡುತ್ತಿರಲಿಲ್ಲ ಆದರೆ ಅತ್ತಿಗೆ, ನೀನು ಹೇಳುವದು ಸರಿ ವಿಶ್ವಾಸವೇ ಪ್ರಕಾಶ ತರ್ಕವು-ಎಲ್ಲಿ ತಲೆ ಮೇಲೆ ಕೈ ಹೊತ್ತುಕೊಂಡು ಕೂಡುವದೋ, ಅಲ್ಲಿ ವಿಶ್ವಾಸ ಎಲ್ಲಾ ದಾರಿ ಸರಿ ಮಾಡಿಬಿಡುತ್ತದೆ

ತರ್ಕ—ವಿಶ್ವಾಸದ ಈ ಮಾತುಗಳನ್ನು ಕೂಡಲೇ ನಿಲ್ಲಿಸಿ ರಾಮಕಲಿ ಅಂದಳು 'ಕೃಷ್ಣಾ, ಜೇಷ್ಠಮಾಸದಕಿಂತ ನಿನ್ನ ಲಗ್ನವೇನೂ ಮುಂದೆ ಬೀಳುವದಿಲ್ಲ" ತುಸು ಮೊದಲು ರಾಜರಾಣಿಯಿಂದ ರಾಮಕಲಿ ಕೇಳಿದ್ದಳು ಜೇಷ್ಠದಲ್ಲಿ ಕೃಷ್ಣಚಂದ್ರನ ವಿವಾಹವೆಂದು

ಕೃಷ್ಣಚಂದ್ರ ಹೇಳಿದ "ಅದೇತಕ್ಕೆ ಅತ್ತಿಗೆ?"

"ಜ್ಯೇಷ್ಠದಲ್ಲಿ ನಿನ್ನ ವಿವಾಹ"

ಜ್ಯೇಷ್ಠಮಾಸವೆಂದು ಕೇಳಿ ಕೃಷ್ಣಚಂದ್ರನಿಗೆ ದುಃಖವೆನಿಸಿತು ಇಷ್ಟು ದೂರವೇ? ಆದರೆ ದುಲಾರಿಯ ಈಗಿನ ಮನಸ್ಥಿತಿಯನ್ನು ಯೋಚಿಸಿ, ಇದು ಉಚಿತವೆಂದುಕೊಂಡ

"ಅಷ್ಟು ದಿನ ನಾನು ಧೈರ್ಯ ತಾಳಿ ಇರಬೇಕೆ? ಯಾಕೆ, ವೈಶಾಖ ಮಾಸ ಏನು ತಪ್ಪು ಮಾಡಿದ್ದು?

ಕೃಷ್ಣಚಂದ್ರ ಕಳ್ಳ ನೋಟದಿಂದ ನಾಚಿ ಕೆಂಪೇರಿದ ದುಲಾರಿಯ ಮೊಗ ನೋಡಲು ಯತ್ನಿಸಿದನು

ಒಂದು ಪೆಟ್ಟು ಬಿದ್ದನಂತರ ಇನ್ನೊಂದು ಬೀಳಬೇಕಾದುದೇ ಎಂದು ಭಾವಿಸಿ ದುಲಾರಿ ಉತ್ಸಾಹಶೂನ್ಯಳಾದಂತಿದ್ದಳು ಒಂದು ಆಘಾತವನ್ನು ಕೃಷ್ಣಚಂದ್ರ ಆಕೆಯ ಮೇಲೆ ಮಾಡಿದ್ದನು ಇತ್ತ ರಾಮಕಲಿ ಪ್ರಬಲ ಆಘಾತವನ್ನು ಕೃಷ್ಣಚಂದ್ರನಿಗೆ ಮಾಡಿದಾಗ ಅವನ ಸ್ಥಿತಿ ಏನೋ ಎಂದು ರೋಮಾಂಚಿತಳಾದಳು

ಪರಿಹಾಸದಿಂದ ರಾಮಕಲಿ ಆಡಿದಳು "ಎಷ್ಟು ಅವಸರವೋ ಕೃಷ್ಣಾ ನಿನಗೆ? ಆದರೆ ಇನ್ನೊಂದು ಪ್ರಾಣಿ ನಿನಗಿಂತ ತವಕಪಡುತ್ತಿರುವದು" ಎಂದು ಹೇಳಿ ದುಲಾರಿಯ ಕಡೆಗೆ ನೋಡಿ ತುಟಿ ಕಚ್ಚಿ ನಗಲಾರಂಭಿಸಿದಳು

ಆ ಪ್ರಾಣಿ ದುಲಾರಿಯು ವಿನಾ ಇನ್ನಾರೂ ಅಲ್ಲವೆಂದು ತಿಳಿದು ಪ್ರಸನ್ನತೆಯಿಂದ ಕೃಷ್ಣಚಂದ್ರ ಹೇಳಿದನು "ಆ ಇನ್ನೊಂದು ಪ್ರಾಣಿಗೆ ಹೇಳು ಅತ್ತಿಗೆ, ಒಪ್ಪಿಗೆ ಇದ್ದರೆ ಫಾಲ್ಗುಣ ಮಾಸದಲ್ಲಿ ಜರುಗಿದರೂ ಪರವಿಲ್ಲ"

"ಇದನ್ನೆಲ್ಲ ತೀರಿಸುತ್ತ ನಾನೆಲ್ಲಿ ಕೂಡಲಿ ನಿಮ್ಮ ಜಗಳ ಕೃಷ್ಣಾ ನೀವಿಬ್ಬರೂ ಯೋಚಿಸಿಕೊಂಡು ಒಗೆಹರಿಸಿಕೊಳ್ಳಿರಿ ಒಳ್ಳೇದು ಕೂಡು ನಾನು ಮೈದುನನನ್ನು ಕರೆತರುತ್ತೇನೆ" ಎಂದು ಹೇಳಿ ಕೊಟ್ಟಡಿಯಿಂದ ಹೊರಗೆ ಹೋದಳು

ಆವೇಗದಿಂದ ಕಂಪಿಸುತ್ತಿರುವ ದನಿಯಲ್ಲಿ ಕೃಷ್ಣಚಂದ್ರ ಮಾತಾಡಿದ "ಕೇಶವನು ಇದರಲ್ಲೇನು ಒಗೆಹರಿಸುತ್ತಾನೆ ದುಲಾರೀ? ನಾನು—ನೀನು ಬಗೆಹರಿಸುವಾ ಆದರೂ ಈ ವಿಷಯದಲ್ಲಿ ನೀನು ಹೇಳಿದಂತೆ ನನ್ನ ಬಗ್ಗೆ

ಕೇಳಿದರೆ ನಾನು ನಾಳೆಗೇ ಲಗ್ನಕ್ಕೆ ಸಿದ್ಧ! ತಮ್ಮ ಪ್ರಿಯ ವಸ್ತುವಿನಿಂದ ದೂರವಿರಲು ಯಾರು ಇಚ್ಛಿಸುತ್ತಾರ ದುಲಾರೀ "

ಈ ಸಂಬಂಧವಾಗಿ ದುಲಾರಿ ಏನಾದರೂ ಹೇಳಬಹುದಿತ್ತು, ಕಿಂತು ಆಕೆಯಲ್ಲಿ ಶಕ್ತಿಯೇ ಉಡುಗಿದಂತಾಗಿತ್ತು ತಲೆ ತಿರುಗಲಾರಂಭಿಸಿತು, ಕಣ್ಣಿಗೆ ಕತ್ತಲೆಗವಿದಂತಾಯಿತು

ಈಗಾದರೂ ರಾಮಕಲಿಯೇ ಆಕೆಯನ್ನು ರಕ್ಷಿಸಿದಳು. ತುಸು ಮೊದಲು ನಡೆದ ಕೇಶವನ ಹಾಗೂ ತನ್ನ ಸಂಭಾಷಣೆಯಿಂದ ಕೇಶವನ ಮನಸ್ಥಿತಿ ಯೋಚಿಸಿ ಇಂಥ ಪರಿಹಾಸದಲ್ಲಿ ಅವನನ್ನು ಜಗ್ಗುವದು ಒಳಿತಲ್ಲ ವೆಂದುಕೊಂಡಳು, ಇದೇ ವಿಚಾರದಿಂದಲೇ ಆಕೆ ತಿರುಗಿ ಬಂದದ್ದು

"ಏನಾಯಿತು ಅತ್ತಿಗೆ?"

ರಾಮಕಲಿ ನುಡಿದಳು. "ಅವರು ತಮ್ಮ ವಿವಾಹ ಮುಹೂರ್ತ ಸ್ವತಃ ಗೊತ್ತು ಮಾಡುತ್ತಾರೆ. ಈಗೇನು ವ್ಯವಸ್ಥೆ ಸಾಗಿರುವದೋ ಅದೇ ಚೆನ್ನಾಗಿದೆ"

ಒಳ್ಳೇ ಅಚ್ಚರಿಯಿಂದ ಕೃಷ್ಣಚಂದ್ರ ಕೇಳಿದನು "ಕೇಶವನ ವಿವಾಹ ವೆಂದು ಹೇಳಿದೆಯಲ್ಲವೇ ?"

ರಾಮಕಲಿ ಆಶ್ಚರ್ಯದಿಂದ ನುಡಿದಳು "ಏನಯ್ಯಾ, ನಿನಗೆ ಗೊತ್ತಿಲ್ಲವೇ? ವೈಶಾಖ ಮಾಸದಲ್ಲಿ ದುಲಾರಿಯ ಸಂಗಡ ನನ್ನ ಮೈದುನ ಕೇಶವರ ಲಗ್ನ"

"ಹಾಗೋ?"

"ನಿನಗಾದರೂ ಏನು ಗೊತ್ತು ದುಲಾರಿಯ ಅಸಮಾಧಾನದಿಂದ ಈ ಸುದ್ದಿ—ಅಷ್ಟು ಪ್ರಸಿದ್ಧವಾಗಿಲ್ಲ, ಅಷ್ಟೇ."

ನಂತರ ರಾಮಕಲಿ ವಿಸ್ತಾರಪೂರ್ವಕವಾಗಿ ದುಲಾರಿ ಕೇಶವರ ಲಗ್ನ ವಿಷಯವನ್ನು ತಿಳಿಸಿದಳು. ಅದು ಹೇಗೆ ಯಾವ ರೀತಿ ನಿಶ್ಚಯವಾಗಿದೆ, ಇತ್ಯಾದಿ ತಿಳಿಸಿ ಅಂದಳು, "ಏನು, ಇದೊಂದು ಒಳ್ಳೇ ಸಂತೋಷ ವಾರ್ತೆ ಅಲ್ಲವೇ? ಕೃಷ್ಣಾ."

ಯಾವ ನಗೆಯ ಬದಲು ದುಃಖಾಶ್ರು ಸುರಿಯಬೇಕಾಗಿದ್ದಿತೋ, ಅದೇ ನಗೆ ಬಲುವೆಯಿಂದ ನಗುತ್ತ ನುಡಿದ ಕೃಷ್ಣಚಂದ್ರ 'ಹಾಂ ನಿಜ.'

ಕುರ್ಚಿಯಿಂದ ಎದ್ದು ನಿಂತು ಹೇಳಿದನು "ಅತ್ತಿಗೆ ಈಗ ಮನೆಗೆ ಹೋಗುತ್ತೇನೆ. ನಾಳೆ ಬಂದೇ ಒರುವೆನಲ್ಲ"

"ಇದೇನು? ನೀನು ಊಟ ಮಾಡುವದಿಲ್ಲವೇ?"

"ಇಲ್ಲ ಅತ್ತಿಗೆ, ಎಷ್ಟೋ ದಿನಗಳಿಂದ ನಿದ್ರೆ ಹತ್ತಿಲ್ಲ ಇಂದೇಕೋ ಮಲಗಬೇಕೆನಿಸಿದೆ. ಮತ್ತೆ ನಿನಗೆ ಗೊತ್ತಿರುವದಲ್ಲ ತುಸು ಏನೋ ಆಷ್ಟಾದರೆ ನಾನು ಊಟಕ್ಕೆ ತಪ್ಪಿಸುವವನಲ್ಲ ಸರಿ. ನಾಳೆ ಕೆಲಸ ಬಹಳ ಕಾಣುವದು"

"ಹು ಕೃಷ್ಣಾ ತುಸು ತಿಂಡಿಯನ್ನಾದರೂ ತಿಂದು ಹೋಗು"

"ಚಿಃ ಏನೂ ಬೇಡ ಅತ್ತಿಗೆ ಏನೋ ಯಾವಾಗಾದರೊಮ್ಮೆ ಮೊಂಡತನ ಮಾಡಿದರೆ ಕ್ಷಮೇ ಇಲ್ಲವೇ ಅತ್ತಿಗೆ?"

ತುಸು ವಿಚಾರಿಸಿ ರಾಮಕಲಿ ಅಂದಳು "ಅದೇಕಿಲ್ಲ? ಇರಲಿ ಕೃಷ್ಣಾ. ಈ ಮಾತೇಕೆ?"

"ಯಾವಾಗಾದರೊಮ್ಮೆ ಹೇಳುತ್ತೇನೆ ಈಗ ನಿದ್ರೆ ಪ್ರಬಲವಾಗಿದೆ. ಹೋಗುತ್ತೇನೆ"

"ಮೈದುನರ ಭೆಟ್ಟಿಯಾಗುವದಿಲ್ಲವೋ?

"ಹು."

ಕೃಷ್ಣಚಂದ್ರ ಹೇಗೋ ಕೊಟಡಿಯಿಂದ ಹೊರ ಬಿದ್ದನು. ಕೇಶವನ ಕೊಟಡಿಯ ಬಳಿಗೆ ಬಂದು ಬಾಗಿಲ ಮೇಲೆ ಕೈಯಿಟ್ಟು ಏನೋ ಯೋಚಿಸಿಕೊಂಡನು ಯಾಕೋ ಬಾಗಿಲು ಮಾತ್ರ ತೆಗಸದೇ ಸುಮ್ಮನೇ ಹೊರಗೆ ನಡೆದನು.

## (೨೪)

ಜಗತ್ತಿನಲ್ಲಿ ಎಷ್ಟು ವಸ್ತುಗಳು ಮನುಷ್ಯನಿಗೆ ಅಜ್ಞಾತವಾಗಿರುವವೋ, ಅವುಗಳಲ್ಲಿ ಒಂದು ಅವನ ಜೊತೆಗೆ ಇರುವದು ಅದು ಇನ್ನಾವುದೂ ಅಲ್ಲ ಮನಸ್ಸು ಇದೇ ಮನದಿಂದ ಅವನು ತನ್ನ ಎಲ್ಲ ಕಾರ್ಯ ತಿಳಿಯುತ್ತಾನೆ ಆದರೆ ಮನಸ್ಸೆಂದರೆ ಏನು? ಎಂಬುದನ್ನು ಮಾತ್ರ ತಿಳಿಯಲಾರ ತನ್ನದೂ ಅರಿಯ ಮುಂದಿಯದನ್ನೂ ಗುರುತಿಸಲಾರ.

ಇಂದು ಕೇಶವ ಇದನ್ನೇ ಸಿದ್ಧಗೊಳಿಸುತ್ತಿದ್ದನೇನೋ? ಯಾವುದೂ ತನ್ನ ಮನಸಲ್ಲಿಯೇ ಇಲ್ಲ, ಎಂದು ಆ ಹೊತ್ತಿನ ಸಂಜೆಯವರೆಗೆ ವಿಶ್ವಾಸವಿದ್ದಿತೋ, ಅದು ಅರ್ಥಾತ್ ಮಾಲತಿಯ ಬಗ್ಗೆ ಪ್ರೇಮವು ಯಾವಾಗಲೂ ಇತ್ತು, ಇಷ್ಟೇ ಅಲ್ಲ, ಅದು ಅಪರಿಮಿತವಾಗಿದೆ ಎಂಬುದನ್ನು ಈಗೀಗ ತಿಳಿಯಲಾರಂಭಿಸಿದ್ದ ಕೇಶವನು

ಮಾಲತಿ ತನ್ನ ಪ್ರೇಮದ ಪರಿಚಯ ಮಾಡಿ ಕೊಡಲಿಲ್ಲ ಸಂತಾಪ ಹೊಂದಿದ್ದಳು ಪೆಟ್ಟು ತಿಂದ ಸರ್ಪಿಣಿಯಂತೆ, ಮಾಲತಿ ವಿಷಕಾರಿದ್ದಳು

ಸುಖದ ದಿನಗಳಲ್ಲಿ, ನಗೆ–ನಲಿವಿನಲ್ಲಿ, ಸ್ನೇಹ–ಪ್ರೀತಿಗಳಲ್ಲಿ ಯಾವುದು ಕೇಶವನಿಗೆ ಗೊತ್ತಾಗದಿತ್ತೋ, ಅವರ ಬಳಿಗೆ ಸರ್ವನಾಶದ ಈ ದಿವಸದಲ್ಲಿ ದುಃಖಾಪಮಾನಗಳು— ಕೇಶವನ ಕೈಹಿಡಿದುಕೊಂಡು ಕರೆದೊಯ್ದುವು ವಿಸ್ಮಯಚರಿತನಾಗಿ ಕೇಶವ ನೋಡಿದ ಪ್ರೇಮವೆಂದರೆ—ಈಗ ಹುಟ್ಟಿಬಂದ ಕಳಲಲ್ಲ ಬಹು ದಿವಸಗಳಿಂದ ಹೊಟ್ಟೆಯಲ್ಲಿಟ್ಟು ನಂತರ ಎದೆಗವಚಿಕೊಂಡು ಬೆಳೆಸಿದ್ದು ಮಾತ್ರ ತನಗರಿಯದೇ ಇದೆಲ್ಲ ಸಾಗಿದೆ

ಗಡಿಯಾರದಲ್ಲಿ ಒಂದು ಗಂಟೆಯಾಗಿದೆ ಎಲ್ಲರೂ ಮಲಗಿದ್ದಾರೆ ಎಲ್ಲ ಕಡೆಗೂ ನಿಃಶಬ್ದ ಆದರೆ ಕೇಶವನ ಕಂಗಳಲ್ಲಿ ನಿದ್ರೆ ಇರಲಿಲ್ಲ ಅವನು ತನ್ನ ಹಾಸಿಗೆಯಲ್ಲಿ ಬಿದ್ದುಕೊಂಡು ಸಂಜೆಯ ಮಾತುಗಳನ್ನು ಯೋಚಿಸುತ್ತಿದ್ದಾನೆ ಅವನು ಇಂದು ಅದ್ಭುತವೊಂದನ್ನು ಕಂಡಿದ್ದಾನೆ ಮಾದವಿಲತೆಯು ಹಾವಾಗಿ ಕಡಿದಿತ್ತು, ಚಂಡನವು ಬೆಂಕಿಯಾಗಿ ಮುರಪಳಿಸಿತ್ತು, ಹೂವು ಕಲ್ಲಾಗಿ ಪೆಟ್ಟು ಹೊಡೆದಿತ್ತು, ಆ ಮುಗ್ಧ ವಿಸ್ಮಯವನ್ನು ನೆನೆನೆನೆಸಿ ನೋಡುತ್ತಿದ್ದ ಆಗಿನ ಮಾಲತಿಯ ಭಾವಭಂಗಿ ಅಭಿಮಾನದಿಂದ ತತ್ತರಿಸುವ ತುಟಿ, ವೇದನೆಯಿಂದ ಕೆಂಪಾದ ಮೊಗ ಮತ್ತು ಸಿಟ್ಟಿನಿಂದ ಉರಿಯುತ್ತಿರುವ ಕಣ್ಣುಗಳು, ತನ್ನ ಇಪ್ಪತ್ತು ನಾಲ್ಕು ವರ್ಷಗಳಲ್ಲಿ ಕೂಡ ಇಂಥ ಒಂದೂ ಚಿತ್ರ ಅವನು ಕಂಡಿರಲಿಲ್ಲ ಯಾವುದರಲ್ಲಿ ಅನೇಕ ಭಾವಗಳು ವ್ಯಕ್ತವಾಗಿದ್ದವೋ ಅಂಥದು ಈ ಚಿತ್ರ ಇಂದು ರಾತ್ರಿರಾಣಿಯು ಗುಲಾಬಿ ಹೂವಿನಂತೆ ಆರಕ್ತಳಾಗಿ ಹೋಗಿದ್ದಳು

ಆದರೆ ಇದು ಹೊರಗಿನ ಮಾತಾಯಿತು! ಆಕೆಯ ಅಂತರಂಗ ಸ್ಥಿತಿ ಇದಕ್ಕೂ ಆಶ್ಚರ್ಯಕರವಾಗಿದ್ದಿತು ಒಂದು ದಿನ ಸಹ ಯಾವ ಸ್ಥಳದಲ್ಲಿ

ತಪ್ಪಿ ಕೂಡ ನೀರು ಕಂಡಿರಲಿಲ್ಲವೋ, ಅಲ್ಲಿ ಈ ಝರಿ ಬಂದುದು ಹೇಗೆ? ಬೆಂಕಿ ಈ ದಿನ ಸುಡದೇ ಶೀತಲವಾಯಿತು, ಮತ್ತು ಆಘಾತವು ಪೆಟ್ಟು ಕೊಡದೇ, ಆರಾಮು ಕೊಟ್ಟಿತು ಇದು ಹೇಗೆ? ಇಂದಿನ ಘಟನೆಯನ್ನು ಕೇಶವ ತನ್ನೊಳಗೇ ಯೋಚಿಸಿ ಕಂಡುಕೊಂಡನು ಒಲವಾದ ಆಘಾತ ಮಾಡಿ ತನ್ನ ಹೃದಯದ ಆವರಣವನ್ನು ಭಂಗಿಸಿ ಮಾಲತಿ ಯಾವ ಬೀಜ ತೋರಿಸಿದಳೋ—ಅದರ ಬೆಳವಣಿಗೆಗೆ ಯಾವ ಉಪಾಯವೂ ಇಲ್ಲದಂತಾದುದರಿಂದ ಅದನ್ನು ನಾಶಗೊಳಿಸಬೇಕು ಅನ್ಯಥಾ ಬಳೆದುಕೊಂಡರೆ ಅವಶ್ಯವಾಗಿ ವಿಷಮಯ ಫಲ ದೊರೆತೀತು ಆದರೆ ಇದನ್ನು ಹೇಗೆ ತಡೆಯಬೇಕು? ನನ್ನ ಆ ಸಂಯಮವೆಲ್ಲಿ? ಎಂದು ಕೇಶವ ವಿಚಾರಗ್ರಸ್ಥನಾಗಿದ್ದ ಆ ಸಂಯಮವೆಂದರೆ ಆದೇನು ಅವನ ಸಾಧನೆಯಿಂದ ಬಂದದ್ದಲ್ಲ ಬಹು ದಿನಗಳಿಂದ ಅಗಲದ ಗೆಳೆಯನಂತೆ ಅವನ ಹೃದಯದಲ್ಲಿಯೇ ಇತ್ತು ಮಾತ್ರ ಕೆಲವು ದಿನ ಅದರ ಕಾರ್ಯವೇನೂ ಇರಲಿಲ್ಲ ಅಷ್ಟೇ. ಅವಶ್ಯ ಬಿದ್ದಾಗ ಕವಚದಂತೆ ಅವನನ್ನು ಅದು ರಕ್ಷಿಸಿದೆ ಆದರೆ ಇಂದು ಅದರ ಶೋಧ ಸಾಗಿದೆ ಮತ್ತು ಅದನ್ನು ಹೊರತೆಗೆಯುವ ಅವಶ್ಯಕತೆಯುಂಟಾಗಿದೆ

ಕೇಶವನು ಹೀಗೆ ವಿಚಾರಮಗ್ನನಾಗಿರುವಾಗ ಬಾಗಿಲು ಬಡಿದ ಸಪ್ಪಳವಾಯಿತು ಯಾರೋ ಕೂಗಿದರು ''ಕೇಶವಣ್ಣಾ''

ಹಾರಿಬಿದ್ದು ಕೇಶವ ಎದ್ದು ಬಾಗಿಲು ತೆರೆದು ನೋಡುತ್ತಾನೆ ಮಾಲತಿ ನಿಂತಿದ್ದಾಳೆ

''ನೀನು ಇಷ್ಟು ರಾತ್ರಿಯಲ್ಲಿ ಏನು ಬಂದೆ ಮಾಲತೀ''

''ಒಂದು ಮಾತು ಹೇಳಬೇಕಾಗಿದೆ''

''ಒಳ್ಳೇದು ಒಳಗೆ ಬಾ' ಎಂದು ಹೇಳಿ ಮಾಲತಿ ಒಳಗೆ ಬಂದೊಡನೆ ಬಾಗಿಲು ಮುಚ್ಚಿದ್ದನು, ಕೈ ಬೊಟ್ಟಿನಿಂದ ಸಂಜ್ಞೆ ಮಾಡಿ ಒಂದು ಕುರ್ಚಿ ತೋರಿಸಿ ನುಡಿದನು ''ಕೂಡು''

''ಕೂಡುವದಕ್ಕಿಂತ ಮೊದಲು'' ಮುಂದೆ ಮಾಲತಿ ಗದ್ಗದಿತಳಾದಳು ಆಕೆ ಕೇಶವನ ಕಾಲುಗಳ ಮೇಲೆ ಹೊರಳಿ ಬಿದ್ದಳು ಕಣ್ಣುಗಳಿಂದ ಧಾರಾಕಾರ ನೀರು ಸುರಿಯುತ್ತಿದ್ದವು.

ಬೇಗ-ಬೇಗನೆ ಕೇಶವ ಆಕೆಯ ಕೈ ಹಿಡಿದು ಎಬ್ಬಿಸಿದನು. ಹಾಗೂ

ಕುರ್ಚಿಯ ಮೇಲೆ ಕುಳ್ಳಿರಿಸಿದನು "ಛೀ, ಮಾಲತಿ ಇಷ್ಟು ಅಧೈರ್ಯವೇ? ತುಸು ವೇಳೆ ಶಾಂತಳಾಗಿ ಕೂಡು" ಕೇಶವ ಹೀಗೆ ಹೇಳದಿದ್ದರೂ ಕೂಡ ಮಾಲತಿಯಲ್ಲಿ ಮಾತಾಡುವ ಸಾಮರ್ಥ್ಯವೆಲ್ಲಿತ್ತು?

ಮಾಲತಿ ಕುರ್ಚಿಯ ಕೈ ಮೇಲೆ ತಲೆ ಚಿಟ್ಟಿಕ್ಕಿ, ಬಿಕ್ಕಿ ಬಿಕ್ಕಿ ಅಳತೊಡಗಿದಳು ದುಃಖಾವೇಗ ಕಡಿಮೆಯಾದ ಕೂಡಲೆ ಮಾಲತಿ ಹೇಳಿದಳು ನನ್ನನ್ನು ಕ್ಷಮಿಸು ಕೇಶವಣ್ಣಾ! ನಾನು ಆಗ ಬಹಳ ಅನುಚಿತ ವರ್ತನ ಮಾಡಿದೆ"

ಏನು ಹೇಳಬೇಕೋ? ಏನು ಕೇಳಲಿ? ಎಂದು ವಿಚಾರಿಸಿ ಕೇಶವ ನುಡಿದನು "ಯಾರನ್ನು ಕ್ಷಮಿಸಬೇಕು ಮಾಲತೀ! ನಿನ್ನ ಮೇಲೆ ತುಸೂ ಕೂಡ ನನಗೆ ಸಿಟ್ಟಿಲ್ಲ ನಾನು ಇದನ್ನು ಯೋಚಿಸುತ್ತೇನೆ ಈಗ ನೀನು ಅನುಚಿತ ವರ್ತಿಸಿದೆಯೋ? ನಾನೋ?"

ಇದರಲ್ಲಿ ಅಡಗಿದ್ದ ಕೇಶವನ ಅಭಿಪ್ರಾಯ ತಿಳಿಯದೇ ಮಾಲತಿ ಅಂದಳು "ನಿಜವಾಗಿ ನಾನೇ ಅನುಚಿತ ವರ್ತಿಸಿದೆನು ನನ್ನ ಜೀವನದಲ್ಲಿ ಹೀಗೆಂದೂ ನಾನು ವರ್ತಿಸಿದ್ದಿಲ್ಲ ಮತ್ತು ಬಹುಶಃ ಯಾರೂ ವರ್ತಿಸಿರಲಿಕ್ಕಿಲ್ಲ ನಿನ್ನ ಅಸೀಮ ಅಂತಃಕರಣಕ್ಕೆ ಯೋಗ್ಯ ಪ್ರತಿಫಲ ಕೊಟ್ಟೆ"

ಮಾಲತಿಯನ್ನು ತಡೆದು ಕೇಶವ ಅಂದನು "ಆಗ ನೀನು ಅನುಚಿತ ವರ್ತಿಸಲಿಲ್ಲ ಈಗ ಅನುಚಿತ ವರ್ತಿಸುತ್ತೀಯೆ ಮಾಲತೀ ಆ ಸಮಯದಲ್ಲಿ ನೀನಾಡಿದ ಅಂಥ ಮಾತುಗಳನ್ನು ಬಹುಶಃ ತಮ್ಮವರಿಗೆ ಮನುಷ್ಯರು ಆಡುತ್ತಾರ ಆದರ ಈಗ ನೀನೇನು ವಿಚಾರ ಪೂರ್ವಕವಾಗಿ ಮಾತಾಡುತ್ತಿರುವಯೋ ಇವೇನೂ ನನಗ ರುಚಿಸುವದಿಲ್ಲ ನಿಜವಾಗಿ ಈಗ ನನ್ನನ್ನು ಕಷ್ಟಪಡಿಸುತ್ತಿರುವೆ"

ಆಶ್ಚರ್ಯದಿಂದ ಮಾಲತಿ ನುಡಿದಳು "ಅದೆಲ್ಲ ನಾನು ತಿಳಿಯುತ್ತೇನೆ ಕೇಶವಣ್ಣಾ. ನೀನು ಎಲ್ಲಾ ಕ್ಷಮಿಸಿಬಿಡುವಂಥವನೇ ಸರಿ ಆದರೆ ಕ್ಷಮಿಸೆನ್ನುವವರಿಗ ಕ್ಷಮಿಸಲಾರೆಯಾ? ನಿಲ್ಲು, ನಾನು ಅಂಥ ಮಾತು ಹೇಗೆ ಆಡಿಬಿಟ್ಟೆನಲ್ಲ! ಎಂದು ನೆನೆದು ಮರುಗುತಿದ್ದೇನೆ ಇಂದಿನವರೆಗೆ ನೀನು ಕಲಿಸಿದ ನೀತಿಪಾಠದ ಬಲವಿದ್ದರೂ ಇಂಥ ಅಸಂಮತ ವರ್ತನೆ ನನ್ನಿಂದ ಹೇಗೆ ಘಟಿಸಿತು? ಅಮೀನಾಬಾದ ತೋಟದಲ್ಲಿ ಸಹ ಇಂಥ ಘಟನೆ ಜರುಗಿರಲಿಲ್ಲ

ಅಮೀನಾಬಾದ ತೋಟದ ಮಾತೇನೋ ಮಾಲತಿಯ ಬಾಯಿಂದ ಹೊರಟಿತು ನಿಜ ಆದೇ ಕ್ಷಣದಲ್ಲಿ ಆಕೆಯ ಮೊಗ ಕೆಂಪಡರಿತು– ಕೇಶವ ಮಾತಾಡಿದನು, "ಮನಸ್ಸಿನ ಅವಸ್ಥೆಗಳು ಎಲ್ಲಾ ಸಮಯದಲ್ಲಿ ಹೇಗಿರುವವೋ ತಿಳಿಯಲಾಗುವದಿಲ್ಲ ಮಾಲತೀ! ಸಹಜ ಸಂಭವವಿದೆ ಆ ತೋಟದಲ್ಲಿ ನೀನು ತೋರಿಸಿದ ಸಂಯಮ ಈಗ ಉಳಿಯಲಿಲ್ಲ ಎರಡು ದಿನಗಳ ವರೆಗೂ ನನ್ನ ಮನಸ್ಸಿನ ಮಾತೇ ಸ್ವಯಂ ನನಗೆ ತಿಳಿಯಲಿಲ್ಲ ನೋಡು ಅದರಿಂದ ಎದೆ ಮೇಲೊಂದು ಕಲ್ಲು ಹೇರಿದಂತಾಗಿದೆ ಈ ದುಃಖವು ಪಟ್ಟು ತಿಂದು ಅಲ್ಲ, ಪಟ್ಟು ಹಾಕಿ ಉಂಟಾಗಿದೆ"

ಕೇಶವನಾಡಿದ ಮಾತುಗಳು ಮಾಲತಿಗೆ ತಿಳಿಯಲಿಕ್ಕೆ ವೇಳೆ ಹಿಡಿಯಲಿಲ್ಲ ಆದರೂ ಆಕೆಗೆ ಈ ಸಂಬಂಧದಲ್ಲಿ ಮಾತು ಬೆಳೆಸುವ ಇಚ್ಛೆ ಇರಲಿಲ್ಲ

ಇಂಥ ಅಪರಾತ್ರಿಯಲ್ಲಿ ಯಾರೂ ಕರೆಯದೇ ಕೇಶವನ ಕೋಟಡಿಗೆ ನುಗ್ಗಿ ಅವನಲ್ಲಿ ತಾರುಣ್ಯವನ್ನು ಜಾಗ್ರತಗೊಳಿಸಿ, ತನ್ನ ಜೀವನ ಸೌಭಾಗ್ಯವನ್ನು ಬಿಕ್ಕೆ ಬೇಡುವಷ್ಟು ಮಾಲತಿ ಕಂಗಾಲಾಗಿರಲಿಲ್ಲ ಒಂದು ವೇಳೆ ಸಂಧಿಯೇ ಆಗಬೇಕಿದ್ದರೆ, ಅದು ಕೇಶವನ ಕೊಟಡಿಯಲ್ಲಿ ಅಲ್ಲ, ನಡುವೆ ಮತ್ತೆಲ್ಲಿಯೂ ಅಲ್ಲ, ಆದರೆ ಮಾಲತಿಯ ಕೊಟಡಿಯಲ್ಲೇ ಹೀಗೆ ಯೋಚಿಸಿಕೊಂಡು ನುಡಿದಳು "ನಾನು ಏನು ಹೇಳಬೇಕೆಂದು ಬಂದಿರುವನೋ, ಅದನ್ನು ಕೇಳು ಕೇಶವಣ್ಣಾ"

"ಏನದು ಹೇಳು ?" ವ್ಯಗ್ರತೆಯಿಂದ ಅಡಿದಳು

ತುಸು ವೇಳೆ ಸುಮ್ಮನಿದ್ದು ಮಾಲತಿ ಅಂದಳು "ನಿನ್ನಲ್ಲಿ ಕ್ಷಮೆ ಯಾಚಿಸಬಂದಿದ್ದೇನೆ, ಹಾಗು ನಿನಗೆ ತೋರಿಸ ಬಂದಿದ್ದೇನೆ, ನೀನು ಹೇಳಿದ್ದು ಒಂದು ಸಾರೆ ನಿಷ್ಫಲವಾಯಿತು, ಆದರ ಹೀಗೇನೂ ತಿಳಿಯದಿರು. ಪುನಃ ಪುನಃ ಅದರಂತೆ ಆಗುವದೆಂದು. ಇನ್ನೆಂದೂ ನೀನು ನನ್ನಲ್ಲಿ ಅಸಂಯಮವನ್ನು ಕಾಣಲಾರಿ"

"ಎಂದೂ ಇಲ್ಲವೇ ?"

"ಊಹುಂ"

"ಅದು ಸರಿಯೇ ?"

"ಸರಿ!"

ಎಷ್ಟೋ ಬಲವಾಗಿ ಕೇಶವ ಆಶ್ವಾಸನ ತೆಗೆದುಕೊಳ್ಳಲಿ, ಆದರಿಂದ ಅವನ ಮುಖವೇನೂ ಉಜ್ವಲವಾಗದೇ ಕಳೆಗುಂದಲಾರಂಭಿಸಿತು ಅಸಂಯಮವೇ ಅವನಲ್ಲಿ ಹುಟ್ಟಿ ಹೊಸ ಆಶಯ ಬಾಗಿಲು ತೆರೆಯುವ ಉಪಕ್ರಮ ಮಾಡಲು ಸಮರ್ಥವಾಗಿತ್ತು. ಹೀಗಾಗಿ ಆಕೆಯ ಮಾತಿನಿಂದ ಅವನು ಹಿಗ್ಗಲಿಲ್ಲ ಆದರೂ ಕೇಶವ ಅಂದ "ಸರಿಯಾಯಿತಷ್ಟೇ ಸರಿ–ಸರಿ! ನಾನು ಮನಃಪೂರ್ವಕ ಆಶೀರ್ವದಿಸುತ್ತೇನೆ ಈ ಸಂಯಮವು ಬಹು ಕಾಲ ಸಿಸಗಿದ್ದು ನಿನ್ನನ್ನು ಸನ್ಮಾರ್ಗಕ್ಕೊಯ್ಯಲಿ ನಿನ್ನ ಕಾಲಿಗೆ ಎಂದೂ ಕಲ್ಲು—ಮುಳ್ಳು ಚುಚ್ಚದಿರಲಿ"

"ಹಾಗಾದರೆ ಹೊರಟೆ" ಎಂದವಳೇ ಮಾಲತಿ ಎದ್ದು ಹೊರಡಲನುವಾದಳು ಅವಳ ಕಣ್ಣು ಆದ್ರವಾಗಿದ್ದವು ಹೊರಗೆ ಬಂದು ಸೆರಗಿನಿಂದ ಅವುಗಳನ್ನು ಒರೆಸಿಕೊಂಡಳು ತನ್ನ ಕೊಟಡಿಗೆ ಬಂದು ಹಾಸಿಗೆ ಮೇಲುರುಳಿ ತಲೆದಿಂಬಿನಲ್ಲಿ ಮೊಗವಿಟ್ಟು ಅದನ್ನು ತೋಯಿಸಹತ್ತಿದಳು

ಕೇಶವನ ಹೃದಯ ವಿಹ್ವಲವಾಯಿತು ಒಂದು ಸಾರೆ ತನ್ನಲ್ಲಿಯೇ ಅಂದುಕೊಂಡು "ಕ್ಷಮೆ ಕೇಳಿ ಹೋಗು ಮಾಲತೀ." ಆದರ ಬಾಯಿಂದ ಏನೂ ಉಚ್ಚರಿಸಲಿಲ್ಲ. ಎಷ್ಟೋ ವೇಳೆ ಅವನು ಸುಮ್ಮನೇ ಕುಳಿತ. ಪುನಃ ಎದ್ದು ಹೊರಬಂದ ಮೆಲ್ಲನೆ ಮಾಲತಿಯ ಕೊಟಡಿ ಬಳಿ ಬಂದು ನಿಂತುಕೊಂಡುಬಿಟ್ಟ ಯೋಚಿಸಿದನಂತರ ಬಾಗಿಲು ತಟ್ಟುವಾ ಛೀಃ ಏನು ವಿಚಾರ ತಿರುಗಿ ಬಂದು ರಾತ್ರಿಯನ್ನು ಹೊರಳಾಡುತ್ತಲೇ ಕಳೆದ.

## (೨೫)

ತನ್ನ ಕೊಟಡಿಯಲ್ಲಿ ಕುಳಿತು ಕೇಶವನು ಅನಂತನೊಡನೇ ಏನೋ ಮಾತಾಡುತಿದ್ದಾನೆ ಇಷ್ಟರಲ್ಲಿ ಕಲ್ಲೂ ಬಂದು ಹೇಳಿದನು "ಚಿಕ್ಕಣ್ಣವರೇ ಅಮ್ಮಾ ಅವರು ನಿಮ್ಮನ್ನು ಕರೆಯುತ್ತಾರೆ."

ಕೇಶವನು ಎದ್ದು ಬಂದು ಮಾಲತಿಯ ಕೊಟಡಿಯಲ್ಲಿ ರಾಮುಕಲಿಯನ್ನು ಕಂಡನು "ಏನು ಅತ್ತಿಗೆ ?"

ರಾಮುಕಲಿ ಮಾಲತಿಯ ಪೆಟ್ಟಿಗೆ ತೆರೆದು ಅರಿವೆಯ ಒಂದು ರಾಶಿಯನ್ನು

ಮುಂದೆ ಹಾಕಿಕೊಂಡು ಕುಳಿತಿದ್ದಾಳೆ ಆಕೆಯ ಮೊಗ ನೋಡಿ ಉದ್ವೇಗ ದಿಂದ ಕೇಶವ ಕೇಳಿದನು. "ಏನದು ಅತ್ತಿಗೆ ?"

ಒಂದು ಅರಿವೆಯನ್ನು ಎತ್ತಿ ಹಿಡಿದು ರಾಮಕಲಿ ನುಡಿದಳು "ನೋಡಿ"

ಕೇಶವ ನೋಡುತ್ತಾನೆ–ಅವನ ಹಳೇ ಮಖಮಲಿನ ಚಪ್ಪಲಿ ವಿಸ್ಮಿತ ನಾಗಿ ನುಡಿದ "ಇವು ನನ್ನ ಹಳೇ ಚಪ್ಪಲಿ"

ಬಾಯಾರಿದ ರಾಮಕಲಿ ಅಂದಳು "ಮಾಲತಿಯ ಪೆಟ್ಟಿಗೆ ಸ್ವಚ್ಛ ಮಾಡುತ್ತಿದ್ದೆ ಒಳಗೆ ಅವು"

ಕೇಳಿ ಕೇಶವ ಸ್ತಂಭಿತನಾದನು ಮಾತು ಬರಲೇ ಇಲ್ಲ ಯಾವುದೋ ಕಠೋರ ಆಘಾತದಿಂದ ಹೇಗೋ ಬಿಡುಗಡೆಯಾಗಬೇಕೆಂದು ಯತ್ನಿಸತೊಡಗಿದನು ಕೊನೆಗೆ ಜೀವನ–ಪ್ರವಾಹವನ್ನು ಉಸುಕಿನ ಕಡೆ ಹರಿಸಿ ನಿಲ್ಲಿಸಿಬಿಡಲು ಯತ್ನಿಸಿದ ಇದನ್ನು ತಿಳಿದು ಗಾಸಿಗೊಂಡ.

"ನೋಡಿದಿರಾ ?"

ಕೇಶವ ಮಾತಿಲ್ಲದೇ ತನ್ನ ಕಾತರದೃಷ್ಟಿಯನ್ನು ರಾಮಕಲಿಯ ಕಡೆಗೆ ತಿರುಗಿಸಿದನು

"ನಿಮಗೇನೋ ಇದು ಅರ್ಥವಾಗಿದ್ದೀತು ನಿಮ್ಮನ್ನು ಬಿಟ್ಟರೆ ಇನ್ನಾರಿಗೂ ಇದು ತಿಳಿಯಲಾರದು ಎಲ್ಲಿ ಈ ಪೆಟ್ಟಿಗೆ ತೆರೆದರೆ ಪುರುಷರ ಕಾಲಜೋಡು, ಹೊರಬೀಳುವದೆಂದರೆ ಏನು ಮಾತು ? ತಿಳಿಯಲಾರದು"

"ನೀನು ಅಂಜಬೇಡ ಅತ್ತಿಗೆ ನಾನು ಈಗಲೇ ಸರಿಪಡಿಸುತ್ತೇನೆ ಮಾಲತಿ ಎಲ್ಲಿದ್ದಾಳೆ ?

"ರಾಜರಾಣಿಯ ಜೊತೆಗೆ ಇಷ್ಟರಲ್ಲಿ ಬಂದಾಳು"

"ಒಳ್ಳೇದು ಇಲ್ಲಿ ಆಕೆ ಬಂದ ಕೂಡಲೇ ನನಗೆ ತಿಳಿಸು ನಾನು ಅಣ್ಣನ ಸಂಗಡ ಕೆಲವು ಮಾತಾಡಬೇಕಾಗಿದೆ ನೀನು ಎಷ್ಟೂ ಅಂಜಬೇಡ ಅತ್ತಿಗೆ ನಾನು ಎಲ್ಲಾ ಸರಿಮಾಡಿಬಿಡುತ್ತೇನೆ"

ನಂತರ ಕೇಶವನು ಪುನಃ ಅನಂತನ ಬಳಿಗೆ ಬಂದನು. ಅನಂತನೂ ಅವನೂ ಮಾತಾಡುತ್ತಿದ್ದರು. "ಪಕ್ವಾನ್ನ ಮಾಡಿಕೊಡುವ ಭಾರವನ್ನೆಲ್ಲ ಗುಪ್ತಾಬ್ರದರ್ಸಿನವರಿಗೆ ಕೊಟ್ಟುಬಿಡೋಣ ಅವರು ಉಪಹಾರದ

ಸ್ಥವನ್ನೆಯನ್ನು ನೋಡಿಕೊಳ್ಳುವರು ಪೂರಿ ಮಾಡಲಿಕ್ಕೆ ರಾಮೂ
ಮಾಮಾನಿಗ ಹೇಳುವಾ ಏನೋ ಹಳೇ ಮನುಷ್ಯ ಎಲ್ಲರಿಗೂ ಗುರುತಿಸವ
ಆದರ ಸತ್ಕಾರ ಮಾಡಲಿಕ್ಕೆ ಕೃಷ್ಣಚಂದ್ರನಿದ್ದಾನೆ "

ಬಹುಶಃ ಕೇಶವ ಇನ್ನೂ ಏನೋ ಹೇಳುವವನಿದ್ದ, ಅನಂತನು ನಡುವೇ ಮಾತಾಡಿದನು "ಇದೆಲ್ಲಾ ಆಗೇ ಆಗುವದು ಆದರೆ ಅಕ್ಕಸಾಲಿ ಏನಂದ ಹೇಳು ಆಭರಣ ಆದವೋ, ಇಲ್ಲವೋ? ಸಮಯದಲ್ಲಿ ಏನಾದರೂ ಗೊಂದಲವಾದೀತು "

"ಏನೂ ಇಲ್ಲ ನಾನು ಈಗಲೇ ಹೋಗಿ ನೋಡಿಬರುತ್ತೇನೆ ಆದರೆ ವಜ್ರದ ಆಭರಣ ಮಾಡಲಿಕ್ಕೆ ವೇಳೆ ಹಿಡಿಯಬಹುದು ಕೊಟ್ಟಿದ್ದೂ ತಡವೇ ಆಯಿತು ಆದರೆ–ಲಗ್ನದ ವೇಳೆಗೆ ಕೊಟ್ಟಾನು '

"ಹಾಗಲ್ಲ ಮೊದಲು ದಿವಸವೇ ಕೊಡಲಿಕ್ಕೆ ಅವನಿಗೆ ಹೇಳು ಹೆಂಗಸರ ವಸ್ತ್ರಗಳು ಅವು ಚನ್ನಾಗದಿದ್ದರೆ ಸುಧಾರಿಸಲಿಕ್ಕೂ ಸಮಯ ವಿರಬೇಕು ''

"ಒಳ್ಳೇದು ಹೇಳುತ್ತೇನೆ "

ಇಷ್ಟರಲ್ಲಿ ಪುನಃ ಕಲ್ಲೂ ಬಂದು ಹೇಳಿದನು "ಚಿಕ್ಕಣ್ಣವರೇ ನಡೆಯಿರಿ ಅಮ್ಮಾವರು ಕರೆಯುತ್ತಾರೆ ''

ಇದೊಳ್ಳೇ ತಮಾಷೆ ನಡೆದಹಾಗಿದೆ " ಮೋರೆ ಕಿವುಚಿ ನುಡಿದನು ಏನೂ ಕೆಲಸವಾಗಗೊಡುವುದಿಲ್ಲ ಒಮ್ಮೆ ಮುಗಿಸಬೇಕು ಬಹಳ ಕೆಲಸಗಳಿವ

"ಈಗ ಬಂದೆ " ಎನ್ನುತ್ತ ಕೇಶವ ನಡೆದನು

ಮಾಲತಿಯ ಕೋಣೆಗೆ ಬಂದನು ಮಾಲತಿ ಒಂದು ಆರಾಮ ಕುರ್ಚಿಯಲ್ಲಿ ಅನ್ಯ ಮನಸ್ಕಳಾಗಿ ಕುಳಿತಿದ್ದಾಳೆ ಕೇಶವನ ಕೂಗಿನಿಂದ ಎದ್ದು ನಿಂತಳು

"ಮಾಲತೀ "

ಅನುತ್ಸುಕಳಾಗಿ ನುಡಿದಳು. "ಯಾಕೆ ?"

"ನಿನ್ನಲ್ಲಿ ಒಂದು ಮಾತು ತಿಳಿಯಲು ಬಂದಿದ್ದೇನೆ ಸರಿಯಾಗಿ ಹೇಳುವೆಯಾ?"

"ಅದೇನು ಕೇಳು."

''ಮಕ್ಕಳ ನೀತಿ–ಪುಸ್ತಕ ಓದಿದ್ದೀಯಾ?''

''ಹುಂ''

''ಬೇರೆಯವರ ವಸ್ತು ಹೇಳದೆ ತಕ್ಕೊಂಡರೆ ಏನು ಅನ್ನುತ್ತಾರೆ''

ಮಾಲತಿ ಏನೂ ಹೇಳಲಿಲ್ಲ. ಬೇರೆ ಕಡೆಗೆ ನೋಡತೊಡಗಿದಳು. ಕೇಶವನ ಈ ಹಳೆಯ ಸ್ನೇಹ–ವ್ಯಂಜಕ ಕಥೋಪಕಥನ ಶೈಲಿಯಿಂದ ಆಕೆಯ ಕಂಗಳು ನೀರು ತುಂಬಿದವು.

''ಹೇಳು ಅದಕ್ಕೆ ಏನೆನ್ನುತ್ತಾರೆ?''

ತಡೆ ತಡೆದು ಹೇಳಿದಳು ಮಾಲತಿ ''ಕಳವು''

ಕೇಶವನ ತುಟಿಗಳಲ್ಲಿ ಕ್ಷೀಣವಾದುದೊಂದು ನಗೆ ಮಿನುಗಿತು ಅದರ ಹಿಂದೇ–ಕಂಗಳ ಮೂಲೆಯಲ್ಲಿ ನೀರ ಹನಿ ಕಾಣಿಸಿದವು.

'ಬೇರೆಯವರ ಚಪ್ಪಲಿ ಹೇಳದೇ ತೆಗೆದುಕೊಂಡರೆ ಏನಾಗುವದು?''

ಈಸಲ ಮಾಲತಿ ಉತ್ತರಿಸಲಿಲ್ಲ ಸ್ಥಿರವಾಗಿ ನಿಂತುಬಿಟ್ಟಳು ಬರಿ ಮೇಲು ದುಟಿ ಏನೋ ಅಲುಗಿತು ಯಾತಕ್ಕೋ ಯಾರು ಬಲ್ಲರು?''

ಕೇಶವ ತುಸು ಹೊರಳಿ ಮಾಲತಿ ಕಣ್ಣೆದುರಿಗೇ ಬಂದು ನಿಂತು ''ಹೇಳು ಮಾಲತೀ ಹೇಳದೇ ತಕ್ಕೊಂಡರೆ ಏನಾಗುವದು?''

ಕೇಶವನ ಮೊಗದ ಮೇಲೆ ಸ್ಥಿರಪ್ರಶಾಂತ ದಿಟ್ಟಿಯನ್ನಿಟ್ಟು ದೃಢಸ್ವರ ದಿಂದಾಡಿದಳು ಮಾಲತಿ ''ಚಪ್ಪಲಿ ತಿರುಗಿ ಪಡೆಯಬಿಚ್ಛಿಸುವೆಯಾ?''

''ಹೌದು ಅವು ನನಗೆ ಒಳ್ಳೇ ಪ್ರೀತಿಯವು. ಜೋಪಾನವಾಗಿಡ ಬೇಕು. ಆದರೆ ಈಗೇನೂ ಮೆಟ್ಟುವದಿಲ್ಲ''

''ಯಾಕೆ?''

''ಕಾಲಿನಲ್ಲಿ ಹಾಕುವಷ್ಟು ಈಗ ಅವು ಕಡಿಮೆ ಬೆಲೆಯವಲ್ಲ''

''ಒಳ್ಳೇದು ಈಗಲೇ ನಾನು ತಿರುಗಿ ಕೊಡುತ್ತೇನೆ ಆದರ ಒಂದು ಮಾತು ಕೇಳುತ್ತೇನೆ. ಏನು ನನ್ನ ಮನಸ್ಸನ್ನು ನೀನು ಇಲ್ಲಿಯೇ ಹಿಡಿದು ನಿಲ್ಲಿಸುವೆನೆಂದು ಯೋಚಿಸಿಕೊಂಡಿದ್ದೀಯಾ?''

''ಇಲ್ಲ ಆ ಯೋಚನೆ ಏನೂ ಇಲ್ಲ ಮನಸ್ಸು ದೇಹದ ಸಂಗಡವೇ ಇರಬೇಕಾದ್ದು.''

'ಹಾಗಿದ್ದರೆ ಅತ್ತೆ ಮನೆಯಲ್ಲಿ ನನ್ನನ್ನು ಹೇಗೆ ತಡೆಯುತ್ತೀರಿ ನೀವು.

ತಿಳಿ. ನಾನು ಬೆಳಗಿನಲ್ಲಿ ಎದ್ದು ಎಲ್ಲಾ ಕೆಲಸ ಬಿಟ್ಟು ನಿನ್ನ ಹೆಸರನ್ನು ನೂರಾಎಂಟು ಸಲ ಬರಯುತ್ತೇನೆ. ಆಗ ಏನಾಗುವದು? ದಿನಾಲು ಒಂದು ಆ ಕಾಗದ ತಕ್ಕೊಂಡು ಬರುತ್ತೀಯಾ? ಅಥವಾ ದೌತಿ, ಲೇಖನಿ, ಕಾಗದ ತರುವಿಯೋ? ಏನು ಮಾಡುವ? ಹೇಳು."

ಮಾಲತಿಯ ಈ ಮಾತಿನಿಂದ ಕೇಶವನ ಮುಖ ಒಮ್ಮೆಲೇ ಕಳೆಗುಂದಿ ಹೋಯಿತು. ರಾಮಕಲಿಯ ಮುಂದೆ ದೊಡ್ಡ ಮಾತಾಡಿದ್ದ. ಆದರ ಔಷಧ ನಿರುಪಯುಕ್ತವಾದುದನ್ನರಿಸಿ ಅವನು ಹತಬದ್ಧನಾದನು. ಇಂಥ ಅದ್ಭುತ ಮಾತಿಗೆ ಅವನು ಏನೆಂದು ಉತ್ತರಿಸಬೇಕು? ತಿಳಿಯದಾಗಿ ಬಿರಿಬಿರಿ ಕಣ್ಣು ಬಿಡುತ್ತ ಸುಮ್ಮನೇ ನೋಡುತ್ತ ನಿಂತುಕೊಂಡನು.

ಕೇಶವ ಕೈಯ್ಯೂರಿದ್ದು ನೋಡಿ ಮಾಲತಿ ಮೊಗದಲ್ಲಿ ಆತ್ಮ-ಪ್ರಸನ್ನತೆಯ ನಿಷ್ಕರ ಹಾಸ್ಯವೊಂದು ತಲೆದೋರಿತು.

'ಹೇಳಿಬಿಡಲ್ಲ ಕೇಶವಣ್ಣಾ. ಅಲ್ಲಿ ನೀನೇನು ನಿರ್ಬಂಧ ಮಾಡುವಿ?'

'ಅದನ್ನು ನಾನು ತಿಳಿಯಲಾರ. ಆದರ ನಿನಗಿದೊಂದು ಆಜ್ಞೆ. ನೀನು ಇದೆಲ್ಲ ಹುಡುಗಾಟ ಮಾಡಬಾರದು ತಿಳಿಯಿತೇ?''

ನಗುತಲೇ ಮಾಲತಿ ಹೇಳಿದಳು 'ಇಲ್ಲ ಸರಿಯಾಗಿ ತಿಳಿಯಲಿಲ್ಲ. ನನ್ನ ಮೇಲಿನ ಎಲ್ಲಾ ಅಧಿಕಾರ ಬಿಟ್ಟುಕೊಟ್ಟಮೇಲೆ, ಮತ್ತಾವ ಅಧಿಕಾರ ಬಲದಿಂದ ನನ್ನನ್ನು ಆಜ್ಞಾಪಿಸುವಿ?"

''ಆತ್ಮೀಯತೆಯ ಅಧಿಕಾರದಿಂದ''

''ಆದರೆ ನಿನ್ನ ಸಂಗಡ ಅದು ನನಗೆಷ್ಟು ಸಾಮಾನ್ಯವಾಗಿದೆ ಬಲ್ಲೆಯಾ?

ನಾನು ನಿನ್ನ ಅತ್ತಿಗೆಯ ತಂಗಿ, ಅಥವಾ ನಿಮ್ಮಣ್ಣನ ನಾದಿನಿ. ಬಹಳವೆಂದರೆ ನಿನ್ನ ಮಿತ್ರನ ..." ಮಾಲತಿ ಕಂಠ ಬಿಗಿದು ಬಂತು. ಹೇಗೋ ಆ ಕಣ್ಣೀರು ತಡೆದುಬಿಟ್ಟಳು.

ಕೇಶವನ ಹೃದಯವನ್ನು ಯಾರೋ ಇಬ್ಬಗೆಯಾಗಿ ಗಾಸಿ ಮಾಡುತ್ತಿರುವಂತೆ ಕಾಣಿಸಿತು. ಆದರೂ ಮನಸ್ಸನ್ನು ನಿಗ್ರಹಿಸಿ ನುಡಿದ 'ಹೋಗಲಿ ಅದನ್ನು ಬಿಡು. ಆದರೆ ನಿನ್ನಲ್ಲಿ ತುಸು ನ್ಯಾಯ, ಅನ್ಯಾಯ, ಪಾಪ, ಪುಣ್ಯ ವಿಚಾರಗಳುಂಟೋ? ಅಭಿಮಾನ, ಮಾನ ಮರ್ಯಾದೆ ಉಳಿದಿಲ್ಲವೇ?

ಮಾಲತಿಯ ಮುಖದಲ್ಲಿ ತಿರಸ್ಕಾರ ಮಿಶ್ರಿತ ಯಾತನಾ ಚಿಹ್ನೆಗಳು ತೋರಿಬಂದವು ಆಕೆ ದೃಢ ಆದರೂ ವಿದ್ರೂಪ ಸ್ವರದಿಂದ ಉಗ್ಗಡಿಸಿದಳು. "ಬಹುಶಃ ಉಳಿದಿಲ್ಲ. ಏನಾದರೇನು, ನಾನು ಬೇರೆ ಮನೆಗೆ ಹೋಗುವಾಕೆ ಬಿಡು."

"ಛಿಃ ಮಾಲತಿ, ಹೀಗೇಕೆ ಕಾಡುತಿರುವೆ?"

"ನಾನೆಲ್ಲ ತಿಳಿಯುತ್ತೇನೆ ಕೇಶವಣ್ಣಾ. ನೀನು ನನ್ನ ಮುಂದೆ ಒಳಸಂತ ವ್ಯಾಖ್ಯಾನ ಕೊಡುತಿರುವೆ. ನಾನೇನು ಮಾಡಲಿ? ನಾನು ಸುಮ್ಮನೇ ಇದ್ದೇನೆ. ಮಾತಾಡುವುದು ನನಗೆ ಇಷ್ಟವಿಲ್ಲ. ನೀನು ಪುನಃ ಪುನಃ ಒಂದು ಮಾತಿಗಾರಂಭಿಸಿ, ನನ್ನಿಂದ ಮಾತು ಹೊರಡಿಸುತ್ತೀಯೆ."

ಕೇಶವ ಅವಾಕ್ಕಾದನು. ಮೆಲ್ಲನೆ ಮಾತಾಡತೊಡಗಿದನು. "ನಿನ್ನಲ್ಲಿ ನನ್ನದೊಂದು ಪ್ರಾರ್ಥನೆ ಮಾಲತೀ! ನನ್ನಿಂದ ನೀನು ಏನಾದರೂ ಒಳಿತು ಕಲಿತಿದ್ದರೆ, ನಾನು ಉಪದೇಶಕನೆಂದು ತುಸುವಾದರೂ ಶ್ರದ್ಧೆ ಇಟ್ಟಿದ್ದರೆ, ಇಂದು ಈ ದಿನ ನನಗೆ ಅದರ ದಕ್ಷಿಣೆ ಮುಟ್ಟಿಸು. ಇವನೊಬ್ಬ ಹಿರಿಯ ಅಧಿಕಾರಿ ಎಂದು ಬೇಡ. ದೀನಭಿಕ್ಷುಕನೆಂದು ಕೊಡು."

"ಅದೇನದು?"

"ನನಗೆ ಒರಿ ಒಂದು ಆಶ್ವಾಸನ ಕೊಡು. ಭವಿಷ್ಯ ಕಾಲದಲ್ಲಿ ನಾನು ನನ್ನನ್ನೂ ಮತ್ತು ನನ್ನ ಸ್ಥಿತಿಯನ್ನು ಚನ್ನಾಗಿ ಲಕ್ಷಿಸುತ್ತೇನೆ ಮತ್ತೆ ಇದನ್ನು ಎಂದೂ ಮರೆಯುವದಿಲ್ಲ ಮಾಲತೀ. ನೀನೊಬ್ಬ ಸಭ್ಯ ಮನೆತನಸ್ಥರ ಹೆಣ್ಣು ಮಗಳು. ವಂಶ ಪರಂಪರೆಯಾಗಿ ಮತ್ತು ಗೃಹ ಶಿಕ್ಷಣದಿಂದ ಯಾವ ಸಂಸ್ಕಾರ ನಿನ್ನಲ್ಲಿ ಅಳವಡಿದಿರುವವೋ, ಅವು ಈಗ ನಿನ್ನ ದೇಹವೇ ಆಗಿ ಹೋಗಿರುವವೋ, ಅವುಗಳನ್ನು ಎಲ್ಲಾ ರೀತಿಯಿಂದ ರಕ್ಷಿಸುವದು ನಿನ್ನ ಶ್ರೇಷ್ಠ ಧರ್ಮ."

ಆದರೆ ಈ ಸಲ ಮಾಲತಿಯ ಶಾಂತ ಮೂರ್ತಿ ಮಾರ್ಪಟ್ಟಿತು. ಆಕೆ ಕ್ರುದ್ಧ ಸರ್ಪಿಣಿಯಂತೆ ಫೂತ್ಕರಿಸಿದಳು. ಕಂಗಳಿಂದ ಕಿಡಿಗಳುದುರತೊಡಗಿದವು. ಮುದ್ದಿನ ಸಂಗ್ರಹಕ್ಕೆ ಕೇಶವ ಬತ್ತಿ ಹಚ್ಚಿಬಿಟ್ಟನು.

"ನಾನು ಅಷ್ಟೇನೂ ಕೀಳಲ್ಲ. ನಿನಗೆ ಈ ಆಶ್ವಾಸನ ಕೊಟ್ಟು ನನ್ನನ್ನು ಅಪಮಾನಗೊಳಿಸಿಕೊಳ್ಳಲಾರೆ. ನೀನು ನನ್ನನ್ನು ಕಲ್ಪಿಸಿದುದಕ್ಕಿಂತ ನಾನು

ಮೇಲ್ಮಟ್ಟದಾಕೆ ಕ್ಷಮಿಸು ಕೇಶವಣ್ಣಾ. ಹೆಚ್ಚು ದೇವತ್ವ ಪ್ರಕಟಿಸಬೇಡ ಇಷ್ಟು ಅಹಂಕಾರ ನಡೆಯದು ಒಂದು ದಿನ ಇದು ನುಚ್ಚು ನೂರಾಗಿ ಹೋಗಬಲ್ಲದು.''

''ನಾನು ದೇವತಾ, ಎಂಬುದನ್ನು ಯಾರು ಹೇಳಿದರು ಮಾಲತೀ?''

'ನೀನೋ? ನೀನೇ ಹೇಳುವೆಯಲ್ಲ' ನಾನು ಸಾಧು, ನಾನು ಋಷಿ ನಾನು ದೇವತಾ! ಸ್ವರ್ಗದ ದೇವರಿಗಿಂತ ಮೇಲಾಗಿದ್ದೀಯೆ ಓರ್ವ ಅಭಾಗಿನಿಯ ವಿಷಯ ಮನಗಂಡು ಭಗವಂತನಿಗೆ ನನ್ನ ಪ್ರಾರ್ಥನೆ ಇಷ್ಟೇ ಏನೆಂದರೆ– ನನ್ನ ಕೂಡಲೇ ನಿನ್ನ ದೇವತ್ವ ನಿಃಶೇಷವಾಗಲಿ ನೀನು ಮನುಷ್ಯನಾಗು ಎಂದರೆ ನಿನ್ನ ದೇವತ್ವ ಪಾಪ ಆಕೆಯನ್ನು ಕಾಡದಿರಲಿ''

''ಅವಳಾರು ಮಾಲತೀ''

''ನಾನೇನು ಬಲ್ಲೆ?—ಮತ್ತು ನಾನು ಅಸಮರ್ಥಳಣ್ಣಾ—ದಯ ಮಾಡಿ ನನ್ನನ್ನು ಬಿಟ್ಟುಬಿಡು ನಿನ್ನ ಮುಖಮಲಿನ ಚಪ್ಪಲಿ–ನಿನ್ನ ಕೊಟ ಡಿಗೆ ಕಳಿಸುತ್ತೇನ ಅವುಗಳ ಮೇಲೇನೂ ನನ್ನ ಮಮತೆ ಉಳಿದಿಲ್ಲ''

ಕೇಶವನ ಬಾಯಿಂದ ಒಂದೂ ಶಬ್ದ ಬರಲಿಲ್ಲ ತನ್ನೊಳಗೇ ಮಾಲತಿಗೆ ಮಾಂಗಲ್ಯ ಕೋರಿ ಮೆಲ್ಲನ ಕೊಟಡಿಯಿಂದ ಹೊರಟು ನಡೆದನು

## (೨೬)

ದುಲಾರಿಯ ಕೊಟಡಿಯಿಂದ ಹೊರಬಿದ್ದು ಕೃಷ್ಣಚಂದ್ರನು ಕೇಶವ ನನ್ನು ಕಾಣದೇ ಆ ದಿವಸ ಹೊರಟು ಹೋಗಿದ್ದನಷ್ಟೇ? ಮಲಗುವ ಕೊಟ ಡಿಗ ಹೋಗಿ ದೀಪ ಆರಿಸಿ ಅವನು ಸುಮ್ಮನೆ ಮಲಗಿಬಿಟ್ಟ. ಯಾವ ಪೆಟ್ಟು ತಿಂದು ಬಂದಿದ್ದನೋ, ಅದರ ನೋವಿನ್ನೂ ಎಡೆಯಲ್ಲಿತ್ತು ಮಂಟಪದ ಲ್ಲಿಯೇ ವರನ ಮೃತ್ಯು ಸಂಭವಿಸಿದರೆ ಹೇಗೋ–ಹಾಗೆ–ತುಸು ಅವನ ಹೃದ ಯದ ಸ್ಥಿತಿಯಾಗಿದ್ದಿತು ಹೊರಗಿನ್ನೂ ನಾಗಸ್ವರ ನಿಂತಿಲ್ಲ ಒಳಗೆ ಎದೆ ಕೊರೆಯುವ ಆಕ್ರೋಶ ಪ್ರಾರಂಭವಾಗಿದೆ

ಈ ಮರ್ಮ ಭೇದಿಸುವ ಅನುಭವದಲ್ಲಿ ಬರಿ ದುಃಖ ಒಂದೇ ಕೂಡಿರ ಲಿಲ್ಲ. ಏನೋ ಒಂದು ಕೀಳುತನದ ನಾಚಿಕೆ ಒಳಗೆ ಕೊರೆಯುತಿದ್ದಿತು ಯಾವಾಗ ಅವನು ದುಲಾರಿಯ ಮುಂದೆ ಸಂದೇಹರಹಿತನಾಗಿ ವಿಜಯೀ

ಪ್ರೇಮಿಯ ಸುಳ್ಳು ಅಭಿನಯ ಮಾಡಿದ್ದನೋ, ಆಗ ದು ಲಾರಿಯಲ್ಲಿ ನಿಃಸಂದೇಹವಾಗಿ ಒಂದು ಕೌತುಕ ಬೆರೆತ ಕಾರುಣ್ಯ ಜಾಗ್ರತವಾಗಿರಲೇಬೇಕು! ಆಕೆ ಸಹೃದಯಳೇ ಸರಿ ಎಂದೇ ಕೌತಕದ ಚಪಲ ಹಾಸ್ಯ ತೋರಬೇಕಾದಲ್ಲಿ ಕಾರುಣ್ಯ ವ್ಯಕ್ತವಾದದ್ದು. ಅದೇ ಕಾರುಣ್ಯ ದುಃಸಹವೆನಿಸಿ ಕೃಷ್ಣಚಂದ್ರನ ಚಿತ್ತದಲ್ಲಿ ಮಿಂಚು–ಸರಳಿನಂತೆ ಚುಚ್ಚಲಾರಂಭಿಸಿದ್ದಿತು

ಆದರೆ– ಕೆಲವು ಜೀವಿಗಳು ಹೊರಗಿನ ಆಘಾತಗಳಿಂದ ತಮ್ಮ ರಕ್ಷಣೆಯಾಗಲು, ಯಾವ ರೀತಿ ತಮ್ಮ ದುರ್ಬಲ, ಹಾಗೂ ಕೋಮಲ ಅಂಗಗಳನ್ನು ಒಂದು ಕಠೋರ ಆವರಣದ ಗರ್ಭದಲ್ಲಿ ಅಡಗಿಸಿಕೊಳ್ಳುವರೋ ಹಾಗೆ ಅವನೂ ಮಾಡಿದ ತನ್ನ ಅತಿಗೋಪನೀಯ ವೇದನಾ, ಹಾಗೂ ಲಜ್ಜಾ ಇವುಗಳ ಸುತ್ತ ವಿಚಾರ ಮತ್ತು ಸ್ವಾಭಿಮಾನದ ಒಂದು ಭದ್ರ ಜಾಲ ಹೆಣೆದು ಅವುಗಳಿಗೆ ಒಂದು ಮುಚ್ಚು ಹಾಕಿ, ಪ್ರಾಯಶಃ ಅವುಗಳನ್ನು ಅದೃಶ್ಯ ಮತ್ತು ಅಜ್ಞೇಯ ಮಾಡಿದ್ದನು ಹೀಗಿರುವುದರಿಂದ ಇವನ ಜಾಗ್ರತ ಜ್ವಾಲಾಮುಖಿ ರಾಮಕಲಿಗೆ ಗೋಚರಿಸಲಿಲ್ಲ

ರಾತ್ರಿ ಕಳೆದದ್ದು ತಳಮಳದಿಂದಲೇ ಸರಿ. ಬೆಳಗಿನಲ್ಲಿ ಎದ್ದು ಮೋರೆ ತೊಳೆದು ಕೇಶವನ ಮನೆಗೆ ಬಂದನು ಮತ್ತು ಬಾಗಿಲಿನಲ್ಲಿ ಕುಳಿತುಕೊಂಡ ಕಲ್ಲೂ ಬಂದು ಹೇಳಿದನು "ಅಣ್ಣಾ, ನಿಮ್ಮನ್ನು ಅಮ್ಮಾವರು ಕರೆಯುತ್ತಾರೆ." ಕೃಷ್ಣಚಂದ್ರ ಒಳಗೆ ಪ್ರವೇಶಿಸಿದನು

"ಏನು ಅತ್ತಿಗೆ ?"

"ನಿನ್ನನ್ನು ಕರೆಸಿಕೊಳ್ಳಬೇಕೇನೋ ಕೃಷ್ಣ"

ರಾಜರಾಣಿ ಕೇಳಿದಳು. "ನೀವು ಏಕೆ ಬರಲಿಲ್ಲ ಒಳಗೆ ?"

'ಹಾಂ ಕೃಷ್ಣ! ಭಲೆ ಬಾಗಿಲದಲ್ಲಿ ಏಕೆ ಕುಳಿತೆ, ಹೇಳು ನೋಡುವಾ'

"ವಿಶೇಷವೇನೂ ಇಲ್ಲ, ಅತ್ತಿಗೆ ಇಂದು ಹೊರಗಿನ ಕೆಲಸಗಳೇ ಬಹಳ ನಾನು ಅಣ್ಣನ ಸಂಗಡ ಕೂತಿದ್ದೆ ಬಹುಶಃ ಏನಾದರೂ ಕೆಲಸ ಹೇಳಬಹುದಾಗಿತ್ತು ಅಣ್ಣ"

ರಾಮಕಲಿ ನಗುತ್ತ ಹೇಳಿದಳು "ಕೂಲಿಗೇಡಿಗಳಿಗೆ ನಮ್ಮಲ್ಲಿ ಬೇಕಾದಷ್ಟು ಕೆಲಸ–ಬಾರಪ್ಪ"

"ಏನೇನು ?" ನಗುತ್ತಲೇ ಕೃಷ್ಣಚಂದ್ರ ಕೇಳಿದ.

"ಚೀಲ ಮತ್ತು ಬೀಗರನ್ನು ಎದುರುಗೊಳ್ಳುವ ಸಾಮಾನು ಇನ್ನೂ ಬರಲಿಲ್ಲ ಕೃಷ್ಣಾ. ನೀನು ಇವುಗಳನೆಲ್ಲಾ ಸರಿಯಾಗಿ ತರುವೆಯಷ್ಟೇ?

"ಹಾಗಾದರೆ ಯಾದಿ ಎಲ್ಲಿ? ಎಷ್ಟು ಸಾಮಾನುಗಳಿವೆ?"

"ಬಹಳೇನೂ ಇಲ್ಲ. ಇವೆ ನೂರಾ ಎಂಟು. ನೀನು ಕೂಡು ತುಸು ಉಪಹಾರ ತೆಗೆದುಕೊಂಡನಂತರ ನಾನು ಯಾದಿ ಪೂರಾ ಮಾಡಿ ಕೊಡುತ್ತೇನೆ" ಹೋಗ ಹೋಗುತ್ತ ನುಡಿದಳು "ರಾಜರಾಣಿ ನಾನು ಬರುವ ತನಕ ನೀನು ದುಲಾರಿಯನ್ನು ಕರೆದು ಕಚ್ಚಾ ಯಾದಿ ಹಾಗೂ ಸ್ಥಳಪ್ರತಿ ಎರಡನ್ನೂ ಹೋಲಿಸಿ ನೋಡುತ್ತಿರು"

ರಾಜರಾಣಿ ದುಲಾರಿಯರು ಯಾದಿ ನೋಡುತ್ತ ಕುಳಿತರು. ಇಷ್ಟರಲ್ಲಿ ಕಲ್ಲೂ ರಾಜರಾಣಿಯನ್ನು ಕರೆಯಬಂದನು 'ಅವ್ವಾ ಅಣ್ಣ ಕರೆಯುತ್ತಾರೆ' ರಾಜರಾಣಿ ಎದ್ದು ಅನಂತನ ಒಳಗ ನಡೆದಳು ಹೋಗುವಾಗ ಹೇಳಿದಳು "ದುಲಾರೀ, ನೀನು ಕೃಷ್ಣರೂ ಕೂಡಿ ಆ ಯಾದೀ ಕೆಲಸ ಮುಗಿಸಬೇಕು.'

ಇವರಿಬ್ಬರೇ ಅಲ್ಲಿ ಉಳಿಯುವರೆಂದು ಯಾರೂ ತಿಳಿದಿರಲಿಲ್ಲ ಆದರೆ ಪ್ರಸಂಗ ಒಂದೊದಗಿದುದರಿಂದ ಕೃಷ್ಣಚಂದ್ರ—ದುಲಾರಿ ಮುದುರಿಕೊಂಡು ಹೋದರು ಮಾತಾಡದೇ ಈ ಪ್ರಸಂಗವನ್ನು ಇನ್ನೂ ಬೆಳೆಸುವದಕ್ಕಿಂತ ಕಚ್ಚಾ ಯಾದಿ ತೆಗೆದುಕೊಂಡು ಕೃಷ್ಣಚಂದ್ರ ನುಡಿದನು ನೀವು ಅದನ್ನು ನೋಡಿ ಓದಿರಿ ನಾನು ಪೆನ್ಸಿಲಿನಿಂದ ಇದರಲ್ಲಿ ಗುರುತು ಹಾಕುತ್ತೇನೆ"

ದುಲಾರಿಯ ಸಂಕಟ ದೂರಾಯಿತು ಆಕೆ ಓದ ತೊಡಗಿದಳು 'ಒಳ್ಳೇ ಗುಲಾಬ ಪಾಣಿ, ನಾಲ್ಕು ಶೀಸೆ."

"ಅಷ್ಟು ಗುಲಾಬ ಪಾಣಿಯೇ? ಈ ಲಗ್ನ ಮಾಸದಲ್ಲ ಏನು ಬೆಲೆ ಯಾದೀತು? ಒಳ್ಳೇದು ಸಾಗಲಿ"

"ಲವೆಂಡರ ಓಟೋ ಒಂದು ಶೀಸೆ"

"ಹುಂ"

"ಅತ್ತರು ಹೀನಾ ಎರಡು ಶೀಸೆ."

"ಒಳ್ಳೇದು"

"ಫೇಸ ಪೌಡರು ಎರಡು ಡಬ್ಬಿ ಮೂರು ತರದ್ದು"

"ಹು"

"ಹೇಜಲೀನ . "

ನಡುವೇ ತಡೆದು ಕೃಷ್ಣಚಂದ್ರ ನುಡಿದನು "ನಿಲ್ಲಿ ಒಂದು ಮಾತು ಕೇಳಿರಿ ನೋಡಿ, ಮರೆಯುವದು ಮೊದಲು ಅನುಚಿತ ಮರೆತನಂತರ ತಿದ್ದಿಕೊಳ್ಳದಿರುವದು ಇನ್ನಷ್ಟು ಅನುಚಿತ ಆ ದಿನಸ ಪ್ರಮಾದ ವಶದಿಂದ ನಾನು ನಿಮ್ಮೆದುರಿನಲ್ಲಿ ಏನೇನೋ ಮಾತಾಡಿಬಿಟ್ಟೆ ಅದಕಾಗಿ ಕ್ಷಮಿಸಿ ಬಿಡಿರಿ ಹಾಗೆ ತಪ್ಪು ಆಗಲು ಕಾರಣಗಳಿದ್ದವು ಅವುಗಳನ್ನು ಹೇಳುವ ಅವಶ್ಯವಿಲ್ಲ ಅವುಗಳನ್ನು ನೀವೂ ಮನದಲ್ಲಿ ಹಿಡಿಯಬಾರದು—ಹಾಂ—ಮತ್ತೇನು?

ತುಸು ಎಳೆದೆಳೆದು ನಡುಗುವ ದನಿಯಿಂದ ಆಡಿದಳು 'ಹೇಜಲೀನ ಸ್ನೋ-ಎರಡು ಶೀಸೆ"

"ಇನನ್ನ- ಎಂಟು ತರದ್ದು"

"ಎಂಟು ತರದ್ದು?"- ನೋಡಿ ನನ್ನ ಸಲುವಾಗಿ ನೀವೇನೂ ಚಿಂತಿಸ ಬಾರದು ನಾನು ಆ ಜಪಾನಿ ಗೊಂಬೆಯಂತಿದ್ದೇನೆ ಹೇಗಿದ್ದರೂ ಎದ್ದು ಕೂಡುವದೇ ಮಲಗಿಸಿದರೂ ಏಳುವದೇ ಮತ್ತಾರಿಗಾದರೂ ನಾನು ಇದ ನೆಲ್ಲ ಹೇಳುತ್ತಿರಲಿಲ್ಲ ನಿಮ್ಮನ್ನು ಗುರುತಿಸಿದ್ದೇನೆ ಕಾರಣ, ಹೇಳಿದೆ ನೀವು ಉಳಿದವರ ಸಲುವಾಗಿ ಚಿಂತಿಸಿಕೊಳ್ಳುತ್ತೀರಿ! ಹಾಂ—ಓದಿರಿ ಮತ್ತೇನೇನು?

ಬಣಗಿದ ಕಂಠದಿಂದೋದಿದವಳು ದುಲಾರಿ 'ಸುವಾಸಿಕ ಅಲತಿಗೆರಸ ಎರಡು ಶೀಸೆ"

"ಎರಡು ಶೀಸ? ಏನು ಮೋಜೋ, ಅಲತಿಗರಸ ಎರಡು ಶೀಸೆ ಒಂದು ಶೀಸೆ, ಕೃಪಾನಿಗೆ ಎಂದು ಕಾಣುವದು ಯಾದಿ ಎಂದರೆ ಹುಡುಗಾಟ ವಾಗಿದೆ ಹು ಮೊದಲು ಓದಿರಿ ನಂತರ ಸರಿಮಾಡುವಾ"

"ಎರಡು ದೊಡ್ಡ ಶೀಸೆ"

"ಹಣಿಗೆ, ಬ್ರಶ್- ಎರಡು ಸೆಟ್"

"ಎರಡು ಸೆಟ್? ತುಸು ನಿಲ್ಲಿರಿ ಒಂದು ಮಾತು ಹೇಳುತ್ತೇನೆ. ನಾನು ಕೇಶವನನ್ನು ಎಷ್ಟು ಪ್ರೀತಿಸುವೆನೆಂದರೆ- ನಿಮಗೆ ಗೊತ್ತಿಲ್ಲ.

ಅವಶ್ಯ ಬಿದ್ದರೆ ಪ್ರಾಣಕೊಡಲೂ ಸಹ ಹಿಂದೆಗೆಯುವದಿಲ್ಲ ಅವನ ಪ್ರೀತಿಯೂ ನನ್ನ ಮೇಲೆ ಹಾಗೇ ಕಾರಣ ನೀವು ತಿಳಿಯಬಹುದು ಕೇಶವನೊಡನೆ ನಿಮ್ಮ ವಿವಾಹವಾದರೆ ನನಗೆಷ್ಟು ಹರ್ಷ? ಆದರ ನಿಮ್ಮಲ್ಲಿ ಒಂದು ಪ್ರಾರ್ಥನೆ ವಿವಾಹದ ಮೊದಲು ಆ ದಿನದ ಮಾತು ಕೇಶವನಿಗೆ ತಿಳಿಸ ಬಾರದು ನಂತರ ಹೇಳಬಹುದು. ಒಳ್ಳೇ ಮೋಜಾಗುತ್ತದೆ ತಿಳಿದಿರಾ? ಹು ಓದಿರಿ"

ಸುಮ್ಮನಿರುವ ದುಲಾರಿಯ ಮೊಗವನ್ನು ಕೃಷ್ಣಚಂದ್ರ ನೋಡಿದ. ಇನ್ನು ಕಣ್ಣೀರು ಸುರಿಯುವದಷ್ಟು ಉಳಿದಿತ್ತು. "ನಿಮ್ಮ ಕಣ್ಣಲ್ಲೇನೋ ಬಿದ್ದಹಾಗಿದೆ ಹೊರಗೆ ಹೋಗಿ ತೊಳೆದುಕೊಂಡು ಬನ್ನಿ.

ಸರಿ ಇಷ್ಟರಲ್ಲಿ ರಾಮಕಲಿ ಉಪಹಾರದ ತಟ್ಟೆ ಹಿಡಿದು ಬಂದು ಬಿಟ್ಟಳು

## (೨೭)

ಕೃಷ್ಣಚಂದ್ರ ಬಾದಿ ಹಿಡಿದುಕೊಂಡು ಹೊರಗೆ ಹೊರಟ ಆಗ ಬಾಗಿಲಲ್ಲಿ ಕೇಶವನ ಭೆಟ್ಟಿಯಾಯಿತು ಕೇಶವನು ಕೈಹಿಡಿದು ಆಲಿಂಗಿಸುತ್ತ ನುಡಿದನು "ಏನಯ್ಯ, ರಾತ್ರಿ ಬರಲಿಲ್ಲ? ಈಗೇಕೋ ಅಪರೂಪ ವಾಗಿರುವಿ"

"ಭೆಟ್ಟಿಯಾಗಲಿಕ್ಕೆ ನಿನಗೆ ವೇಳೆ ಇದ್ದರಷ್ಟೇ?"

"ಯಾಕೆ?" ಮಾತು-ಮಾತಾಡುತ್ತ ತನ್ನ ಕೊಟಡಿಗೆ ಕರೆದೊಯ್ದನು

"ಏನೋ, ಹೀಗೆ ಬಾವೀ ಪತ್ನಿಯ ಕಲ್ಪಿತ ಮಿಲನದ ಸವಿ ಸವಿಯು ತ್ತಿರುವಾಗ ವೇಳೆಯುಂಟೇ?"

"ಎಲ್ಲಾದರೂ ಉಂಟೇ? ಏನೋ ಕೂಡಿಸಿಕೊಂಡಿದ್ದೇ ಸರಿ" ನಗುತ್ತ ಕೇಶವ ನುಡಿದನು.

"ಕೂಡಿಸಲಿಕ್ಕೇ ತಿವಾರಿಪುರದ ವರೆಗೆ ಓಡಬೇಕಾಯಿತಪ್ಪ"

"ಹು ಆದೀಗ ಕೂಡಿಬರಲಿಲ್ಲವೆಂದು ಪಶ್ಚಾತ್ತಾಪವೋ?" ಕೇಶವ ವ್ಯಂಗ್ಯವಾಗಿ ಮಾತಾಡಿದನು

"ನೀನು ನನ್ನ ಪ್ರೇಮವೆಂದರೆ ಹೀಗೆಂದು ತಿಳಿದಿರುವೆಯಾ? ಕೇಶವ, ನಿನ್ನ ಸಂಗಡ ಲಗ್ನವಾದರೆ ನನಗೆ ಪಶ್ಚಾತ್ತಾಪವೋ ?" ತುಸು ಗಂಭೀರನಾಗಿ ಕೃಷ್ಣಚಂದ್ರನೆಂದ

"ಪ್ರೇಮದ ಜೊತೆಗೆ ಈರ್ಷೆ ಹುಟ್ಟುವದು ಸಹಜ. ಮತ್ತು ಪ್ರೇಮವು ಎಷ್ಟು ದೃಢವೋ, ಅಷ್ಟೇ ಈರ್ಷಾತಲವೂ ಆಳ"

ನಗುತ್ತಲೇ ಕೃಷ್ಣಚಂದ್ರ ನುಡಿದ "ಆದರೆ ನನ್ನ ಪ್ರೇಮವು ಕ್ಷುದ್ರ ನದಿಯಂತೇನೂ ಅಲ್ಲ ನನ್ನ ಪ್ರೇಮವೆಂದರೆ ಸಮುದ್ರ, ಅದೆಷ್ಟು ಗಂಭೀರವೋ ಅಷ್ಟೇ ವಿಸ್ತೃತ"

"ಆ ಸಾಗರದಲ್ಲಿ ದುಲಾರಿಯ ಪ್ರೇಮಸ್ಪರ್ಶದಿಂದ ತರಂಗಗಳನ್ನೆಬ್ಬಿಸುವ ಸಿದ್ಧತೆಯನ್ನೂ ನಾನು ಮಾಡಿಟ್ಟಿದ್ದೇನೆ" ನಗುತ್ತ ಕೇಶವ ಹೇಳಿದನು

ಕೇಶವನ ಈ ವಿನೋದ ಕೃಷ್ಣಚಂದ್ರನಿಗೆ ರುಚಿಸಲಿಲ್ಲ ಆವನು ವಿನೋದವನ್ನು ಬಿಟ್ಟು ಗಂಭೀರನಾಗಿ ನುಡಿದನು "ಇಲ್ಲ ಕೇಶವಾ, ನೀನು ಇದೊಂದು ಅನುಚಿತ ಮಾಡುತ್ತಿರುವೆ ವಿನೋದ ಮಾಡುವದೇ ಇದ್ದರೆ ಮಾಡು ನಾನು ಬೇಡ ಎಂದು ಹೇಳುವದಿಲ್ಲ ಆದರೆ ನಡುವೆ ದುಲಾರಿಯನ್ನು ತರಬೇಡ."

"ದುಲಾರಿ ನಿನ್ನ ಪತ್ನಿಯಾಗುವಳೆಂದೋ?"

"ಛೀ, ಅದಕಾಗಿ ಅಲ್ಲ ದುಲಾರಿ ನಿನ್ನ ಪತ್ನಿಯಾಗುವಳೆಂದು ನಿಶ್ಚಯವಾಗಿಹೋಗಿದೆ"

ಹುಬ್ಬುಗಂಟಿಕ್ಕಿ ಕೇಶವ ಅಂದನು "ಏನು ನಿಶ್ಚಯವಾದದ್ದು? ನೀನು ಬಲ್ಲೆಯಾ? ಸರಿ ರಾಮನಿಲ್ಲದ ಇದೊಂದು ರಾಮಾಯಣ ಈ ನಿಜ ಸಂಗತಿ ಹೇಗೆ ತಿಳಿದೆ?"

ವಿನೋದಪೂರ್ವಕವಾಗಿ ಕೃಷ್ಣಚಂದ್ರ ನುಡಿದನು "ವಿಶ್ವಾಸಿಕರಿಂದ"

"ನಿನ್ನ ವಿಶ್ವಾಸದ ಸೂತ್ರ ಗಟ್ಟಿಯೋ? ರೇಶಿಮೆಯದೋ, ಉಣ್ಣೆಯದೋ, ಅದನ್ನು ತಿಳಿಯುವ ಅವಶ್ಯ ನನಗಿಲ್ಲ ಆದರೆ ಇಷ್ಟು ಮಾತ್ರ ನಿಜ ತಿಳಿ. ನಿನಗೆ ತಿಳಿದುಬಂದ ವಾರ್ತೆಗೆ ತಳ-ಬುಡವಿಲ್ಲ."

"ಒಳ್ಳೇ ಗಟ್ಟಿ ತಳಹದಿ ಇರುವದಣ್ಣಾ. ಅದರಲ್ಲಿ ಮೃತ್ಯುಶಯ್ಯೆಯ ಬಳಿಯಲ್ಲಾದ ಪ್ರತಿಜ್ಞೆಯ ಇಟ್ಟಿಗೆ-ಕಲ್ಲು ಇವೆ. ಓರ್ವ ಯುವತಿಯ ಪ್ರೇಮದ ತಿಳಿ ಗಚ್ಚು ಇದೆ. ಇದೆಷ್ಟು ಭದ್ರವಾಗಿರುವದೆಂದರೆ ಇದರ ಮೇಲೆ ಮಿಲನದ ಅರಮನೆಯನ್ನು ಅನಾಯಾಸ ಕಟ್ಟಬಹುದು."

ಮೃತ್ಯುಶಯ್ಯೆಯ ಬಳಿಯಲ್ಲಾದ ಪ್ರತಿಜ್ಞೆಯ ಮಾತು ಕೇಳಿ, ಕೇಶವನ ಪರಿಹಾಸ ಮುದ್ರೆಯು ಒಮ್ಮೆಲೇ ಮಾಯವಾಯಿತು. ಮೋರೆ ಇಳಿಯ ತೆಂದರೂ ಸರಿ. ಮರಣೋನ್ಮುಖನಾದ ರೋಗಿಗೆ ಸಮಾಧಾನಪಡಿಸುವ ದಕ್ಕೆಂದು, ಅವನ ಕತ್ತಲೆ ದಾರಿಯಲ್ಲಿ ಸುಳ್ಳಿನ ಯಾವ ಮಸಕು ದೀಪ ತೋರಿದ್ದನೋ, ಅದೇ ದೀಪ ಸಮಯ ದೊರತ ಕೂಡಲೇ ಸತ್ಯ ಜ್ಯೋತಿಃಪುಂಜ ವಾಗಿದೆ. ಇದನ್ನು ಯೋಚಿಸಿ ಕೇಶವ ವ್ಯಗ್ರನಾದ.

"ನಾನು ದುಲಾರಿಯೊಡನೆ ವಿವಾಹವಾಗುವೆನೆಂದು ಪ್ರತಿಜ್ಞೆ ಮಾಡಿರುವೆನೋ?"

"ನಿನ್ನ ಪ್ರತಿಜ್ಞೆ ನಿನಗೇ ಗೊತ್ತು. ಆದರೆ ಯಾವ ಪ್ರಸಂಗದಲ್ಲಿ ನಿನಗೆ ಅಂಥ ಪ್ರತಿಜ್ಞೆ ಮಾಡಬೇಕಾಯಿತೋ ಅದನ್ನು ನೋಡಲು ನನಗೆ ತುಸು ಕೂಡ ಅಸಂತೋಷವಿಲ್ಲ. ನೀನು ಸ್ವೇಚ್ಛೆಯಿಂದ ಹಾಗೆ ಮಾಡಿಲ್ಲ ವೆಂಬುದನ್ನು ನಾನು ಬಲ್ಲೆ."

"ನೀನೇನು ಬಲ್ಲೆ? ಆ ಪ್ರತಿಜ್ಞೆ ಕೇವಲ ಸ್ವೇಚ್ಛೆಯಿಂದಲೇ ನಾನು ಮಾಡಿದ್ದೇನೆ. ಯಾರ ದಾಕ್ಷಿಣ್ಯವೂ ಅದರಲ್ಲಿಲ್ಲ. ಆದರೆ ನಾನು ಮಾಡಿದು ದಾವ ಪ್ರತಿಜ್ಞೆ? ದುಲಾರಿಯೊಡನೆ ನಾನು ವಿವಾಹವಾಗುವೆನೆಂದೋ? ಛಿಃ, ಇದು ಸುಳ್ಳು. ಇದು ಅಪವಾದ. ದುಲಾರಿಯ ಭಾರ ಗ್ರಹಣ ಮಾಡು ತ್ತೇನೆ. ಇಷ್ಟು ಮಾತ್ರ ನಾನು ಹೇಳಿದ್ದು.

ತುಸು ವಿಚಾರದಿಂದ ಕೃಷ್ಣಚಂದ್ರನೆಂದನು "ಅದು ಹೇಗೂ ಇರಲಿ. ಆದರೆ ಯಾರಿಗೆ ಹಾಗೆ ಹೇಳಿದ್ದೆಯೋ, ಮತ್ತು ಯಾರ ಮುಂದೆ ಹಾಗೆ ಮಾತಾಡಿದ್ದೆಯೋ, ಎಲ್ಲರೂ ಹೀಗೇ ತಿಳಿದುಬಿಟ್ಟಿದ್ದಾರ. ನೀನು ದುಲಾರಿಯ ಸಂಗಡ ವಿವಾಹ ಮಾಡಿಕೊಳ್ಳುವ ಪ್ರತಿಜ್ಞೆ ಮಾಡಿರುವೆ. ಆಗ ಸಹ ದುಲಾರಿ ಹಾಗೇ ತಿಳಿದಳು. ಈಗ ಸಹ ಹಾಗೇ ತಿಳಿದಿರುತ್ತಾಳೆ."

"ಇನ್ನು ಮಾತ್ರ ದುಲಾರಿಯ ಆ ತಿಳುವಳಿಕೆ ನಿಲ್ಲಲಾರದು.

ಕೃಷ್ಣಚಂದ್ರನ ಕೈ ಹಿಸುಕುತ್ತ ನುಡಿದನು. "ಚಿಂತಿಸಬೇಡಣ್ಣಾ, ಮಾಲ ತಿಯ ಲಗ್ನ ಒಂದು ಮುಗಿಯಲಿ ಕೂಡಲೇ ದುಲಾರೀ-ರತ್ನವನ್ನು ನಿನಗೆ ಒಪ್ಪಿಸಿ ನಿನ್ನ ಕೊರಳಲ್ಲಿ ಕಟ್ಟುತ್ತೇನೆ"

ನಗುತ್ತ ಕೃಷ್ಣಚಂದ್ರ ಹೇಳಿದನು "ನಾನೇನೂ ಅಷ್ಟು ಚಿಂತಿತ ನಾಗಿಲ್ಲ ಆದರೆ ನಾನು ಹೇಗೆ ಒಪ್ಪಿಕೊಳ್ಳುವದು? ಮೊದಲೇ ನೀನು ಒಪ್ಪಿಸಿ ಕೊಂಡು ಕುಳಿತಿರುವೆ"

"ಹಾಗಿದ್ದರೂ ನಿನಗೆ ಒಪ್ಪಿಸುತ್ತೇನೆ"

"ಹೇಗಯ್ಯಾ—? ಕಳವು ಮಾಡುವೆಯೋ? ದರೋಡೆ ಹಾಕುವೆಯೋ?"

"ಬಹಳ ಸರಳವಾಗಿ ನಾನು ಸ್ವತಃ ಅಧಿಕಾರ ಬಿಟ್ಟುಕೊಡುತ್ತೇನೆ"

"ಸರಿ ದಾನವೋ! ಏನಯ್ಯಾ, ಎಲ್ಲ ದಾನ ಹಿಡಿಯಬಹುದು, ಆದರ ಸ್ತ್ರೀ ದಾನ ಶಕ್ಯವಿಲ್ಲ ಅದಕ್ಕಿಂತ ಕಳವು ದರೋಡೆ ಶ್ರೇಷ್ಠ!

ಈ ನಗಯಲ್ಲ ಕೇಶವನಿಗೆ ಕೃಷ್ಣಚಂದ್ರನ ಅಂತರಂಗ ಗೊತ್ತಾಯಿತು. ಸ್ವಾಭಿಮಾನೀ ಕೃಷ್ಣಚಂದ್ರ ಇದನ್ನು ಒಪ್ಪಲಾರ, ಎಂಬುದನ್ನು ಯೋಚಿಸಿ ಕೇಶವ ವ್ಯಗ್ರನಾದನು "ಇರಲಿ, ಎಲ್ಲಿ ದಾನ ಕೊಡುವ ವಸ್ತುವಿನ ಮೇಲೆ ದಾತೃವಿನ ಆಸಕ್ತಿ ಇಲ್ಲವೋ, ಅಲ್ಲಿ ದಾನ ತೆಗೆದುಕೊಳ್ಳಲು ಅಪ್ರತಿಷ್ಠೆ ಏನು? ದುಲಾರಿಯ ವಿಷಯಕ್ಕೆ ನನ್ನಲ್ಲಿ ತುಸು ಕೂಡ ಆಸಕ್ತಿ ಇಲ್ಲ"

"ನನಗೆ ಮಾತ್ರ ಬಳ್ಳೇ ಹೆಚ್ಚಾಗಿದೆ ಅನಧಿಕಾರಿಯಾದರೂ ಸ್ವೀಕರಿಸಬೇಕೆಂದು."

ಶಂಕಿತನಾಗಿ ಕೇಶವ ಅಂದ "ಅನಧಿಕಾರಿಯೆಂದು ಹೇಗೆ ಹೇಳುವಿ ಕೃಷ್ಣಾ? ನಿನ್ನ ಹೊರತು ಹೆಚ್ಚಿನ ಅಧಿಕಾರ ದುಲಾರಿಯ ಮೇಲೆ ಇನ್ನಾರಿಗೆ? ಯಾರಾದರೂ ತಿಳಿದಿರಲಿ, ತಿಳಿಯದಿರಲಿ ನಾನು ಮಾತ್ರ ಬಲ್ಲೆ. ನೀನು ದುಲಾರಿಯನ್ನು ಎಷ್ಟು ಪ್ರೀತಿಸುವಿ ಎಂದು, ಅದೇ ನಿನಗೆ ಹೆಚ್ಚಿನ ಅಧಿಕಾರ"

"ಬಳ್ಳೇದು ಹಾಗೇ ತಿಳಿ ನಾನು ದುಲಾರಿಯನ್ನು ಬಹಳೇ ಪ್ರೀತಿಸುತ್ತೇನೆ ಆದರ ಇದೇ ರೀತಿ ದುಲಾರಿ ನಿನ್ನನ್ನು ಪ್ರೀತಿಸುತ್ತಾಳೆ ಎಂದ ಮೇಲೆ ಯಾರ ಮಾತು ನಡೆಸುತ್ತೀ. ನನ್ನದೋ, ದುಲಾರಿಯದೋ?"

"ಒಂದು ಕಾಲ್ಪನಿಕ ಅವಸ್ಥೆಯನ್ನು ಗ್ರಹಿಸಿ ಮಾತನಾಡುವದರಲ್ಲಿ ಅರ್ಥವಿಲ್ಲ ಅಧಿಕಾರ ನಿನ್ನದೇ ಸರಿ ಇನ್ನಾರಿಗೂ ಇಲ್ಲ"

"ಛೀ, ಬೇಕಾದರೆ ಪ್ರಮಾಣಿಸಿಕೊಡುತ್ತೇನೆ ಇಬ್ಬರೂ ಅತ್ತಿಗೆಯರು ಸಾಕ್ಷಿಯಾಗಿದ್ದಾರೆ. ದುಲಾರಿ ಸ್ವಯಂ ಒಪ್ಪುತ್ತಾಳೆ ಆಗೇನು ಹೇಳುವಿ?"

ಕೃಷ್ಣಚಂದ್ರನ ನಿಶ್ಚಯಾತ್ಮಕ ನುಡಿ ಕೇಳಿ ಕೇಶವನ ಮೋರೆ ಒಣಗಿ ಹೋಯಿತು ಅವನು ಭಯಕಂಪಿತನಾಗಿ ಹೇಳಿದನು "ಇದಕ್ಕೆ ಇನ್ನೊಂದು ದಾರಿ ಇಲ್ಲ ಕೃಷ್ಣಾ ದುಲಾರಿಯೊಡನೆ ನಿನ್ನ ವಿವಾಹವಾಗಬೇಕು ಅದರಿಂದ ಆಕೆ ಸಂತುಷ್ಟಳಾಗುತ್ತಾಳೆ ನೀನು ಮಾಡಿದ ಪ್ರೀತಿ ವ್ಯರ್ಥವಾಗುವಂತಹದಲ್ಲ"

ಶಾಂತತೆಯಿಂದ ಕೃಷ್ಣಚಂದ್ರ ಮಾತಾಡಿದನು "ನನ್ನ ಪ್ರೀತಿ ದುಲಾರಿಯನ್ನು ದುಃಖಪಡಿಸಬೇಕೆಂದು ಇಲ್ಲ ಒಂದು ವೇಳೆ ನನ್ನಿಂದ ದುಲಾರಿಗೆ ದುಃಖವಾದರೆ–ನನ್ನ ಪ್ರೇಮ ವ್ಯರ್ಥವಾಯಿತೆಂದು ನಾನು ತಿಳಿಯುತ್ತೇನೆ" ತುಸು ತಡೆದು ಪುನಃ ನುಡಿದನು "ಕೇಶವಾ, ಇದನ್ನೂ ನಾನು ಹೇಳಿಬಿಡುತ್ತೇನೆ ನೀನು ದುಲಾರಿಯ ಸ್ವಾಮಿಯಾದರೆ ನಿಮ್ಮ ಮೇಲೆ ನನ್ನ ಪ್ರೇಮ ಹೆಚ್ಚಾಗುವದಿಷ್ಟೇ ಅಲ್ಲ ಅದು ಎಂದೂ ಕಡಮೆಯಾಗಲಾರದು" ಕೇಶವನು ಸುಮ್ಮನಿರುವದನ್ನು ನೋಡಿ ಕೇಳಿದನು "ಸುಮ್ಮನೇಕೆ? ನನ್ನ ಮಾತಿನಲ್ಲಿ ನಂಬುಗೆ ಎನಿಸದೇ?"

ಕೃಷ್ಣಚಂದ್ರನ ಮಾತಿನಲ್ಲಿ ನಂಬುಗೆ ಇರಲಿಲ್ಲವೆಂದಲ್ಲ ಆದರೆ ಕೇಶವ ಯೋಚಿಸುತ್ತಿರುವದು ಬೇರೊಂದು, ಒಂದು ಆಟ ಮುಗಿದಿತೋ, ಇಲ್ಲವೋ, ಎನ್ನುವಷ್ಟರಲ್ಲಿ ಮತ್ತೊಬ್ಬ ಯುವತಿಯ ಮನನೋಯಿಸುವ ಆಟ ಪ್ರಾರಂಭವಾಗಲಿದ ಅವನು ಮೆಲ್ಲನೆ ಅಂದನು "ನೀವೆಲ್ಲರೂ ಕೂಡಿ ನನ್ನನ್ನು ಹುಚ್ಚು ಮಾಡಬೇಕಂದಿದ್ದೀರಿ."

ತುಸು ವೇಳೆ ಹಾಗೇ ಕುಳಿತು ಅವರು ಎದ್ದಾಗ ಇಬ್ಬರೂ ಚಿಂತೆ–ದುಃಖಗಳಿಂದ ವ್ಯಾಕುಲರಾಗಿದ್ದರು.

## (೨೮)

ಮೂರು ಪ್ರಹರವಾಗಿರಬಹುದು ಕೃಪಾಶಂಕರನ ಮನೆಯಲ್ಲಿ ಒಳ್ಳೇ ಕೋಲಾಹಲ ನಡೆದುಹೋಗಿದ್ದಿತು ಲಗ್ನಕ್ಕೆ ಹೊರಡುವ ಸಿದ್ಧತೆ ಎಲ್ಲಾ ಮುಗಿದಿದೆ ಸೇವಕರ ಕಾಲುಗಳೇನೂ ನಿಂತಲ್ಲಿ ನಿಲ್ಲುರತ್ತಿರಲಿಲ್ಲ ಬಾಬುಗಳ ಲಗ್ನದ ಖುಶಿ–ಇನಾಮುಗಳ ಲೋಭ, ಉತ್ಸವ ಮತ್ತು ಉತ್ಸಾಹ ಎಲ್ಲವು ಗಳಿಂದ ಅವರಿಗೊಂದು ಮದವೇರಿದಂತಾಗಿತ್ತು ಮೆರವಣಿಗೆಯ ಸಡಗರ ನಡೆದಿದೆ ಬಾಗಿಲದಲ್ಲಿ ಜೋಡು ಕುದುರೆ ಬಂದು ನಿಂತಿವೆ ಹೇಳಿಕಳಿಸಿದ ಆನೆ ಸಹ ಬಂದಿದೆ ಅದರ ಮೇಲೆ ಅಂಬಾರಿ ಹೇರಿ ನಿಲ್ಲಿಸಿದ್ದಾರೆ ಒಂದು ಬದಿಗೆ ಪರಸ ಮೋಟರು ಗರುಡನಂತೆ ಸಿದ್ಧವಾಗಿ ಸಿಂಗಾರವಾಗಿ ನಿಂತು ಕೊಂಡಿದೆ. ಮಧುರದನಿ ನಾಗಸ್ವರ ಬಾರಿಸಲಾರಂಭಿಸಿದೆ

ಇಷ್ಟರಲ್ಲಿ ಹೊರಗೆ ಕೃಪಾಶಂಕರನು ಒಂದು ಮೋಟರಿನಿಂದ ಇಳಿದನು. ಎದುರಿಗೆ ಬಂದ ಸೇವಕರನ್ನು ಬಿರಬಿರನೆ ದಿಟ್ಟಿಸಿ ಹೇಳಿದನು "ನಾಗಸ್ವರ ನಿಲ್ಲಿಸುವಂತೆ ಹೇಳಿಬಿಡು ಇದು ನೋಡು. ನಾನು ತಿರುಗಿ ಹೇಳುವವರೆಗೆ ಬಾರಿಸುವಂತಿಲ್ಲ"

ತಾನಿನಿಂದ ತಾನೇತಾನಾದ ನಾಗಸ್ವರ, ನಿಂತುಹೋಯಿತು

ಮನೆಯಲ್ಲಿ ಕಾಲಿಡುತ್ತಲೇ ಬೈರಕಖಾನೆಯ ಕಡೆಗೆ ನೋಡಿದನು ಅಲ್ಲಿ ಬಾಸಿಂಗ ವಸ್ತ್ರಗಳು, ಆಭರಣಗಳು ಇವುಗಳೆಲ್ಲ ಗುಮಾಸ್ತರ ಎದುರಿಗೆ ಸಿದ್ಧವಾಗಿವೆ

ಹುಬ್ಬುಗಂಟಿಕ್ಕಿ ಕೃಪಾಶಂಕರ ನುಡಿದನು "ಇದೆಲ್ಲ ಏನು? ನಾನು ನಿಮಗೆ ಚೀಟಿ ಕಳಿಸಿದ್ದೆನಲ್ಲ!"

ಮುದುಕ ಗುಮಾಸ್ತ ಗೋವಿಂದನು ಚಾಳೀಸು ಮೂಗಿನ ಮೇಲ ಸರಿಪಡಿಸುತ್ತ ಎದ್ದು ನಿಂತು ಹೇಳಿದನು "ತಮ್ಮ ಚೀಟಿ ಹಿಂದಿನಿಂದ ಸಿಕ್ಕಿತು. ಇವಲ್ಲ ಮೊದಲೇ ಸಿದ್ಧವಾಗಿದ್ದವು"

"ಈ ಆನೆ–ಕುದುರೆ ಎಲ್ಲಾ?"

"ಈಗಲೇ ಇವುಗಳನ್ನು ತಿರುಗಿ ಕಳಿಸುವ ವಿಚಾರದಲ್ಲಿದ್ದೆ ಆದರೆ ಇದು. . ." ಮುಂದ ಮಾತಾಡುವ ಸಾಹಸ ಗೋವಿಂದನಿಗಾಗಲಿಲ್ಲ.

"ಈಗ ಇಷ್ಟೇ ತಿಳಿದರ ಸಾಕು. ಸದ್ಯ ಲಗ್ನಕ್ಕೆ ಹೊರಡುವದಿಲ್ಲ" ಇಷ್ಟು ಹೇಳಿ ಕೃಪಾಶಂಕರ ಒಳಮನೆಗೆ ಹೋಗಿಬಿಟ್ಟನು

ಕೃಪಾಶಂಕರನನ್ನು ಕಂಡಕೂಡಲೇ ಓರ್ವ ವಯಸ್ಕ ಸ್ತ್ರೀಯು—ಯಾರೋ ದೂರಿನ ಅಬಚಿ—ಸಮೀಪಕ್ಕೆ ಬಂದು ವ್ಯಗ್ರತೆಯಿಂದ ನುಡಿದಳು "ಇಡೀ ದಿನ ಎಲ್ಲಿದ್ದೆಯಪ್ಪ ನಾನು ಚಿಂತೆ ಮಾಡಿ—ಮಾಡಿ ಸತ್ತುಹೋದೆ. ನನ್ನ ಮಗು ಎಲ್ಲಿ ಹೋಗಿದ್ದೀತು? ಮೆರವಣಿಗೆಯ ಎಲ್ಲಾ ಸಾಮಾನು ನಾನು ಸಿದ್ಧ ಮಾಡಿದೆ, ಪುರೋಹಿತರು ಹಾದಿ ನೋಡುತ್ತಿದ್ದರು ಆದರೂ ನಿನ್ನ ಸುದ್ದಿ ಇಲ್ಲ! ಅಪ್ಪನ ಮಾರಿ ಬಣಗಿಹೋಗಿದೆಯಲ್ಲ? ಮನೆಯಲ್ಲಿ ಕಾರ್ಯವಿರುವಾಗ ಹೀಗೇನು ಮಾಡುತ್ತಿರುವೆ ಮಗು? ನೀನು ಇಡೀ ದಿನ ನೀರು ಸಹ ಬಾಯಲ್ಲಿ ಹಾಕಿಲ್ಲವೆಂದು ತೋರುತ್ತದೆ" ಮದುವಗೆಂದು ನೆರದ ಸ್ತ್ರೀಯರಲ್ಲಿ ವಿಶೇಷ ಸಂಬಂಧದ ನಾತೆಯಿಂದ ಈಕೆ ದೂರಿನವಳು ಆದರೆ ಮಾತುಕತೆ ಮತ್ತು ವ್ಯವಹಾರಗಳ ಮೇಲಿಂದ ನೋಡಿದರ ನಿಜವಾದ ಅಬಚಿಯೇ ಎನ್ನುವ ಹಾಗೆ ಕೃಪಾಶಂಕರನ ತಾಯಿ ಒಂದು ವೇಳೆ ಜೀವ ದಿಂದಿದ್ದರೆ, ಅವರು ಸಹ ದೂರವಿರಬೇಕಾಗಿದ್ದಿತು ಈಕಯ ರೀತಿಗೆ.

"ಮೆರವಣಿಗೆ ಹೊರಡುವಂತಿಲ್ಲ ಈ ಮಾತನ್ನು ನಾನು ಹೇಳಿಕಳಿಸಿದ್ದೆ ಎಂದ ಮೇಲೆ ಮತ್ತೇನು ಕೇಳಬೇಕಾದದ್ದು?"

ಅಬಚಿ ಕಣ್ಣುಬಿಡುತ್ತ ಕೇಳಿದಳು "ಏನಪ್ಪ ನಿನ್ನ ಮಾತು. ಇದೇನು ಹುಡುಗಾಟವೇ? ನಾನು ಎಲ್ಲರಂತೆ ಲಗ್ನಕ್ಕೆ ಗಂಟುಕಟ್ಟಿಕೊಂಡು ಬಂದಾಕೆ ಅಲ್ಲ. ಅಕ್ಕ ಸಾಯುವ ಮುಂದೆ ನಿನ್ನನ್ನು ನನ್ನ ಕೈಯಲ್ಲಿ ಒಪ್ಪಿಸಿ ಹೋಗಿದ್ದಾಳೆ ಆಗೇನೋ ನೀನು ಸಣ್ಣವನು, ನಿನಗೆ ಗೊತ್ತಿಲ್ಲವಪ್ಪ,— ನನ್ನ ಕೈಹಿಡಿದು ಹೇಳಿದ್ದಳು "ಸೀತಾ, ನಾನು ಹೊರಟೆ ನೀನು ಕೂಸನ್ನು ನೋಡಿಕೋ ನಿನ್ನ ಬಿಟ್ಟು ಯಾರೂ ಅವನಿಗಿಲ್ಲ." ನಾನು ಕೇಳಬಾರ ದೇನಪ್ಪ? ನನಗೆ ಚಿಂತೆ ಇರದೇ ಹೋಳಿಗೆ ತಿನ್ನಬಂದವರು ಚಿಂತಿಸುವರೇ?" ಮೃದುವಾಗಿ ಕೃಪಾಶಂಕರನ ಕಿವಿಯ ಒಳಿ ಹೇಳಲಾರಂಭಿಸಿದಳು "ಹೆಚ್ಚೇನು ಹೇಳಲಿ ಮಗು? ಹೇಳಲಿಕ್ಕೆ ನಾಚಿಕೆಯಾಗುತ್ತದೆ. ಒಂದರೆಕ್ಷಣ ನಾನು ಇಲ್ಲಿಂದ ಹೊರಗೆ ಹೋಗಿದ್ದೆ. ಬಂದು ನೋಡುತ್ತೇನೆ ಒಂದೆರಡು ಪದಾರ್ಥ ಇಲ್ಲವೇ ಇಲ್ಲ ನಿನಗೇನು ಹೇಳಲಿ? ನನ್ನ ಪ್ರಾಣ

ಹೋಗುತ್ತದೆ ಎಲ್ಲರ ಸಂದುಕ ಪೆಟ್ಟಿಗೆ ತೆರೆದು ಸಾಮಾನು ಈಡಾಡಿ ನೋಡಬೇಕೆನ್ನಿಸುತ್ತದೆ ಆದರೆ ಬೇಡ ಇಂಥ ಒಂದೆರಡು ಸಣ್ಣ ಪುಟ್ಟ ಪದಾರ್ಥಗಳಿಗಾಗಿ, ಯಾರ ಮೇಲೆ ಅಪವಾದ ಹೊರಿಸುವದೇಕೆ? ಸುಮ್ಮ ನಿರುವದೇ ಸರಿ ”

ತಾಯಿಯ ಮರಣ ಕಾಲಕ್ಕೆ ಕೃಪಾಶಂಕರ ಸಣ್ಣವನಿದ್ದನೇನೋ ನಿಜ. ಆದರೆ ಈ ವಿಷಯ ಅವನಿಗ ಗೊತ್ತಿತ್ತು ಸೀತಾ ಅಜಚಿಯು ಆಗ ಅಲ್ಲಿರಲಿಲ್ಲ ಆದರೂ ಅವನು ಆ ವಿಷಯಕ್ಕೆ ಏನೂ ಮಾತಾಡಲಿಲ್ಲ ಯಾಕೆಂದರೆ ಇದು ಪ್ರಸಂಗವಲ್ಲ ಅಜಚಿಯ ಮಾತಿಗೆ ಅವನು ಉತ್ತರ ಕೊಡುವ ಮೊದಲೇ ಇನ್ನೊಬ್ಬಾಕೆ ಯಾರೋ ಸೋದರತ್ತೆ ಪ್ರವಿಷ್ಟ ಳಾದಳು

ಈಕೆ ಕೃಪಾಶಂಕರನ ಅಜ್ಜಿಯ ಚಿಕ್ಕಮ್ಮನ ಮಗಳ ತಂಗಿಯ ಮಗಳು ಹೀಗಾಗಿ ಸೋದರತ್ತೆ ಲೆಕ್ಕ ಹಾಕಿ ನೋಡಿದರೆ ಅಜಚಿಗಿಂತ ತುಸು ಸನಿಯದಾಕೆ

ಸೀತೆಯ ಕಡೆಗೆ ಉರಿಗಣ್ಣಿನಿಂದ ನೋಡಿ, ಪುನಃ ಕೃಪಾಶಂಕರನ ಕಡೆಗೆ ಬೇಸರಗೊಂಡ ದೃಷ್ಟಿ ಬೀರಿ ಮಾತಾಡಿದಳು “ಎಲ್ಲಿದ್ದೆಯಪ್ಪ ಮಗನೆ ಇಷ್ಟು ದಿನ? ನಾನು ಕಲ್ಲು ಬಡಿದಂತೆ ಕೂತು ದೇವರಿಗೆ ಬೇಡಿ ಕೊಂಡೆ ಹೇಳಪ್ಪ, ಪ್ರಕೃತಿ ನೆಟ್ಟಗೇ? ”

ಸೀತಮ್ಮ ಇಬ್ಬರ ನಡುವೆ ಬಂದು ಶ್ಲೇಷ ವಿಶ್ರುತವಾಗಿ ಅಂದಳು. “ಇಷ್ಟು ದಿನ ಸ್ನಾನವಿಲ್ಲ, ಊಟವಿಲ್ಲ ತಿರುಗುತ್ತಿದ್ದವರ ಪ್ರಕೃತಿ ಹೇಗೆ ಚೆನ್ನಾಗಿದ್ದೀತು! ಇದೇನು ಕೇಳುತ್ತೀಯ ಅಕ್ಕ, ನೂರಾರು ಮಾತಿಗೂ ಉತ್ತರ ಕೊಡುವ ಸಾಮರ್ಥ್ಯ ಅವನಿಗುಂಟೇ? ನಡೆಯಪ್ಪ, ನನ್ನ ಕೋಟಡಿ ಯಲ್ಲಿ ತುಸು ವಿಶ್ರಾಂತಿ ತಕ್ಕೊ ನಾನು ಜಲ-ಪಾನ ತರುತ್ತೇನೆ '

ಅತ್ತೆ ಕಿಡಿ-ಕಿಡಿ ಆದಳು “ನೋಡು ಸೀತಾ, ನೀನು ನೋಡಿದರೆ ಏನೋ ದೂರಿನ ಸಂಬಂಧ ಎಲ್ಲಾ ಮಾತುಗಳಲ್ಲಿ ನಡುವೆ ಬರುವದು ಒಳಿ ತಲ್ಲ ಏನೋ ಕರೆಸಿದ್ದೇವೆ ಕೆಲಸವಾದ ಮೇಲೆ ಕಳಿಸಿಬಿಡುತ್ತೇವೆ ಎಷ್ಟು ನಿನ್ನ ಸಂಬಂಧವೋ ಅಷ್ಟೇ ರೀತಿಯಿಂದಿರು ”

ಸಿಟ್ಟಿನಿಂದ ಸೀತಮ್ಮನ ಒಣಗಿದ ಕಟ್ಟಿಗೆಯಂಥ ಸೀಳ ಶರೀರ ಇನ್ನಷ್ಟು ನೀಳವಾಯಿತು ಕಣ್ಣು ಕೆಕ್ಕರಿಸಿ ಆಡಿದಳು. "ನಾನು ದೂರಿನಾಕೆಯೇ?

ಅತ್ತೆ ಶಾಂತದೃಷ್ಟಿ ಕೃಪಾನ ಕಡೆಗಿಟ್ಟು ಅಂದಳು "ಮತ್ತೆ? ಆ ಬಚಿ ದೂರಿನಾಕೆ ಅಲ್ಲದೇ ಮತ್ತೇನು? ಹೇಳು ನೀನೇನು ಪ್ಯಾರೇಶಂಕರರ ನಾದಿನಿಯೇ ಎಲ್ಲೋ ದೂರ''

ಪ್ಯಾರೇಶಂಕರ ಕೃಪಾಶಂಕರನ ತಂದೆ

ಅತ್ತೆಯ ಮಾತು ಕೇಳಿ ಆಬಚಿಯು ಕ್ರೋಧ ಉಮ್ಮಳಿಸಿ ಸುತ್ತೆಲ್ಲ ಕತ್ತಲೆಗವಿದಂತಾಯಿತು "ನಾನಂತೂ ದೂರಿನಾಕೆ ನೀನು ಗೂಟ್ರಿ (ಗೋತ್ರ) ಯವಳೇ?'' ಎಂದು ನುಡಿದು ಆಬಚಿ ವಿಚಿತ್ರ ಭಾವ ಭಂಗಿಯನ್ನು ತೋರಿಸಿದಳು ಕೃಪಾಶಂಕರನು ಬೇಸರಗೊಂಡು ಮತ್ತೊಂದೆಡೆಗೆ ಮುಖ ತಿರುಗಿಸಿದನು

ತನ್ನ ಮಾನಸಿಕ ಅವಸ್ಥೆಯಿಂದ ಇವರ ಜಗಳದಲ್ಲಿ ಮಾತಾಡಲು ಅವನಿಗೆ ಆಸಕ್ತಿ ಹುಟ್ಟಲಿಲ್ಲ ಆದರೆ ಪ್ರಸಂಗ ಸಭ್ಯತೆಯ ಸೀಮೆ ಮೀರುವದೆಂದು ಕಂಡಕೂಡಲೇ ಕೃಪಾಶಂಕರ ಕೂಗಿದನು "ಅಕ್ಕಾ, ಅಕ್ಕಾ"

ಓರ್ವ ವಿಧವ ಹೊರಬಂದಳು. ವಯಸ್ಸು ಸುಮಾರು ಇಪ್ಪತ್ತೈದರ ಮೇಲೆ ಬಂತು ನಿಂತಳು

"ಯಾವಾಗ ಬಂದೆ ಕೃಪಾ? ಏನು ಮಾತು, ಏನು ಕತೆ? ಇಡೀ ದಿನ ."

ನಡುವೆ ಮಾತಾಡಿದನು "ಅವೆಲ್ಲ ಹಿಂದಿನಿಂದ ಈಗ ನಿನಗೆ ಸಾಧ್ಯವಿದ್ದರ ಅತ್ತೆ-ಆಬಚಿಯರನ್ನು ಶಾಂತಗೊಳಿಸು ವ್ಯರ್ಥ ಮಾತು ಬೆಳೆಸಿ ಒಗಟವಾಡುವದನ್ನು ಕೇಳಲು ನನಗೆ ಶಕ್ತಿ ಇಲ್ಲ ಇಚ್ಛೆಯೂ ಇಲ್ಲ"

ಸೀತಮ್ಮ ಕೃಪಾಶಂಕರನ ಮಾತು ಕೇಳಿ ಆ ಹುಡುಗಿಯ ಮೇಲೆ ಒಂದು ಅರ್ಥವ್ಯಂಜಕ ಕಟಾಕ್ಷ ಬೀರಿ ನುಡಿದಳು. "ಪಿಜನಪ್ಪಾ! ನಾವೇನು ದಪ್ಪಸಂಥವರು ಹುಡುಗ ಇಡಿ ದಿನ ತಿರುಗಿ ಬೇಸತ್ತು ಒಂದಿದ್ದಾನೆ ನಾವು ಜೀವ ತಿನ್ನಹತ್ತಿದ್ದೇವೆ

ಅತ್ತೆ ತನ್ನ ಭಾರಿಯಾದ ಶರೀರ ಸಂಭಾಳಿಸಿಕೊಂಡು ಮೂಗಿನ ದನಿಯಿಂದ ಹೇಳಿದಳು. "ತಿನ್ನಲಿಕ್ಕೇ ಹುಡುಗ ತಟ್ಟೆ ತಟ್ಟೆ ಪೂರಿ ಮಾಡಿ

ಸಿಟ್ಟಿದ್ದಸಲ್ಲ. ಮನೆಯಲ್ಲಿ ಕೂತುಕೊಂಡೇ ತಿನ್ನಲಿಕ್ಕಾಗುತ್ತದೆ ನೀನು ದೂರಿನಾಕ ”

“ತಿರುಗಿ ದೂರಿನಾಕೆಯೇ!” ಸೀತಮ್ಮನ ಎರಡೂ ಕಣ್ಣು ಹುಲಿಯ ಕಣ್ಣಾದವು

ಶೀತಲಾ–ಎಂದರೆ ಆ ವಿಧವೆ ಅಕ್ಕ ಸೀತಮ್ಮನನ್ನು ಪುನಃ ಮಾತಾಡಗೊಡದೇ ಅಂದಳು “ಅಬಚೀ, ನೀವು ವ್ಯರ್ಥ ಮಾತಾಡುತ್ತಿದ್ದಿರವ್ವಾ. ಅಲ್ಲಿ ಅಡಿಗೇ ಮನೆಯಿಂದ ಪೂರಿ ಮಾಯವಾಗುತ್ತಿದ್ದರೂ ಲಕ್ಷಿಸದಿರುವಿರಿ ”

ಈ ತರದ ಹಚ್ಚಿಕೊಂಡಾಡಿದ ಮಾತಿನಿಂದ ಅಬಚಿ ಕರಗಿಹೋದಳು ಅಧಿಕಾರದ ವಿಷಯಕ್ಕೆ ಅತ್ತೆಯ ಸಂಗಡ ಜಗಳವಾದದ್ದು ಶೀತಲಾನ ಮಾತು ಅಬಚಿಯಂತಾಗಿಬಿಟ್ಟಿತು ವಿಜಯದಿಂದ ಹೊಳೆಯುವ ದೃಷ್ಟಿ ಅತ್ತೆಯ ಕಡೆಗಿಟ್ಟು ಅಂದಳು “ಒಳ್ಳೇ ನೆನಪು ಕೊಟ್ಟೆ ಹುಡುಗೀ ಈ ವ್ಯರ್ಥ ಮಾತಿನಿಂದ ನನಗೇನು? ನಾನೂ ಹೊರಟೆ ” ಎಂದವಳೇ ಅಡಿಗೇ ಮನೆಗೆ ಹೊರಟು ಹೋದಳು

ಹತಾಶಳಾಗತೊಡಗಿದ ಅತ್ತೆಗೆ ಶೀತಲಾ ನುಡಿದಳು “ಅತ್ತೆಮ್ಮಾ ನಿನಗೆ ಉಳಿದ ಕೆಲಸ ಸಿಗುವದಿಲ್ಲ ನನ್ನ ಕೋಟಡಿ ಹಾಗೇ ಬಿಟ್ಟು ಬಂದಿದ್ದೇನೆ ತುಸು ಅಲ್ಲಿ ಕೂತಿರು. ಕೆಲವು ಮಹತ್ವದ ಮಾತಾಡಬೇಕಾಗಿದೆ. ನಾನು ಈಗಲೇ ಬಂದೆ ”

ಸೀತಮ್ಮನಿಗಿಂತ ತನಗೊಂದು ಹೆಚ್ಚಿನ ಅಧಿಕಾರ ದೊರೆಯಿತೆಂದು ಭಾವಿಸಿ ಅತ್ತೆ ಮನಸ್ಸು ಹಗುರವಾಯಿತು ಮುಖ ಹಿಗ್ಗಿತು ತನ್ನ ಸ್ಥಾನಾಪನ್ನಳಾಗಲು ಆಕೆ ತಡಮಾಡದೇ ಶೀತಲಾನ ಕೋಟಡಿಗೆ ಹೋಗಿಬಿಟ್ಟಳು.

ಅಬಚಿ ಮತ್ತು ಅತ್ತೆ ಇವರಿಬ್ಬರು ಹೋದನಂತರ ಶೀತಲಾ ನುಡಿದಳು “ಈಗಾದರೂ ಹೇಳಪ್ಪ ಇಡೀ ದಿನ ಎಲ್ಲಿದ್ದೆ? ಮತ್ತು ಮೆರವಣಿಗೆ ಇಂದು ಯಾಕೆ ಹೊರಡುವದಿಲ್ಲ?”

“ಅಕ್ಕ ಇವೆಲ್ಲ ಮಾತು ನಿನಗೆ ಸಾವಕಾಶ ಹೇಳುತ್ತೇನೆ ಈಗ ಸಮಯವಿಲ್ಲ ಇನ್ನು ಅನಂತ ಬರಬಹುದು, ಅವನೊಡನೆ ಮಾತಾಡಬೇಕು. ನಾನು ಇಲ್ಲಿ ಬಂದದ್ದು ತುಸು ಜಲ–ಪಾನ ಮಾಡಲೆಂದು, ಆದರೇನು? ಇಲ್ಲಿ ಇದೊಂದು ದೊಡ್ಡ ಪೀಡೆ ”

"ಹಾಗಾದರೆ ನನ್ನ ಕೋಟಡಿಯಲ್ಲಿ ತುಸು ಕೂತಿರು. ನಾನು ಈಗಲೇ ಜಲಪಾನದ ವ್ಯವಸ್ಥೆ ಮಾಡಿ ತರುತ್ತೇನೆ."

"ಇಲ್ಲ ನಾನು ಆಚೇ ಕೋಟಡಿಯಲ್ಲಿರುತ್ತೇನೆ ಅಲ್ಲಿಗೇ ನೀನು ಬಾ" ಹೋಗು ಹೋಗುತ್ತ ನುಡಿದ "ಯಾರಿಂದಲಾದರೂ ಗುಮಾಸ್ತರಿಗೆ ಹೇಳಿ ಕಳಿಸು, ಅನಂತ ಬಂಪರ ಇತ್ತ ಕಳಿಸಬೇಕೆಂದು."

ಕೃಪಾಶಂಕರ ಮೆಲ್ಲ ಮೆಲ್ಲನೆ ಕೋಟಡಿಗೆ ಬಂದನು ಶೀತಲಾ ಒಂದು ತಟ್ಟೆಯಲ್ಲಿ ಜಲಪಾನ ತಂದಳು ಕುಡಿದು ಮುಗಿಸಿದ್ದನೋ ಇಲ್ಲವೋ, ಓರ್ವ ಸೇವಕ ಬಂದು ಹೇಳಿದನು "ಅನಂತಬಾಬೂ ಬಂದಿದ್ದಾರ"

"ಇಲ್ಲಿಗೇ ಕರದುಕೊಂಡು ಬಾ"

ಕೃಪಾಶಂಕರನ ಮನದಲ್ಲಿ ಈಗ ಪ್ರಚಂಡ ಕಂಪನವಾಗುತಿದ್ದಿತು. ಅನಂತನಿಗೆ ಏನು ಹೇಳಬೇಕೆಂಬುದು ಅವನಿಗ ನಿಶ್ಚಿತವಾಗಿರಲಿಲ್ಲ ಹೇಳುವ ದಾದರೂ ಹೇಗೆ? ಈ ವಿವಾಹ ಸಾಧ್ಯವಿಲ್ಲವೆಂದು, ಅನಂತ ಬಂದೇ ಬಿಟ್ಟ. ಕೃಪಾಶಂಕರ ಎದ್ದುನಿಂತು ಸ್ವಾಗತಿಸಿದನು ಕೈಹಿಡಿದು ಬದಿಗಿದ್ದ ಜನು ವಾಸದ ಮೇಲೆ ಕುಳ್ಳಿರಿಸಿದನು

ಒಂದು ಕ್ಷಣ ಮಾತ್ರ ಒಬ್ಬರು ಒಬ್ಬರನ್ನು ನೋಡುತ್ತಿದ್ದರು ಯಾರಿಂದಲೂ ಮಾತಿಗೆ ಮೊದಲಾಗಲಿಲ್ಲ. ಅಷ್ಟರಲ್ಲಿ ಅನಂತ ನುಡಿದ ಇದೇನಯ್ಯಾ' ಇಂದು ಇಷ್ಟೊಂದು ಔದಾಸೀನ್ಯವೇಕ? ಯಾಕೋ ಮೋರ ಬಾಡಿದ ಹಾಗಿದ? ನನಗೇತಕ್ಕೆ ಕರಿಸಿದ್ದು?

ಈಗ ಕೃಪಾಶಂಕರನ ಧ್ಯಾನಭಂಗವಾಯಿತೇನೋ? ತಡೆ-ತಡೆದು ಮಾತಾಡಲಾರಂಭಿಸಿದನು "ಅಣ್ಣಾ, ಅದನ್ನು ಹೇಳುವದು ಬಹು ಕಷ್ಟಕರ ವಾಗಿದೆ ಆದರ ಹೇಳದಹೊರತು ಗತ್ಯಂತರವಿಲ್ಲ." ಇಷ್ಟು ಮಾತ್ರ ಹೇಳಿ ಕೃಪಾಶಂಕರ ಸುಮ್ಮನಾದನು ಮತ್ತು ಅನಂತನ ಮೊಗವನ್ನೇ ದಿಟ್ಟಿಸುತ್ತ ಕುಳಿತುಬಿಟ್ಟನು

ಅನಂತನು ಭಯದಿಂದ ಕೇಳಿದನು "ಏನು ವಿಷಯ? ಬೇಗ ಹೇಳು"

ಕೃಪಾಶಂಕರ ತಲೆ ಕೆರೆದುಕೊಳ್ಳುತ್ತ ಕೆಳಗೆ ಮೋರ ಮಾಡಿ ನುಡಿದನು "ಅಣ್ಣಾ, ಈ ವಿವಾಹ ಆಗುವಂತಿಲ್ಲ" ಮುಂದೆ ಅವನಿಗೆ ಮಾತಾಡ ಒರಲಿಲ್ಲ

ಅನಂತನಿಗೆ ಒಂದು ಕ್ಷಣ ಈ ಮಾತಿನಲ್ಲಿ ವಿಶ್ವಾಸವೆನಿಸಲಿಲ್ಲ. ಇದೇನೋ ತಪ್ಪು ನುಡಿಯೆಂದು ಭಾವಿಸಿ ಅವನು ಕೇಳಿದನು "ಏನಂದೆ ಕೃಪಾ ? ವಿವಾಹ ಮುಂದಿನ ಮಾತು ಮುಗಿಸಲು ಶಕ್ಯವಾಗಲಿಲ್ಲ

ದೊರೆತ ಈ ಅವಧಿಯಲ್ಲಿ ಕೃಪಾಶಂಕರನೂ' ಕಡೆಗೇನು ಹೇಳಬೇಕೆಂಬುದನ್ನು ಯೋಚಿಸಿಕೊಂಡಿದ್ದ ಹೇಳದೇ ವಿಧಿಯಿಲ್ಲ ಅವನಾದರೂ ಏನು ಮಾಡಬೇಕು? ಅವನು ಹೇಳಿದನು ''ಅಣ್ಣಾ, ಇಂದು ಎರಡು ಪ್ರಹರವಾಗಿರಬಹುದು. ನಮ್ಮ ಕಲ್ಲೂರಮಾವ ನನ್ನನ್ನು ಕರೆಸಿದನು. ಆಗ ಅವನು ಮಾಲತಿಯ ಸಂಬಂಧವಾಗಿ ಕೆಲವು ಮಾತು ಹೇಳಿದ್ದಾನೆ ಅದಕಾಗಿ ವಿವಾಹವಾಗುವದು ಎಂದಿಗೂ ಸಂಭವವಿಲ್ಲ

''ಅದೇನು ?"

ಅವನು ಹೇಳಿದುದೇನಂದರೆ ಮಾಲತಿ ಮತ್ತು ಆಕೆಯ ಅಕ್ಕ ಇವರು ರಾಮರತನರ ಮಕ್ಕಳು ನಿಜ ಆದರೆ ಒಡಹುಟ್ಟಿದವರಲ್ಲ. ಪಂಡಿತ ರಾಮರತನರು ತಮ್ಮ ಹಂಡತಿ ಸತ್ತ ಮೇಲೆ ಹುಡುಗಿಯನ್ನು ಜೋಪಾನ ಮಾಡಲೆಂದು ದೂರ ಸಂಬಂಧದ, ಓರ್ವ ವಿಧವೆಯನ್ನು ಮನೆಯಲ್ಲಿ ಕರೆಸಿದರು ನಂತರ ಆಕೆಯಿಂದ ಮಾಲತಿ ಹುಟ್ಟಿದ್ದಾಳೆ ರಾಮರತನರು ಸಾಯುವಾಗ ತಮ್ಮ ಎರಡೂ ಮಕ್ಕಳನ್ನು ಯಾರೋ ಮಿತ್ರನೊಬ್ಬನಿಗೆ ಒಪ್ಪಿಸಿದರು. ಆ ಮಿತ್ರನಿಗೆ ರಾಮರತನರ ಹೆಂಡತಿ ಅಣ್ಣಾ, ಎನ್ನುತ್ತಿದ್ದರಂತೆ. ಅದಕಾಗಿ ಅವನು ಹುಡುಗೆಯರ ಮಾವನಂತೆ ನಟನೆ ಮಾಡಬೇಕಾಯಿತು" ಇಷ್ಟು ನುಡಿದು ಕೃಪಾ ಸುಮ್ಮನಾದನು ತುಸು ವೇಳೆ ಇಬ್ಬರೂ ಮೌನವಾಗಿದ್ದರು. ನಂತರ ಪುನಃ ಕೃಪಾಶಂಕರ ನುಡಿದನು "ಈಗ ನೀನೇ ಹೇಳು ಅಣ್ಣಾ, ಸಮಾಜದಲ್ಲಿ ನಾವಿರಬೇಕು ನಾಲ್ಕು ಜನ ಬಿಟ್ಟು ಸಾಗುವಂತಿಲ್ಲ ಮಾವ ಹೇಳುತ್ತಿದ್ದ ನಾವು ಮೆರವಣಿಗೆಯಲ್ಲಿ ಭಾಗವಹಿಸುವದಿಲ್ಲ ಪಂಕ್ತಿಗಂತೂ ಬರುವದೇ ಇಲ್ಲ ಮತ್ತು ಕನೋಜಿಗಳಾರೂ ನಿನ್ನ ಸಮೀಪಕ್ಕೆ ಸುಳಿಯಲಾರರು."

ಅನಂತ ಮೌನದಿಂದಿದ್ದನು. ಆಗ ಅವನಿಗನಿಸಿದುದೇನಂದರೆ ಅವನು ಕುಳಿತ ಭೂಮಿ ತಲೆಕೆಳಗಾಗಿರುವದೇನೋ ? ಎಂದು ಭಾಸವಾಯಿತು. ಒಂದು ನೀಳವಾದ ಉಸಿರುಗರೆದು ಸುಮ್ಮನಿದ್ದನು.

ಕೃಪಾಶಂಕರನು ಅನಂತನಿಗೆ ತಡೆಯುವಂತೆ ಸಂಜ್ಞೆ ಮಾಡಿ ಹೇಳಿದನು ಅಣ್ಣಾ. ದುಃಖಿಸಿ ಪ್ರಯೋಜನವಿಲ್ಲ ನಾನು ಮಾವನಿಗೆ ಮಾತು ಕೊಟ್ಟಿದ್ದೇನೆ ನಿನಗೆ ಮಾತ್ರ ತಿಳಿಸುವನೆಂದು, ಏನು ಮಾಡಲಿ? ನನಗೆ ನಿರುಪಾಯವಾಗಿದೆ ನಾನು ಮಾಲತಿಯ ರೂಪ–ಗುಣ ಶೀಲಗಳನ್ನು ನೆನೆದು ಮರುಗುತ್ತೇನೆ. ನಾನು ಆಕೆಯನ್ನು ಮರೆಯಲಾರೆ ಇನ್ನೂ ನನ್ನ ಹೃದಯದಲ್ಲಿ ಮಾಲತಿಯ ವಾಸ ''

"ಕಲ್ಲೂ ಮಾವ ಏನು ಹೇಳಿದನೋ ಅದಕ್ಕೇನಾದರೂ ಅವನ ಬಳಿಯಲ್ಲಿ ಪ್ರಮಾಣಗಳಿವೆಯೋ? ಅಥವಾ ಏನೋ ಹಾರಿಕೆ ಸುದ್ದಿಯೋ?"

"ಅವನು ಇನ್ನೂ ಏನೇನೋ ಹೇಳುವವನಿದ್ದ ಮತ್ತು ಕೆಲವು ಹೇಳಿದ್ದಾನೆ ಸಂಕೋಚದಿಂದ ನಾನು ಆಡಿಲ್ಲ "

"ಏನದು ?" ಗಾಬರಿಯಿಂದ ಕೇಳಿದನು ಅನಂತ

''ಅವನು ಹೇಳಿದ. ಮಾಲತಿಯ ತಾಯಿ ಆ ವಿಧವೆ, ಯಾವುದೋ ಬೀದಿಯಲ್ಲಿ ವಾಸಮಾಡಿಕೊಂಡಿದ್ದಾಳೆ ನನಗೆ ಅವನ ಮಾತಿನ ಭರವಸೆ ಎನಿಸಲಿಲ್ಲ ನಾನೂ ಅವನ ಜೊತೆಗೆ ಹೋಗಿ ಆ ಗುಪ್ತ ಸ್ಥಾನವನ್ನು ಕಂಡೆವು ಅಲ್ಲಿ ಆ ವಿಧವೆ ವೇಶ್ಯೆಯಾಗಿ ಇರುವುದು ನಿಜ "

ಇದನ್ನು ಕೇಳಿದ ಅನಂತನಿಗನಿಸಿತು, ಯಾರೋ ಚೂರಿಯಿಂದ ಹೃದಯವನ್ನು ಇರಿಯುತ್ತಾರೆ ಎರಡು ಕೈಗಳಿಂದ ತಲೆ ಅಪ್ಪಳಿಸಿಕೊಂಡು ಕುಳಿತುಬಿಟ್ಟ ಕಣ್ಣುಗಳಿಗೆ ಕತ್ತಲೆಗವಿದಂತಾಯಿತು ಜಗತ್ತೆಲ್ಲ ಗಿರಿ ಗಿರಿ ತಿರುಗುತಿರುವಂತೆ ಭಾಸವಾಯಿತು ಕೃಪಾಶಂಕರನೂ ಸುಮ್ಮನಿದ್ದನು. ತುಸು ವೇಳೆ ಹಾಗೆ ಕುಳಿತಿದ್ದು, ಅನಂತ ಒಮ್ಮೆಲೇ ಎದ್ದುನಿಂತು ಒಣಗಿದ ಕಂಠದಿಂದ ನುಡಿದನು ''ಒಳ್ಳೇದು ಹೋಗುವಾ. ಮನೆಯಲ್ಲಿ ದಾರಿ ಕಾಯುತ್ತಿರಬಹುದು. ಹೋಗಿ ಅಡಚಣೆಗಳನ್ನು ತಿಳಿಸುತ್ತೇನೆ.'' ಮೆಲ್ಲನೆ ಕೋಟಡಿಯಿಂದ ಹೊರ ನಡೆದನು. ಆದರೆ ಅವನ ಕಾಲುಗಳು ಸಂಜ್ಞಾಶೂನ್ಯನೇನೋ ಇವನು, ಎಂಬಂತೆ ಹೆಜ್ಜೆ ಹಾಕುತಿದ್ದವು ಯಾರೋ ಮುಂದೆ ಮುಂದೆ ದೂಡಿಕೊಡುತ್ತಿದ್ದರೇನೋ?

## (೨೯)

ಆಗ ಸಂಧ್ಯಾಕಾಲದ ಏಳು ಗಂಟೆಯಾಗಿತ್ತು ಕೇಶವನ ಮನೆಯಲ್ಲಿ ಆನಂದೋತ್ಸವ ನಡೆದಿದೆ ಬಾಗಿಲಲ್ಲಿ ನಾಗಸ್ವರ ಅಂಗಳದಲ್ಲಿ ಚಟುಲ ಗಾತ್ರಿಯರ ಗೀತ, ಇನ್ನು ತುಸು ವೇಳೆಗೆ ವರ ಬರುತ್ತಾನೆ ದ್ವಾರಪೂಜೆಯ ಸಿದ್ಧತೆ ಪೂರ್ಣವಾಗಿದೆ

ಕೇಶವನು ರಾಮುಕಲಿಯ ಕೋಟಡಿಯಲ್ಲಿ ಕುಳಿತಿದ್ದನು ಅವನು ಮಾತಾಡಿದ ಕಡೆಗೆ ಕೃಪಾಶಂಕರ ಅಣ್ಣನನ್ನು ಯಾತಕ್ಕೆ ಕರೆಸಿರಬಹುದು? ಇನ್ನೂ ಅಣ್ಣ ಬರಲಿಲ್ಲ

ರಾಮುಕಲಿ ಹೇಳಿದಳು "ಅವನ ಸೇವಕ ಬಂದಿದ್ದ ಏನೋ ಅಗತ್ಯ ಕೆಲಸಕ್ಕೆ ಬೇಗ ಬರಬೇಕೆಂದು ಹೇಳಿದನು ಈಗ ಬಂದಾನು"

ಇಷ್ಟರಲ್ಲಿಯೇ ಅನಂತ ಪ್ರವೇಶಿಸಿದನು ಅನಂತನ ಮೋರೆ ಬಾಡಿ ಹೋಗಿದ್ದಿತು ಅವನು ಹಾಸಿಗೆಯಲ್ಲಿ ಉರುಳಿಕೊಂಡ ರೀತಿಯಿಂದರ ಮನ ಎಲ್ಲಾ ಮುಗಿಸಿ ಬಂದವರಂತೆ

ಕೇಶವನು ವ್ಯಗ್ರತೆಯಿಂದ ಕೇಳಿದನು "ಏನು ಅಣ್ಣಾ, ನಿನ್ನ ಮೋರೆ ಏಕೆ ಬಾಡಿದೆ? ಕೃಪಾ ಏತಕ್ಕೆ ಕರೆಸಿದ್ದ?"

ಅನಂತ–ಇನ್ನಷ್ಟು ಮೋರೆ ಮುದುರಿ ತಲೆ ಮೇಲೆ ಕೈ ಇಡುತ್ತ ನುಡಿದನು "ದೊಡ್ಡ ಪೆಟ್ಟಾಯಿತು, ಕೇಶವಾ, ಮೂಗು ಕೊಯ್ದಂತಾಯಿತು"

"ಆಂ, ಏನಾಯಿತು?" ರಾಮುಕಲಿ ಭಯದಿಂದ ಕೇಳಿದಳು

ಅನಂತ ತಡೆ ತಡೆದು ನುಡಿದ "ಕೃಪಾಶಂಕರ ಲಗ್ನ ಮಾಡಿಕೊಳ್ಳುವದಿಲ್ಲ" ಮುಂದಿನ ಮಾತು ಹೇಳಲು ಅವನಿಗೆ ಶಕ್ತಿ ಸಾಲಲಿಲ್ಲ ಯಾರೋ ಅವನ ಬಾಯಿಗೆ ಬೀಗ ಹಾಕಿದಂತಾಗಿದ್ದಿತು

"ಲಗ್ನ ಮಾಡಿಕೊಳ್ಳುವದಿಲ್ಲವೇ? ಅದೇಕೆ?" ರಾಮುಕಲಿ ಕೇಳಿದಳು

ಅನಂತ ಸಾವಕಾಶ ಹೇಳಿದನು "ಕೃಪಾಶಂಕರ ಹೇಳುವದೇನೆಂದರೆ ಮಾಲತಿ ವಿಧವಾ ಪುತ್ರಿ ನಿನ್ನ ಮತ್ತು ಮಾಲತಿಗೆ ತಂದೆ ಒಬ್ಬ ನಿಜ ಆದರೆ ತಾಯಂದಿರು ಬೇರೆಬೇರೆ. ನಿನ್ನ ತಾಯಿ ಸತ್ತ ಮೇಲೆ, ನಿಮ್ಮಪ್ಪ ದೂರ ಸಂಬಂಧದ ಓರ್ವ ವಿಧವೆಯನ್ನು ನಿನ್ನ ಜೋಪಾನಕ್ಕೆ ಇಟ್ಟನಂತರ

ಆಕೆಯಿಂದ ಮಾಲತಿ ಹುಟ್ಟಿದ್ದಾಳೆ ಸಾಯುವ ಮುಂಚೆ ತನ್ನೊರ್ವ ಮಿತ್ರನಿಗೆ ನಿಮ್ಮನ್ನು ಒಪ್ಪಿಸಿದ ನಿಮ್ಮ ತಾಯಿ ಅವನಿಗೆ ಅಣ್ಣಾ, ಎಂದು ಹೇಳುತ್ತಿದ್ದರಂತೆ ಅದಕಾಗಿ ಅವನು ನಿಮ್ಮ ಮಾವನಂತೆ ನಟನೆ ಮಾಡ ಬೇಕಾಯಿತು ''

ಕೇಶವ ತುಸು ಉತ್ಸಾಹಿತನಾಗಿ ನುಡಿದ "ಈ ಕಾರಣಕ್ಕಾಗಿ ನಾನು ಲಗ್ನ ಮಾಡಿಕೊಳ್ಳುವದಿಲ್ಲವೆಂದು ಕೃಪಾ ಹೇಳಿದನೋ?''

''ಹಾಂ ಅವನು ಮತ್ತೇನು ಮಾಡಬೇಕು? ಸಮಾಜದಲ್ಲಿ ಅವನಿರು ವದು ಬೇಡವೋ? ಸಮಾಜದಂತೆ ಸಾಗುವದೇ ಸರಿ ''

''ಎಂದರೆ ಸಮಾಜ ಭಯದಿಂದ ಅವನು ಮಾಲತಿಯೊಡನೆ ಲಗ್ನ ನಾಗುವದಿಲ್ಲ ''

''ಅರ್ಥಾತ್, ಸಮಾಜದಲ್ಲಿ ಈಗ ಮಾಲತಿಯ ಸ್ಥಾನ ಯಾವುದು''

ಅನಂತನ ಮಾತು ಕೇಳಿ ಕೇಶವ ಕುರ್ಚಿಯಿಂದ ಮೇಲೆದ್ದನು ಕಣ್ಣು ಗಳಿಂದ ಕಿಡಿ ಉದುರುವವೇನೋ ಎನಿಸಿತು ಮಾತಾಡಿದನು ''ಇದರ ಅರ್ಥವೆಂದರೆ–ಇಷ್ಟೇ ನಿಮ್ಮ ಮನೆಯಲ್ಲಿಯೂ ಮಾಲತಿಗೆ ಸ್ಥಾನವಿಲ್ಲ. ಆದರೆ ಅಣ್ಣಾ, ಇದು ಸರಳ ಮಾತಲ್ಲ ಮನೆಯ ನಡುವೆ ಗೋಡೆ ಬಿದ್ದೀತು. ಒಂದು ಬದಿಗೆ ಸಮಾಜದ ಕೈಗೊಂಬೆಯಾದ ನೀನು, ಇನ್ನೊಂದು ಬದಿಗೆ ಮಾಲತಿಯ ಕೈ ಹಿಡಿದ ನಾನು ಇರಬೇಕಾಗುತ್ತದೆ ''

ದುಃಖದಿಂದ ಅನಂತ ಹೇಳಿದ. "ಕೇಶವಾ, ನನ್ನ ಮಾತಿನ ಅರ್ಥ ಹಾಗುಂಟೇ? ನಿನ್ನನ್ನು ಕಷ್ಟಪಡಿಸುವದು ಅನುಚಿತವೆಂದು ನಾನು ತಿಳಿದಿದ್ದೇನೆ "

ಕೇಶವ ಬೇಸರದಿಂದ ಅಂದನು ''ನಾನು ದುಃಖಿಯೂ ಆಗಲಾರೆ, ಮತ್ತು ನಿಮ್ಮ ಕೊಳೆತ ಸಮಾಜದ ವಿಜ್ಞಾನದ ಮೇಲೆ ವ್ಯಾಖ್ಯಾನವನ್ನೂ ಕೇಳಲಾರೆ. ಏನು ನನ್ನ ಬುದ್ಧಿಗೆ ತಿಳಿಯುವದೋ, ಅದನ್ನು ಮಾಡು ತ್ತೇನೆ ನಾನು ಹೊರಟೆ ''

''ಆದರೆ ನಿಲ್ಲಿ,'' ರಾಮಕಲಿ ಕಣ್ಣೀರ್ಗರೆಯುತ್ತ ಅಂದಳು.'' ಇದರಲ್ಲಿ ನೀವು ಅಷ್ಟು ಅಸಮಾಧಾನ ಹೊಂದುವ ಕಾರಣವೇನು? ಸಮಾಜದ ರೀತಿ ನಡತೆಯಂತೆ ಇರಲೇಬೇಕಾಗುವದು, ಇದು ಅವರವರ ಹಣೇಬರಹ.

ಮಾಲತಿಯು ಬರಹಕ್ಕೆ ನೀವೇನು ಮಾಡುತ್ತೀರಿ? ಯಾಕೆ ನನಗೇನು ಮಾಲತಿಯು ಕಲಂಕವಿಲ್ಲವೇ?"

"ಅತ್ತಿಗೆ, ಸಮಾಜದಲ್ಲಿ ಏನು ನಡೆದುಬಂದಿರುವದೋ ಅದನ್ನು ಬಿಡು ಉಚಿತ ಮಾರ್ಗವನ್ನು ಹೇಳು ನೀನು ಹೇಳುತಿದ್ದಿ, ಅಣ್ಣ ಹೇಳುತ್ತಿದ್ದ, ಅದರಂತೆ ಮಾಲತಿಯೊಡನೆ ನನ್ನ ಲಗ್ನವಾಗಿ ಹೋಗಿತ್ತು, ಈಗ ಈ ಸಂಗತಿ ತಿಳಿದುಬಂದಿತು ಹೀಗಾಗಿದ್ದರೆ?"

"ಆದರೆ ಕಂಡೂ-ಕಂಡು ಯಾರು ನೊಣದ ಪಾಯಸ ತಿನ್ನುತ್ತಾರೆ?"

"ನೀನೇನೋ ನಿನ್ನ ಮೂಗಿನ ಮೇಲೆ ನೊಣ ಕೂಡಗೊಡಲಿಕ್ಕಿಲ್ಲ ಆದರೆ ನಾನು ಮಾತ್ರ ಮಾಲತಿಯನ್ನು ಲಗ್ನ ಮಾಡಿಕೊಳ್ಳುತ್ತೇನೆ" ಎಂದು ಹೇಳಿ ತುಸು ತಡೆದು ಪುನಃ ನುಡಿದನು "ನಿಮ್ಮ ಇಷ್ಟವಿದ್ದರೆ ಅತ್ತಿಗೆ ಮನೆಯಲ್ಲಿರಗೊಡಿಸಬಹುದು, ಬೇಡಾದರ ಜಗತ್ತು ಬಿದ್ದಿರುವದಲ್ಲ"

"ಹಾಂ- ಅಷ್ಟು ಕೋಪ ಬೇಡ ಬಾರಿ ಕೋಪದಿಂದ ಕಾರ್ಯವೇನು ಆದಂತಾಗಲಿಲ್ಲ ತುಸು ಶಾಂತರಾಗಿರಿ ನಾಲ್ಕು ದಿನ ಕಳೆಯಲಿ ತಿರುಗಿ ನೀವು ವಿಚಾರ ಮಾಡಿಕೊಳ್ಳಿರಿ" ನಂತರ ನೀಳವಾದುದೊಂದು ಉಸಿರು ಗರೆದು, ರಾಮಕಲಿ ಅಂದಳು "ಇನ್ನು ಮೇಲೆ ಯಾರಿಗೂ ಮೋರೆ ತೋರಿಸುವಂತಾಗಲಿಲ್ಲ, ಅಂಗಳ ತುಂಬ ಹಂಗಸರು ನೆರೆದಿದ್ದಾರ ಯಾವ ಮೋರೆಯಿಂದ ಅವರ ಬಳಿಗೆ ಹೋಗಲಿ? ಲಗ್ನ ನಿಂತಿತೆಂದು ಹೇಗ ಹೇಳಲಿ? ಹೀಗೆ ಮಾತಾಡುತಿರುವಾಗಲೇ ಮಳೆಗಾಲದ ಮೋಡದಿಂದ ಮಳೆ ಸುರಿಯುವಂತೆ ನೀರು ಸುರಿಯಲಾರಂಭಿಸಿದವು

ಕೇಶವನೂ ಬಂದೊದಗಿದ ಸಂಕಟದಿಂದ ವ್ಯಾಕುಲನಾದನು. ಮೆಲ್ಲನೆ ಅವನೂ ಹೊರಟು ಹೋದನು

ಅನಂತನು ಶೂನ್ಯದೃಷ್ಟಿಯಿಂದ ರಾಮಕಲಿಗೆ ನುಡಿದ "ನೀನು ಹೋಗಿ ಹೇಳಿಬಿಡು, ಲಗ್ನ ನಿಂತಿತು ಎಂದು ರಾಮಕಲಿ ಇದನ್ನು ಕೇಳಿ ಬಹಳ ತಳಮಳಗೊಂಡಳು. ಆಕೆಗೇನೂ ಹಾದಿಯೇ ಕಾಣಲಿಲ್ಲ ಏರಿಸಿದ ಪಾತ್ರೆ ಇಳಿಸುವಂತೆ ಈ ಸ್ಥಿತಿ ಸಾವಕಾಶ ಹೊರಗೇನೋ ಬಂದಳು, ಆದರೆ ತಾನು ಎಲ್ಲಿ ಹೊರಟಿದ್ದೇನೆ? ಎಂಬುದು ಆಕೆಗೆ ತಿಳಿದಿರಲಿಲ್ಲ ತಾನೇನು ಮನುಷ್ಯಳೋ ಅಥವಾ ಓಡಾಡುವ ಒಂದು ಗೊಂಬೆಯೋ?

ಹೇಗೋ ಸಾಗಿದ್ದಳು ಮಾತ್ರ ಅನಂತನು, ಆ ಕೊಟಡಿಯಲ್ಲಿ ಮಾತಿಲ್ಲದೇ ಸ್ತಬ್ಧನಾಗಿ ಕುಳಿತುಬಿಟ್ಟನು. ತಾನು ಒಂದು ಅಂಧಃಕಾರ ಗರ್ತದಲ್ಲಿ ಜಾರುತ್ತಿರುವೆ ಇನ್ನೂ ತಳ ಕಾಣದಾಗಿದೆ ಒಂದಾವುದೋ ಮಹಾ ಶೂನ್ಯದಲ್ಲಿ ಬೆರತು ಹೋಗುತ್ತೇನೆ ಎಂದು ಭಾಸವಾಗತೊಡಗಿತು.

## (೩೦)

ರಾತ್ರಿಯಲ್ಲಿ ಅನಂತ ಕೇಶವನಿಗೆ, ಮಾಲತಿಯ ತಾಯಿ ವಿಧವೆ ಚೌಕಿನಲ್ಲಿ ಇನ್ನೂ ಜೀವಂತಳಾಗಿದ್ದಾಳೆ, ಎಂದು ತಿಳಿಸಿದನು ಆದರಿಂದ ಇಡೀ ರಾತ್ರಿಯೇ ಕೇಶವನು ವಧ್ಯೆಗೊಂಡನು. ಕಣ್ಣಿಗೇನೂ ನಿದ್ರೆ ಒರಲಿಲ್ಲ. ಈ ಮಗ್ಗುಲಿನಿಂದ ಆ ಮಗ್ಗುಲದ ಕೂಡಲೇ ಹೊಸ-ಹೊಸ ವಿಚಾರ ಬರುತ್ತಿದ್ದವು "ಆ ವಿಧವೆ ಇನ್ನೂ ಚೌಕಿನಲ್ಲಿ ಇರುತ್ತಾಳೆ. ಆದರೆ ಇದರಿಂದೇನು? ಮಾಲತಿ ಏನಾದರೂ ಅಪವಿತ್ರಳಾಗಬಲ್ಲಳೋ? ಮತ್ತು ಆ ವಿಧವೆಯದಾದರೂ ಏನು ತಪ್ಪು? ನಮ್ಮ ಸಮಾಜ ಈಗ ಹೇಗೆ ನಿರ್ಮಾಣಗೊಂಡಿರುವುದೋ, ಹೇಗೆ ನಡೆಯುತಿರುವುದೋ, ಇಂಥ ಸ್ಥಿತಿಯಲ್ಲಿ ಅನಾಥ ವಿಧವೆಯರಿಗೆ ತೆರೆದ ಬಾಗಿಲು ಇನ್ಯಾವುದು? ಗಂಡಸು ಮೊದಲು ಅವರನ್ನು ಜಗ್ಗುತ್ತಾನೆ, ಆದರೆ ದಿಟ್ಟತನದಿಂದ ಅವರನ್ನು ತನ್ನವರನ್ನಾಗಿ ಮಾಡಿಕೊಳ್ಳುವ ಸಾಹಸವಿಲ್ಲ ಪುನಃ ಕೇಶವನು ತನ್ನಲ್ಲಿಯೆ ಯೋಚಿಸಿದನು ಆದರೆ ಯಾವ ಚೌಕಿನಲ್ಲಿ ಇರುವಳೆಂದು ಹೇಳುವರೋ, ಆಕೆಯೇ ಮಾಲತಿಯ ತಾಯಿ ಎಂಬುದಕ್ಕೆ ಏನು ಪ್ರಮಾಣ? ಜಗತ್ತೆಂದರೆ ಕಡ್ಡಿ ಒಯಿದು ಗುಡ್ಡ ಮಾಡುತ್ತದೆ., ಅಲ್ಲದೇ ನಮ್ಮ ಕಾನ್ಯಕುಬ್ಜ ಸಮಾಜವಾದರೂ ಏನು? ಹೋಟಲುಗಳಲ್ಲಿ ತತ್ತಿ ಹೊಡೆಯುವದು, ಬಾಟಲಿ ಕುಡಿಯುವದು, ಅಲ್ಲಿ ಹೀಗೆ ಆಸರೆ ಎಲ್ಲರ ಮುಂದೆ ನೋಡಿದರ ಅತ್ಯಂತ ಧರ್ಮಾತ್ಮರು! ತಮ್ಮ ಮನೆಯಲ್ಲಿ ಕತ್ತೆ ಸತ್ತು ಬಿದ್ದಿರಲು, ಮಂದಿಯ ಮನೆಯ ನೊಣ ಜಾಡಿಸಲು ಹೋದಂತೆ, ಇನ್ನು ಆಕೆಯೇ ಮಾಲತಿಯ ತಾಯಿ ಎಂದಾದರೂ, ಏನಾದದ್ದು?" ಇಷ್ಟರಲ್ಲಿ ವಿಚಾರ ಹೊರಳಿದವು ಒಂದು ವೇಳೆ ಆಕೆ ಮಾಲತಿಯ ನಿಜವಾಗಿ ತಾಯಿಯೇ ಆದಳು. ಮತ್ತು ನಾನು ಮಾಲತಿಯೊಡನೆ ಲಗ್ನ ಮಾಡಿಕೊಂಡೆ.

ಹೀಗಾದರೆ ಈ ಸಮಾಜದ ಪುರೋಹಿತರು, ಧರ್ಮಧ್ವಜರು, ಇವರೇನು ಸುಮ್ಮನಿರಬಹುದೇ? ಅವರು ನನ್ನ ಕಣ್ಣೆದುರಿಗೇ ಇದೇ ಮನೆಯಲ್ಲಿ ಆಕೆಯನ್ನು ನಿಲ್ಲಗೊಡಬಹುದೇ? ನಾನು ಜಗತ್ತಿನಲ್ಲಿ ಮೋರೆ ತೋರಿಸಲು ಅಪಾತ್ರನಾಗುತ್ತೇನೆ ನನ್ನದು ನನಗೇ ಅಣಕಿಸುವಂತಾಗುವದು ಅಣ್ಣ ಮತ್ತು ಅತ್ತಿಗೆ ಮೊದಲೇ ವಿರುದ್ಧರಾಗಿದ್ದಾರೆ ಅಲ್ಲ ಕೃಷ್ಣ ಮುಂತಾದ ಮಿತ್ರರು ಅವರೂ ಕೂಡ ದಂಡಗಳೆದು ಹಾಕುತ್ತಾರೆ" ಪುನಃ ವಿಚಾರಗಳು ಹೊರಳಿದವು ತನ್ನ ಅಧೈರ್ಯವನ್ನು ಧಿಕ್ಕರಿಸುತ್ತ ಅಂದುಕೊಂಡನು "ಇವೆಲ್ಲ ಪುರಾತನ ಸಂಸ್ಕಾರ, ಬಿಡಬೇಕೆಂದರೂ ಬಿಡುವದಿಲ್ಲ ಸುಮ್ಮನೆ ಕಳ್ಳರಂತೆ ಒಳಸೇರುತ್ತವ ಒಂದು ವೇಳೆ ಹೀಗೆ ತಿಳಿಯುವಾ ಆಕೆ ಮಾಲತಿಯ ತಾಯಿ ನಿಜ ವೇಶ್ಯಾವೃತ್ತಿ ಮಾಡುತ್ತಿದ್ದಾಳೆ, ಸಮಾಜದ ಜನರು ಆಕೆಯನ್ನು ತಂದು ನನ್ನ ಮುಂದೆ ನಿಲ್ಲಿಸುತ್ತಾರ, ನನ್ನ ಅಪಮಾನ ಮಾಡ ಲೆಳಸುತ್ತಾರೆ, ಜಗತ್ತಿಗೆಲ್ಲ ತೋರಿಸುತ್ತಾರೆ, ಒಳ್ಳೇದು ಕಡೆಗೆ ಏನು ಸಿದ್ಧವಾಗುವದು? ಈ ನೀತಿ ಶಾಸ್ತ್ರವನ್ನು ಮಾಡಿದವನು ಯಾರು? ವೇಶ್ಯಾ ಪುತ್ರಿಯೊಡನೆ ಲಗ್ನವಾಗಬಾರದು, ವಿಧವಾ ಪುತ್ರಿಯೊಡನೆ ಲಗ್ನವಾಗಬಾರದು, ಇದನ್ನು ನಿರ್ಮಿಸಿದವರು ಯಾರು? ಇದೇ ಪಾಖಂಡ ಸಮಾಜವಲ್ಲವೇ? ಒಂದು ವೇಳ ಈಕೆಯೊಡನೆ ನಾನು ವಿವಾಹಿತನಾಗಲಿಲ್ಲ ಆಗ ಮಾಲತಿಯ ಗತಿ ಏನು? ಇದಲ್ಲವೇ? ಪೀಢಿ-ಪೀಢಿಯಾಗಿ ವೇಶ್ಯೆಯರು ಬೆಳೆಯುತ್ತಾರೆ, ಅವರ ಚೌಕು ತುಂಬುತ್ತವೆ. ಪಾಪಾಚಾರ ಹೆಚ್ಚಾಗುತ್ತದೆ"

ಕಡಗೆ ಕೇಶವನ ವಿಚಾರಗಳ ಅಸ್ಪಷ್ಟತೆ ಎಲ್ಲ ದೂರಾಯಿತು ಅವನ ಹೃದಯದಲ್ಲೊಂದೇನೋ ಬೆಳಕು ಕಾಣಿಸಿತು ಕೂಡಲೇ ನಿಶ್ಚಯ ಮಾಡಿಕೊಂಡ ಇದನ್ನು ಮನಗಾಣಬೇಕು, ಇದರಲ್ಲಿ ಸತ್ಯವಾದರೂ ಎಷ್ಟು ಮಟ್ಟಿಗಿದೆ? ನಾಳೆ ಹೋಗವದೆಂದು ಗೊತ್ತುಮಾಡಿಕೊಂಡನು ಮೆಲ್ಲನೆ ಅವನಿಗೆ ನಿದ್ರೆ ಬಂದಂತಾಯಿತು. ಎಚ್ಚತ್ತು ನೋಡುತ್ತಾನೆ ಆಗಲೇ ಹೊತ್ತೇರಿದೆ ಅವನು ಬೇಗ ಎದ್ದು ಕೈಕಾಲು ಮೋರೆ ತೊಳೆದು ಹೊರಡಲನುವಾದನು.

ಮನೆಯಿಂದ ಹೊರಟು ತನ್ನ ಗೆಳೆಯನಾದ ವಿಪಿನನನ್ನು ಶೋಧಿಸ ತೊಡಗಿದನು ವಿಪಿನನು ಶಾಲೆಯಿಂದ ಆರಂಭವಾಗಿ ಕೇಶವನ ಸಹಪಾಠಿ. ಮತ್ತು ಅಂತರಂಗ ಮಿತ್ರನೂ ಸರಿ ಈಗೇಕೋ ಅವನು ಕಾಲೇಜ

ಬಿಟ್ಟಿದ್ದನು  ಆರ್ಟ್ಸ್ ಸ್ಕೂಲಿನಲ್ಲಿ ಚಿತ್ರಕಲೆ ಕಲಿಯುತ್ತಿದ್ದನು  ಆದರೆ ಚಿತ್ರಕಲೆಯ ಉತ್ಕರ್ಷಕ್ಕಾಗಿ ಆರ್ಟ್ಸ್ ಸ್ಕೂಲಿನ ನಿರ್ಜೀವ ಮಾಡೆಲುಗಳಿಂದ ತೃಪ್ತಿಯಾಗದೇ, ಯಾವಾಗ ಅವನು ಸಜೀವ ಮಾಡೆಲುಗಳ ಬದಲಾವಣೆಯಲ್ಲಿ ತೊಡಗಿದನೋ, ಆಗ ಕೇಶವನೊಡನೆ ಅವನ ಬಳಕೆ ಕಡಮೆಯಾಗಿದ್ದಿತು. ಕಿಂತು ಪೂರ್ಣವಾಗೇನೂ ನಿಂತಿರಲಿಲ್ಲ, ವಿಪಿನನು ಲಜ್ಜಾ–ಸಂಕೋಚಗಳಿಂದ ಕೇಶವನ ಕಣ್ಣು ತಪ್ಪಿಸಿ ಓಡಾಡುತಿದ್ದ  ಆದರೆ ಕೇಶವನು ತನ್ನ ಈ ಸೌಂದರ್ಯ ಪಿಪಾಸು ಹಾದಿತಪ್ಪಿದ ಮಿತ್ರನ ಸೌಂದರ್ಯ ಲಾಲಸೆಯನ್ನು ಕಡಮೆ ಮಾಡಲು ನಡುನಡುವೆ ಒಳ್ಳೇ ಬಾಣ ಹಾರಿಸುತ್ತಿದ್ದ. ಆದರ ಕಡೆಗೆ ಕಂಡುದೇನೆಂದರೆ ವಿಪಿನ ಆರ್ಟ ಸ್ಕೂಲ ಬಟ್ಟು ಅನೀತಿಯನ್ನಾಶ್ರಯಿಸಿದ್ದಾನೆ ಹೀಗಾಗಿ ಕೇಶವ ಅವನ ಹಾದಿ ಬಿಟ್ಟಿದ್ದ ಅಷ್ಟೇ

ದಾರಿ ನಡೆಯುತ್ತಿರುವಾಗ ಕೇಶವನ ಮನಸ್ಸು ಗುಂಗಾದಂತಾಯಿತು, ಅವನಿಗನಿಸುವದೇನೆಂದರೆ 'ಇನ್ನು ಪಾಪವು ಇಲ್ಲವಾದಂತೆ, ಈಗ ಆದ ಪ್ರಾಯಶ್ಚಿತ್ತ ಸಿದ್ಧತೆ, ತುಸು ದಿನಗಳಲ್ಲಿ ವೇದಮಂತ್ರಘೋಷ ನಡೆದಿರುವಾಗ ಪ್ರಾಯಶ್ಚಿತ್ತ ಪೂರ್ಣವಾಗುವದು  ಆ ಮಂಗಲದಿನದ ಕಲ್ಪನಾ ಚಿತ್ರ ನಿರ್ಮಿಸುತ್ತ ಅವನ ಮನಸ್ಸು ಗಾಳಿಯಲ್ಲಿ ತೇಲಿಹೋದಂತೆನಿಸಿತು  ಬಹಳ ದಿನಗಳಿಂದ ಸ್ನೇಹಭರಿತವೂ ಅಶ್ರುಪೂರಿತವೂ ಆದ ಅಸ್ಪಷ್ಟ ಬಾಡಿದ ಮೊಗವು, ಕೇಶವನ ಒಳಗಣ್ಣಿಗೆ ಮಾರ್ಪಾಟಾಗಿ ಕಾಣತೊಡಗಿತು. ಹೇಗಂದರೆ ನಾಚಿಕೆಯಿಂದ ಕೆಂಪಡರಿದ ಮೊಗದ ಸಂತೃಪ್ತ ಪ್ರಿಯೆ ನವಿನಗೆ ಚಲ್ಲುತ್ತ ನಿಂತುಕೊಂಡಿದ್ದಾಳೆ  ಮಳೆಯ ನಂತರದ ಬಿಸಿಲಿನಂತೆ, ಕಂಣೀರಿನ ನಂತರದ ನಗುವಿನಂತೆ, ಈ ಮಧುರ ಮತ್ತು ಕರುಣ ಕಲ್ಪನೆಯು ಅವನ ನೊಂದಮನವನ್ನು ಮೆಲ್ಲನೆ ಮುಗ್ಧಗೊಳಿಸಿಬಿಟ್ಟಿತು

ವಿಪಿನನ ಬಾಗಿಲಿಗೆ ಬಂದು ಕೇಶವನು ಒಳಗೆ ಸುದ್ದಿ ತಿಳಿಸಿದನು. ವಿಪಿನ ಇದೀಗ ಎದ್ದು ಮೋರೆ ತೊಳೆದುಕೊಂಡು ಮುಖಕ್ಷೌರ ನಡೆಸಿದ್ದನು ಇಷ್ಟರಲ್ಲಿ ಹೊರಗಾರೋ ಕರೆಯುತ್ತಾರೆ ಎಂಬ ಸಮಾಚಾರ ತಿಳಿದು ಬಂತು ಬೇಗನೆ ಹೊರಬಂದು ನೋಡಿದನು ಆಗ ಅಲ್ಲಿದ್ದ ಕೇಶವನನ್ನು ಕಂಡು ಅವನಿಗೆ ಆಶ್ಚರ್ಯವೆನಿಸಿತು.

"ಹಾದಿ ತಪ್ಪಿ ಹೋಯಿತೇನೋ ?"

ನಗುತ್ತಲೇ ಕೇಶವ ನುಡಿದ ''ಹಾದಿ ಏನೂ ತಪ್ಪಿಲ್ಲ, ಕಿಂತು, ತಪ್ಪಿದ ದಾರಿಗೆ ಬಂದಿದ್ದೇನೆ. ನಾನು ಈಗ ಚೌಕದಲ್ಲಿರುವ ಒಂದು ಮನೆಗೆ ಹೋಗ ಬೇಕಾಗಿದೆ ನೀನು ಆ ಸ್ಥಳ ಬಲ್ಲವ ಅದಕಾಗಿ ಜೊತೆ ಮಾಡಿಕೊಳ್ಳೋಣ ವಂದು ಬಂದಿದ್ದೇನೆ ಏಳು ನಡೆ ಇನ್ನು ಎಷ್ಟೂ ತಡ ಮಾಡಬೇಡ

ಈ ಮಾತಿನಲ್ಲಿ ತುಂಬ ರಹಸ್ಯವಿದೆ- ಎಂಬ ವಿಷಯಕ್ಕೆ ವಿಪಿನನಿಗೆ ಸಂದೇಹವೇ ಬರಲಿಲ್ಲ ''ಇದೇನಯ್ಯಾ? ಇಷ್ಟು ಬೆಳಗಿನಲ್ಲಿಯೇ ಚೌಕಿನ ಉದ್ಧಾರವೋ? ಇದೂ ನಿನ್ನ ಆಶ್ರಮದ ಉದ್ದೇಶಗಳಲ್ಲೊಂದೇನು ? ಆದರೆ ಜಗತ್ತು ಅದೇನು ಚನ್ನಾಗಿಲ್ಲ, ಚಿತ್ರ ತೆಗೆದುಕೊಳ್ಳಲು ಸಹ ಸರಿಯಾಗಿಲ್ಲ ಮತ್ತು ನೀವು ಪ್ರಚಾರ ಮಾಡಲು ಸಹ ಯೋಗ್ಯವಿಲ್ಲವೆಂದು ಸಹ ಬೇರೆ ಹೇಳಬೇಕೆ?

ಆದರ ನಗೆ ಮಾತಿನ ಭಂಗಿಯನ್ನು ಬಿಟ್ಟು, ಆಗ್ರಹದಿಂದ ಕೇಶವ ಯಾವಾಗ ಹೇಳಿದನೋ ಆಗ ವಿಪಿನ ಅವನನ್ನು ದಿಟ್ಟಿಸಿ ನೋಡತೊಡಗಿದ

ಆತುರತೆಯಿಂದ ಕೇಶವ ಹೇಳಿದ ''ಹು ಏಳು ಏಳು ನನಗ ತಡ ಯಲು ಸಮಯ ಒಹುಳಿಲ್ಲ"

ಚೌಕಿನಲ್ಲಿ ಯಾರ ಬಳಿಗೆ?"

ತನ್ನ ಕೈಚೀಲದಿಂದ ಒಂದು ಕಾಗದದ ತುಂಡನ್ನು ತೆಗೆದು ಕೇಶವ ನುಡಿದ ಜಾವಿತ್ರಿ ಉರ್ಫ ಛೋಟೀರಾಣಿಯ ಬಳಿಗೆ"

''ನಂಬರು ಎಷ್ಟು?

' ಗೊತ್ತಿಲ್ಲ. ಅದೆಲ್ಲ ಗೊತ್ತಿದ್ದರೆ ನಿನ್ನ ಬಳಿಗೇಕೆ ಬರುತ್ತಿದ್ದೆ!

ಏನು ಅವಶ್ಯಕತೆ?

ಅದನ್ನು ಹೇಳಲಾರೆ. ನನ್ನಿಂದ ತುಸ ಮಾತ್ರ ತಿಳಿಯ ಬಹುದು. ಆದರ ಮುಂದಿನದನ್ನೇನೂ ಕೇಳಬೇಡ.

ಕೇಶವನ ಮಾತಿನ ಬಗೆಯನ್ನು ನೋಡಿ, ಹೆಚ್ಚು ಕೇಳಲು ವಿಪಿನನಿಗೆ ಸಾಹಸವಾಗಲಿಲ್ಲ 'ನಡೆಯಪ್ಪ ಹುಡುಕುವಾ,'

ಚೌಕು ಬಂದಕೂಡಲೆ ಒಬ್ಬ ಎಲೆ ಅಡಕೆ ಅಂಗಡಿಯವನ ಮುಂದೆ ಗಾಡಿ ನಿಲ್ಲಿಸಿ, ವಿಪಿನ ಆ ಅಂಗಡಿಯವನಿಗೆ ಹೇಳಿದನು. ಏ, ತುಸು ನೀಲಾ ಇರುವನೇನೋ ಕೂಗು.'

ಕೂಡಲೇ ನೀಲರತನ ಬಂದು ನಿಂತನು ಅವನು ಜಾತಿಯಿಂದ ಕವ್ಹಾರ ಅವನ ಉದ್ಯೋಗ ದಲಾಲಿ. ವಿಪಿನನನ್ನು ನೋಡಿ ಒಳ್ಳೇ ಆದರ ದಿಂದ ವಂದಿಸಿ ಹೇಳಿದ. ''ಮತ್ತೇನು ಬಾಬು, ಏನಪ್ಪಣೆ?

'ನೀಲೂ ಇಲ್ಲಿ ಜಾವತ್ರಿ ಎಲ್ಲಿರುತ್ತಾಳೆ ಬಲ್ಲೆಯಾ?'

'ಯಾರು ಛೋಟಾರಾಣಿ ಬೀಬಿಯೋ?

'ಹಾಂ'

'ನಡೆಯಿರಿ, ತೋರಿಸುತ್ತೇನೆ ಕೇಶವನ ಕಡೆಗೆ ಹೊರಳಿ ಮೆಲ್ಲನೆ ನುಡಿದನು ನನ್ನ ಫೀ, ಸಾಹೇಬ?'

ವಿಪಿನ ಬೆಸರಿಸಿದನು 'ಛೀ ಕತ್ತೆ, ನಡೆಯಾಚೆ ಅದು ಹಿಂದಿನಿಂದ.'

ಇದರ ಅರ್ಥವನ್ನು ತಿಳಿದ ಕೇಶವ ತನ್ನ ಪಾಕೇಟಿನಿಂದ ಒಂದು ರೂಪಾಯಿ ತೆಗೆದು ವಿಪಿನನ ಕೈಯಲ್ಲಿಟ್ಟನು

ಒಂದು ಎರಡಂತಸ್ತಿನ ಮನೆಮುಂದೆ ಗಾಡಿ ನಿಲ್ಲಿಸಿ ನೀಲು ಅಂದ. ''ಇಳಬೇಕು." ವಿಪಿನ ಹೇಳಿದ ''ಮೊದಲು ನೀನು ನೋಡಿಬಾ. ಯಾರಾದರೂ ಒಳಗಿದ್ದರೆ ಬಂದು ಹೇಳು"

ನೀಲು ತಿರುಗಿ ಬಂದು ಹೇಳಿದನು. "ಛೋಟಿ ರಾಣಿಯು ನಿಮ್ಮನ್ನು ಕರಯುತ್ತಿದ್ದಾಳೆ, ಒಳಗೆ ಯಾರೂ ಇಲ್ಲ"

ಕೇಶವ ಗಾಡಿಯಿಂದಿಳಿದ ಅವನ ಹಿಂದ ವಿಪಿನನೂ ಗಾಡಿಯಿಂದಿಳಿದ. ಕೇಶವ ಆಗ ಅವನನ್ನು ತಡೆದು ಹೇಳಿದನು ಊಹುಂ ನೀನು ಗಾಡಿಯಲ್ಲೇ ಕುಳಿತಿರು. ನಾನೊಬ್ಬನೇ ಹೋಗಬೇಕು ಎಂದು ಹೇಳಿ ನಿಲೂನ ಸಂಗಡ ಮನೆಯೊಳಕ್ಕೆ ಪ್ರವೇಶಿಸಿದನು ಮೆಟ್ಟಲೇರಿ ಅಂತಸ್ತಿಗೆ ಬಂದನು ಒಂದು ಶೃಂಗಾರಿತ ಕೊಟಡಿಯ ಬಾಗಿಲಿಗೆ ಹೋಗಿ ನೀಲೂ ಹೇಳಿದ 'ಬೀಬೀ ಬಾಬೂ ಅವರು ಬಂದಿದ್ದಾರೆ'

ಸುಸಜ್ಜಿತಳಾದ ಜಾವಿತ್ರಿಯು ಬಾಗಿಲು ಬಳಿ ಬಂದು ಕರೆದಳು ದಯಾಮಾಡಿಸಬೇಕು.'

ಜಾವತ್ರಿಯನ್ನು ನೋಡಿ ಕೇಶವ ನಡುಗಿ ಹೋದ ಅವನ ಮುಖ ಮುದುರಿ ಹೋಯಿತು. ಬಾಯೊಣಗಿ ಒಂದು ಶಬ್ದ ಸಹ ಮಾತಾಡಲಾಗಲಿಲ್ಲ. ಇದು ಮಾಲತಿಯ ಇನ್ನು ಹದಿನೈದುವರ್ಷಗಳ ನಂತರದ ಚಿತ್ರವೊ,

ಅಥವಾ ಮಾಲತಿಯು ಇವಳ ಹದಿನೈದು ವರ್ಷಗಳ ಹಿಂದಿನ ಚಿತ್ರವೋ! ಕೇಶವ ಬಂದದ್ದು ಹೋಲಿಸಿ ನೋಡಲಿಕ್ಕೆ ಇಲ್ಲಿ ಮೂರ್ತಿಮಂತ ಪ್ರಮಾಣ ಎದುರಿಗೆ ನಿಂತುಕೊಂಡಿದ್ದಿತು ನೋಟದಲ್ಲಿ ಮಾಲತಿ, ನಗೆಯಲ್ಲಿ ಮಾಲತಿ, ಮಾಟದಲ್ಲಿ ಮಾಲತಿ, ಭಾವಭಂಗಿಯಲ್ಲಿ ಮಾಲತಿ! ಇನ್ನು ಹೆಚ್ಚು ಏನಾದರೂ ಕೇಳಿದರೂ ಹಾನಿಯಿಲ್ಲ ನಿಜ ಆದರೆ ಮುಖ್ಯವಾಗಿ ತಿಳಿಯ ಬೇಕಾದುದು ಇದು ಮಾಲತಿಯ ತಂದೆಯೊಡನೆ ಈಕೆಯ ನಿಜ ಸಂಬಂಧ ಯಾವುದಿತ್ತು? ಯಾವ ರೀತಿಯದಿತ್ತು ಜಾವತ್ರಿ ಅವನ ಲಗ್ನದ ಹೆಂಡತಿಯೋ ಅಥವಾ ಸೂಳೆಯೋ?

ಆಶ್ಚರ್ಯದಿಂದ ಮುಂಗಾಣದಾಗಿರುವ ಕೇಶವನನ್ನು ನೋಡಿ ಜಾವತ್ರಿ ಮಂದಹಾಸದಿಂದ ಮಾತಾಡಿದಳು. 'ಬಾಗಿಲಲ್ಲೇಕೆ ನಿಲ್ಲುವದು. ಒಳಗೆ ಬಂದು ವಿಶ್ರಮಿಸ ಬಹುದಲ್ಲ?

ಜಾವತ್ರಿಯ ಮಾತುಗಳಿಂದ ಎಚ್ಚತ್ತ ಕೇಶವ ಕೋಟಡಿಯಲ್ಲಿ ಪ್ರವೇಶಿಸಿ ನುಡಿದನು 'ನಾನು ನಿಮಗೆ ಒಂದೆರಡು ಮಾತುಗಳನ್ನು ಕೇಳ ಬಂದಿದ್ದೇನೆ ಬಹುಶಃ ಅರ್ಧಗಂಟೆಗಿಂತ ಹೆಚ್ಚು ಸಮಯ ಹಿಡಿಯಲಿಕ್ಕಿಲ್ಲ ಇದಕಾಗಿ ನೀವು ಎಷ್ಟು ರೊಕ್ಕ ತಕ್ಕೊಳ್ಳುವಿರಿ?'

ಜಾವತ್ರಿ ತುಸು ವೇಳೆ ವಿಚಾರ ಮಗ್ನಳಾಗಿ ನಕ್ಕು ಬಿಟ್ಟಳು. 'ಇದಕ್ಕೂ ಮೊದಲು ನಾನು ಒರಿಮೂತಿಗಾಗಿ ರೊಕ್ಕ ತೆಗೆದು ಕೊಂಡಿಲ್ಲ ಗಾಯನಮಾಡಿ ಮಾತ್ರ ರೊಕ್ಕ ತಕ್ಕೊಳ್ಳುತ್ತೇನೆ ನೀವು ಗಾಯನ ಕೇಳ ಬಯಸಿದ್ದರ, ನಾನು ಇಂತಿಷ್ಟೆಂದು ಹೇಳುತ್ತಿದ್ದೆ ತಮಗೇನು ಬೇಕೋ ಕೇಳಿಕೊಳ್ಳ ಬಹುದು ಅದಕ್ಕೇನೂ ರೊಕ್ಕ ಕೊಡಬೇಕಾದುದಿಲ್ಲ

'ವೇಳೆಯ ಬೆಲೆ ಎಲ್ಲರಿಗೂ ಉಂಟು ನಾನು ಈ ಸಮಯದಲ್ಲಿ ಇಷ್ಟು ಕೊಡುತ್ತೇನೆ ನಂತರ ಅವಶ್ಯವೆನಿಸಿದರೆ ಹೆಚ್ಚು ಕೊಡುವೆನು' ಎಂದು ಮಾತಾಡಿ ಕೇಶವನು ತನ್ನ ಪಾಕೇಟಿನಿಂದ ಹತ್ತು ಹತ್ತರವು ಎರಡು ನೋಟು ತೆಗೆದು ಜಾವತ್ರಿಯ ಮುಂದಿಟ್ಟನು

ರೂಪಾಯಿಗಳ ಆಟ ಜಾವತ್ರಿಗೆ ಹೊಸದೇನೂ ಅಲ್ಲ. ಆಕೆಯಿಂದ ವೀಳ್ಯ ತಕ್ಕೊಳ್ಳಲಿಕ್ಕೆ ಒಂದು ನೂರು ರೂಪಾಯಿ ನೋಟು ಸಹ ಆಕೆಯ ಕೈಯ್ಯಲ್ಲಿ ಬಿದ್ದುದ್ದುಂಟು ಆದರೆ ಎರಡು ಮಾತು ಕೇಳಿಕೊಳ್ಳಲಿಕ್ಕೆ ಯಾರೂ

ಹೀಗೆ ರೂಪಾಯಿ ತೆತ್ತಿರಲಿಲ್ಲ ಹೀಗಾದುದರಿಂದ ಆಕೆಗೊಳ್ಳೇ ಕುತೂಹಲ ವೆನಿಸಿತು ಆಕೆ ನುಡಿದಳು 'ಕೇಳಿ, ನೀವೇನು ಕೇಳಬೇಕಾಗಿದೆ?'

ಕೇಶವ ತನ್ನ ಪಾಕೀಟಿನಿಂದ ಒಂದು ಫೋಟೋ ತೆಗೆದನು ಮತ್ತು ಅದನ್ನು ಜಾವತ್ರಿಯ ಮುಂದೆ ಹಿಡಿದು ವಿಚಾರಿಸಿದನು, 'ಈಕೆಯನ್ನು ತಾವು ಗುರುತಿಸುತ್ತೀರಾ?

ತುಸು ವೇಳೆ ಜಾವತ್ರಿ ತನ್ನ ಮನೋಯೋಗದಿಂದ ನೋಡಿ ತನ್ನೊಳಗೆ ಏನೋ ಅಸ್ಪಷ್ಟ ಮಾತಾಡಿಕೊಂಡಳು ನಂತರ ಬಹು ವ್ಯಗ್ರಳಾಗಿ ಹೇಳಿದಳು "ಈಕ ನನ್ನ ಮಗಳು ಮಾಲತಿ ಈಕೆಯನ್ನು ನೀವು ಹೇಗೆ ತಿಳಿಯುತ್ತೀರಿ? ಇವಳೆಲ್ಲಿ ಹೇಗಿದ್ದಾಳೆ ಹೇಳಿ ಎಲ್ಲಾ ಹೇಳಿಬಿಡಿ"

ಚಿತ್ರವನ್ನು ಒಳಗೆ ಹಾಕಿಕೊಂಡು ಕೇಶವ ಅಂದನು "ಆಕಯ ಸಂಬಂಧವಾಗಿ ನಾನು ಕೆಲವು ಸಂಗತಿ ತಿಳಿಯಬೇಕಾಗಿದೆ. ಅವು ತಿಳಿಯುವವರೆಗೆ ಹೆಚ್ಚಿನದೇನೂ ಹೇಳಲಾರ ನಾನು ತಿಳಿದುಕೊಳ್ಳಲು ಬಂದಿದ್ದೇನೆ ತಿಳಿಸಲು ಅಲ್ಲ

ಜಾವತ್ರಿ ಪ್ರಾರ್ಥಿಸಿದಳು. 'ನೀವೇನು ಬೇಕೋ ಕೇಳಬಹುದು ಆದರೆ ಸೆರಗೊಡ್ಡಿ ಬೇಡಿಕೊಳ್ಳುತ್ತೇನ ಆಕ್ಕಯ ಎಲ್ಲಾ ಸುದ್ದಿ ನನಗೆ ತಿಳಿಸದೆ ನಿಮ್ಮನ್ನು ಹೋಗಗೊಡಲೆ ಏನು, ಆಕೆ ನಿಮ್ಮ ಬಳಿಯಲ್ಲಿರುವಳೆ?"

ಅದಕ್ಕೇನೂ ಉತ್ತರಿಸದೇ ಕೇಶವ ಕೇಳಿದನು 'ಮಾಲತಿಯ ಅಕ್ಕ ತಂಗಿ ಯಾರನ್ನಾದರೂ ನೀವು ಬಲ್ಲಿರಾ?''

ವ್ಯಗ್ರಳಾಗಿ ಜಾವತ್ರಿ ಅಂದಳು "ಹಾಂ, ಆಕೆಯ ಹೆಸರು ರಾಮಕಲಿ. ಆದರೆ ಆಕ ನನ್ನ ಮಗಳಲ್ಲ"

"ಹಾಗಾದರೆ ಆಕೆ ಯಾರ ಮಗಳು?''

ಹಿಂದೆಳೆಸುತ್ತ ಜಾವತ್ರಿ ಹೇಳಿದಳು. "ರಾಮಕಲಿ ಪಂಡಿತರಾಮರತನರ ಸ್ತ್ರೀಯ ಮಗಳು ನಾನು ಆಕೆಯನ್ನು ಜೋಪಾನ ಮಾಡಿದ್ದೇನೆ ಹೊಟ್ಟೆಯ ಮಗಳಂತೆ ಆಕೆಯನ್ನು ಪ್ರೀತಿಸುತ್ತಿದ್ದೆ ಏನು ಆಕೆಯ ಸುದ್ದಿಯನ್ನು ನೀವು ಬಲ್ಲಿರಾ? ಹೇಳಿರಿ ದಯಮಾಡಿ ಹೇಳಿರಿ. ಇನ್ನು ಮೇಲೆ ನನಗೆ ತಡೆಯಲಿಕ್ಕಾಗದು."

ಜಾವತ್ರಿ ಈ ಬಾಯಿ ಬಿಡುವದನ್ನು ಲಕ್ಷಿಸದೇ ಕೇಶವ ಕೇಳಿದನು.

"ರಾಮುಕಲಿಯ ತಂದೆ ಪಂಡಿತ ರಾಮರತನ, ಇವರೇ ಮಾಲತಿಗೂ ತಂದೆಯೋ ?"

"ಹಾಂ"

ನಾನು ಬರಿ ಇದೊಂದು ಮಾತು ಮಾತ್ರ ಕೇಳುತ್ತೇನೆ ಪಂಡಿತ ರಾಮ ರತನರೊಡನೆ ನಿಮಗೇನು ಸಂಬಂಧ ?

ಜಾವತ್ರಿಯ ಮುಖ ಕೆಂಪಡರಿತು —ಕೇಶವನ ಪ್ರಶ್ನೆಗೆ ಆಕೆ ಉತ್ತರ ಕೊಡದೆ ಸುಮ್ಮನೆ ಕುಳಿತಳು

ಕೇಶವ ಗಟ್ಟಿಸಿ ಕೇಳಿದನು "ಮುಖ್ಯವಾಗಿ ಇದನ್ನೇ ನಾನು ತಿಳಿಯ ಬೇಕಾಗಿದೆ ಹೇಳಿ, ಅವರೊಡನೆ ನಿಮಗೇನು ಸಂಬಂಧ ?

ಕಣ್ಮುಚ್ಚಿ ನಡುಗುವ ದನಿಯಿಂದ ಹೇಗೋ ಜಾವತ್ರಿ ಹೇಳಿದಳು "ನಾನು ಅವರ ಹೆಂಡತಿ ಅಲ್ಲ "

"ಇನ್ನು ನಾನು ಹೆಚ್ಚು ಕೇಳುವದಿಲ್ಲ ನಾನು ಹೊರಟೆ ತಮಗೆ ಇನ್ನೇನಾದರೂ ಹೆಚ್ಚು ಕೊಡಬೇಕಾಗುವದೋ?"

ಜಾವತ್ರಿ ಕೇಶವನ ಹಾದಿ ಅಡ್ಡಗಟ್ಟಿದಳು. ಮತ್ತು ಕಾತರಳಾಗಿ ನುಡಿದಳು. "ನನ್ನಿಂದ ಎಲ್ಲಾ ಮಾತು ತಿಳಿದುಕೊಂಡು, ನನಗೆ ಮಾತ್ರ ಏನೂ ತಿಳಿಸದೇ ಹೋಗುವದು ನಿಮಗೆ ಒಳಿತಲ್ಲ ಮಾಲತಿಯ ಸುದ್ದಿ ತಿಳಿಯ ಬೇಕೆಂದೇ ನಾನು ಎಲ್ಲಾ ಸಂಗತಿ ತೋಡಿಕೊಂಡಿದ್ದೇನೆ,—ಹಾಗಿರದಿದ್ದರೆ ಏನೂ ಹೇಳುತ್ತಿರಲಿಲ್ಲ—ನಾನು ಎಂಥ ಪಾಪಿಯೋ ಆಗಲೊಲ್ಲೆ—ಮಾಲತಿ ಅದು ನನ್ನ ಹೊಟ್ಟೆಯ ಕರುಳು "

ತುಸು ವಿಚಾರಿಸಿಕೊಂಡು ಕೇಶವ ಅಂದ "ಮಾಲತಿಯ ಸುದ್ದಿ ನೀವೇನು ತಿಳಿಯ ಬೇಕಾದ್ದು ? ಮಾಲತಿ ಆರಾಮದಿಂದ್ದಾಳೆ ಓದು ಬರಹ ಕಲಿತಿದ್ದಾಳೆ ಆಕೆಯ ವಿಷಯದಲ್ಲಿ ನೀವೇನೂ ಚಿಂತೆ ಮಾಡಬೇಕಾದುದು ಇಲ್ಲ.

ವ್ಯಗ್ರಭಾವದಿಂದ ಕೇಳಿದಳು. "ಆಕೆ ಇರುವದೆಲ್ಲಿ ? ಸಭ್ಯರ ಮನೆ ಯಲ್ಲವಷ್ಟೆ ?

"ಹಾಂ"

ತಡೆದು ನಿಂತು ಉಸಿರು ಮೆಲ್ಲನೆ ಬಿಟ್ಟು ಜಾವತ್ರಿ ನುಡಿದಳು ''ನಿಮ್ಮ ಮನೆಯಲ್ಲಿಯೇ ಇರುವಳೇ?''

ಹುಂ—ನಮ್ಮ ಮನೆಯಲ್ಲಿಯೇ''

ಹರಾತ ಜಾವತ್ರಿಯ ಮನದಲ್ಲಿ ಎಂಥಾ ಉತ್ಸಾಹ ಬಂತೋ ತಿಳಿಯದು ಬೇಗ ಬೇಗ ಮಾತಾಡಿ ಬಿಟ್ಟಳು ''ಮಾಲತಿಯ ಲಗ್ನ ಅವಶ್ಯವಾಗಿ ಆಗಿ ಹೋಗಿರಬೇಕು.--ನೀವು ಮಾಲತಿಗೆ ಏನಾಗಬೇಕು?

ಜಾವತ್ರಿಯ ಈ ಪ್ರಶ್ನೆಗೆ ಉತ್ತರಕೊಡಲು ತಿಳಿಯದೇ ಕೇಶವ ಸುಮ್ಮನಾದ ಮಾಲತಿಯ ಲಗ್ನವಾಗುವದೆಂದರ ಒದೊಂದು ಹೇಗೆ ಅನಿಶ್ಚಿತವೊ ಹಾಗೆ ಮಾಲತಿಗೆ ಇವನ ಸಂಬಂಧವೂ ಅನಿರ್ದಿಷ್ಟ! ಸಹಸಾ ಇವ್ರುಗಳಿಗೆ ಉತ್ತರ ಕೊಡಲು ಬರುವಂತಿರಲಿಲ್ಲ

ಕೇಶವನು ಸುಮ್ಮನಿರುವದನ್ನು ನೋಡಿ ಜಾವತ್ರಿ ಜಾಗೃತಳಾಗಿ ನಾಚಿದಳು ಬೇಗ–ಬೇಗ– ಭುಜ ಪ್ರದೇಶಕ್ಕೆ ಸರಿದ ಸೆರಗನ್ನು ತಲೆ ಮೇಲೆ ಸರಿಸಿ ಕೊಳ್ಳುತ್ತ ಕಂಪನಗೊಳ್ಳುವ ಶಬ್ದಗಳನುಚ್ಚರಿಸಿದಳು "ಹಾಗಾದರ ನೀವು ಏನು ಆಕೆಯ ಸ್ವಾಮಿ? ನೀವು ಮತ್ತೆ–ನನ್ನ–" ವಾಕ್ಯ ಮುಗಿಸುವ ಮೊದಲೇ ಜಾವತ್ರಿ ನಡುಗಿ ಹೋದಳು ನಾಲಿಗೆ ನಿಂತಿತು,ತನ್ನ ತಿರಸ್ಕೃತ ಹೀನ ಬಾಳುವೆಯನ್ನು ನೆನೆದು, ಕೇಶವನ ಜೊತೆಗೆ ತನ್ನ ಸಂಬಂಧ ಜೋಡಿಸಲು ಆಕೆಗೆ ಸಾಹಸವಾಗಲಿಲ್ಲ

''ಇದುವರೆಗೆ ನಾನು ತಮಗ ಯಾವ ಸಂಬಂಧಿಕನೂ ಅಲ್ಲ ಆದರ ಎಂದು ಆಗುವೆನೋ ಅಂದು ಬರುತ್ತೇನೆ-ನಿಮ್ಮನ್ನು ಕರದೊಯ್ಯಲು, ಈಗ ನಾನು ಹೊರಟೆ, ನನಗೆ ಸಮಯವಿಲ್ಲ"

ಜಾವತ್ರಿಯ ಕಂಗಳು ನೀರುತುಂಬ ಕಪೋಲಗಳ ಮೇಲೆ ಧಾರೆ ಗಟ್ಟಿದ್ದವು ಕೇಶವನ ಕಡಗಲಿದೇ ದುಃಖ ದೃಷ್ಟಿಯನ್ನು ತಿರುಗಿಸಿ ನುಡಿದಳು ''ಹೋಗಿರಿ ನೀವು ಬರುವ ದಾರಿಕಾಯುತ್ತ ನಾನೂ ಕಲವುದಿನ ಇಲ್ಲಿರುತ್ತೇನೆ ಆದರೆ ಎಲ್ಲಿಯೂ ನನ್ನನ್ನು ಕರದೊಯ್ಯಬಾರದು, ಹೋಗಬೇಕಾದ ಸ್ಥಳಕ್ಕೆ ಭಗವಂತ ದಯಮಾಡಿಸರೆ ಹೋಗೇ ಹೋಗುತ್ತೇನ ಆದರೆ ಹೋಗು ಮೊದಲು ಮಾಲತಿಯನ್ನೊಂದುಸಾರೆ ನೋಡುವದೊಂದು ಇಚ್ಛೆ ದಯ ಮಾಡಿ ತೋರಿಸುವಿರಾ?

"ಒಳ್ಳೇದು, ತೋರಿಸುತ್ತೇನೆ "

"ಆಕೆಗ—ನನ್ನನ್ನು ನೋಡದಾದರೆ—ಕಾಶೀ ವಿಶ್ವನಾಥನ ಮಂದಿರದ ಬದಿ ನನ್ನನ್ನು ಕೂಡಿಸಿ ನೀವೀರ್ವರೂ ಪ್ರದಕ್ಷಿಣೆ ಹಾಕಿರಿ ನಾನು ಕಣ್ತುಂಬ ನೋಡುತ್ತೇನೆ ಅದರಿಂದ ಮಾಲತಿಯ ಪಾಪಿಣಿ ತಾಯಿ ಜೀವದಿಂದ್ದಾಳೆ, ಎಂದು ಯಾರಿಗೂ ತಿಳಿಯುವದಿಲ್ಲ ಆಕೆಯನ್ನು ಬಿಟ್ಟುಬರಬೇಕಾದರೆ ನನಗೆ ಬಹಳ ಕಷ್ಟವಾಯಿತು ಆದರೆ ಈಗ ನೋಡಿದರ—ಬಿಟ್ಟು ಬಂದದ್ದು ಬಂಗಾರದಂಥ ಕೆಲಸವಾಗಿದೆ ಕಟ್ಟಿಕೊಂಡು ಬಂದಿದ್ದರೆ—ಆಕೆಯನ್ನು ಈ ಪಾಪದ ಮಡುವಿನಲ್ಲಿ ಮುಳುಗಿಸುತ್ತಿದ್ದೆ "

ಗಡಿಯಾರ ತೆರೆದು ನೋಡಿಕೊಂಡು ಚಂಚಲನಾಗಿ ಕೇಶವ ನುಡಿದ ಇನ್ನು ತಡೆಯುವದು ನನಗೆ ಸಾಧ್ಯವಿಲ್ಲ ಹೊರಟೆ "

ಜಾವತ್ರಿ—ಆ ಹತ್ತರ ನೋಟುಗಳ ಕಡೆಗ ಬೊಟ್ಟು ಮಾಡಿ ತೋರಿಸಿ ಹೇಳಿದಳು "ಇವುಗಳನ್ನು ತಕ್ಕೊಂಡು ಹೋಗಿರಿ "

ತುಸು ವಿಚಾರಿಸಿಕೊಂಡು ಕೇಶವ ಎರಡೂ ನೋಟು ಪಾಕೀಟಿನಲ್ಲಿ ಹಾಕಿದನು ತಿರುಗಿ ಏನೂ ಮಾತಾಡದೆ ಸುಮ್ಮನೆ ಹೊರಹೊರಟನು

ತನ್ನ ತಲೆಯನ್ನು ಗೋಡೆಗಾನಿಸಿ ಅದರ ಆಶ್ರಯದಿಂದ ಎಷ್ಟೋ ಹೊತ್ತು ಕಣ್ಮುಚ್ಚಿ ಜಾವತ್ರಿ ಕಟ್ಟಿಗೆಯಂತೆ ನಿಂತು ಕೊಂಡಿದ್ದಳು ನಂತರ ಬಾಗಿಲು ಇಕ್ಕಿಕೊಂಡು ಹಾಸಿಗೆ ಮೇಲೆ ಉರುಳಿ ಕೊಂಡಳು ಬಣಗಿ ಹೋದ ನದಿಯಲ್ಲಿ ಕೂಡ ಆಷಾಢಮಾಸದಲ್ಲಿ ಹೇಗ ನೀರು ಹರಿಯ ತೊಡ ಗುವದೋ, ಹಾಗೆ ಇಂದು ಬಂದು ಯುಗಾಂತರದ ನಂತರ ಒತ್ತಿದ ಆಕೆಯ ನಾರೀ ಹೃದಯದಲ್ಲಿ ತಾಯ್ತನವು ನಾಲ್ಕೂ ಸಿಟ್ಟಿನಿಂದ ಹರಿಯಲಾರಂಭಿಸಿತು!

ಅಲ್ಲಿಂದ ಹೊರಟು ಕೇಶವ ಎಪಿನನನ್ನು ಅವನ ಮನೆಗೆ ಬಿಟ್ಟನು ಮತ್ತು ತನ್ನ ಮನೆಗೆ ನಡೆದಾಗ ಯೋಚಿಸಿದೇನಂದರ,ಕೃಪಾನಿಗೂ ತುಸು ಭೆಟ್ಟಿಯಾಗಿ ಹೋಗೋಣ ಕೃಪಾಶಂಕರನ ಬಾಗಿಲಲ್ಲಿ ಗಾಡಿ ನಿಂತಿತು ಒಬ್ಬ ಸೇವಕನನ್ನು ನೋಡಿ ಕೇಳಿದನು "ಬಾಬೂ ಹೈ?"

ಸೇವಕನೆಂದ "ಬಾಬೂ ಭೀ ತರ ಹೈ ಹುಜೂರ"

"ಜರಾ ಕಹೋ, ಏಕ ಆದಮಿ ಮಿಲನೇಕೆ ಲಿಯೇ ಆಯಾ ಹೈ."

ಸೇವಕ ಒಳಗೆ ಹೋದ ಮರುಕ್ಷಣದಲ್ಲಿ ಕೃಪಾಶಂಕರ ಹೊರಗೆ ಬಂದ ಕೇಶವನನ್ನು ನೋಡಿ ಬೆಚ್ಚಿಬಿದ್ದನು. ಒಂದೇ ಕ್ಷಣದಲ್ಲಿ ಅವನ ಮನಸ್ಸಿನೊಳಗೆ ಅನೇಕ ಶಂಕೆಗಳು ಹೊಳೆದವು. ಕೇಶವನು ಈಗ ಏನು ಮಾಡಬಹುದು, ಎಂಬುದನ್ನು ಯಾರು ಹೇಳಬೇಕು? ಬಹುಶಃ ಜಗಳವಾಡಬಹುದು — ಮುಂದಾಗಿ ನಮಸ್ಕರಿಸಿದನು. ಮತ್ತು ಮುಂದಾಗಿ ಬೈಠಕಖಾನೆಗೆ ಕರೆದೊಯ್ದನು.

ಎದುರು-ಬದುರು ಎರಡು ಕುರ್ಚಿಗಳ ಮೇಲೆ ಕುಳಿತರು. ಆದರೆ ಇಬ್ಬರೂ ಮಾತಿಗಾರಂಭಿಸಲೊಲ್ಲರು. ಕೃಪಾಶಂಕರ ಮಾತಾಡಬಾರದೆಂದರೆ ಏನ್ಬೇಡು? ಯಾತಕ್ಕೆ ಬಂದದ್ದು ಇದನ್ನು ಕೂಡ ವಿಚಾರಮಾಡಲಿಲ್ಲ.

ಕೇಶವನೇ ಸ್ವತಃ ಮಾತಾಡಿದನು. "ಕೃಪಾ, ನಾನು ನಿನ್ನ ಬಳಿಗೆ ಬಂದೆ. ಇದೇತಕ್ಕೆಂದರೆ ನಿನ್ನ ಸಮಾಜನಿಷ್ಠೆಯ ನೋಡಿ ನಿನ್ನನ್ನು ಪ್ರಶಂಸಿಸಲಿಕ್ಕೆ."

ಕೃಪಾಶಂಕರ ಕೇಶವನ ವ್ಯಂಗವನ್ನು ತಿಳಿದು, ಹಾರಿಸಿ ಮಾತಾಡಿದನು. "ಕೇಶವ, ನೀನು ನನ್ನವ. ನಿನಗೆ ಬೇಕಾದುದನ್ನುವ ಅಧಿಕಾರ ನೀ ನನಗೆ ದಲ್ಲೂ ಸಿಟ್ಟಿಲ್ಲ. ಮತ್ತು ಈ ಪ್ರಸಂಗ ಯಾವ ನನ್ನ-ನಿನ್ನ ಸ್ನೇಹಕ್ಕೇನೂ ಅಂತರವಾಗಿರಲಾರದು! ಆದರೆ ನೀನು ತುಸು ವಿಚಾರಿಸು, ಕಡೆಗೆ ನಾನಾದರೂ ಮಾಡಬೇಕಾದದೇನು? ಸಮಾಜವೊಂದು ಮನುಷ್ಯನವಸ್ತ್ರ, ವಸ್ತ್ರವಿಲ್ಲದೆ ಇರುವದಾದರೂ ಹೇಗೆ?"

ಯಾವ ಯಾರ ಕೃಪಾಶಂಕರನ ತರ್ಕಕ್ಕೆ ಕೇಶವ ಉತ್ತೇಜಿತನಾಗಬೇಕಿದ್ದಿತೋ, ಅಲ್ಲಿ ನಕ್ಕುಬಿಟ್ಟನಷ್ಟೇ. "ಹಾಂ, ಆದರೆ ಬೇಸಿಗೆಯಲ್ಲಿ ಯಾರೂ ನಿಲುವಂಗಿ ಹಾಕಿಕೊಳ್ಳುವದಿಲ್ಲ. ನಮ್ಮಂಥ ತರುಣರು ಕುಳಿತು ಸಮಾಜದ ಬಸೀತಿಯನ್ನು ಎದುರಿಸದಿದ್ದರೆ, ಕಡೆಗೆ ಅನುಮಾನಿಸಬೇಕಾಗುವದೇನೆಂದರೆ-ಇನ್ನೂ ಕಲವು ದಿನ ಹೀಗೆ ಅಧಃಪತನ ನಡೆಯಬೇಕಾಗಿದೆ. ಸರಿ. ವಿಚಾರದಿಂದ ನೋಡಿದರೆ ಇದರಲ್ಲಿ ಮಾಲತಿಯದೆಷ್ಟು ದೋಷ, ಮತ್ತು ಪಾಪ ಆ ವಿಧವೆಯದೆಷ್ಟು ದೋಷವಿದ್ದಿತು? ಇದಾವುದೂ ಹೇಳಲಿಕ್ಕಾಗುವದಿಲ್ಲ."

"ಕೇಶವ, ನಿನ್ನ-ನನ್ನ ವಿಚಾರಗಳು ಕೂಡುತ್ತವೆ. ಆದರೆ ಸಮಾಜವು ಏನು ಸಂಪ್ರದಾಯವನ್ನು ಹಾಕಿರುವದೋ, -- ಮುಂದೆ ಕೃಪಾಶಂಕರ

ಏನೋ ಹೇಳುವವನಿದ್ದ ಉತ್ತೇಜಿತನಾಗಿ ನಡುವೇ ಕೇಶವ ಮಾತಾಡಿದನು. ''ಸರಿಯಲ್ಲ, ಅದೇ ಸಂಪ್ರದಾಯ ಹಿಡಿದು ಸಾಗಬಹುದು ಸಮಾಜ ಪಾತಾಳಕ್ಕಿಳಿದು ಬೇಕಾದರೆ ಹೋಗಲಿ, ಸಂಪ್ರದಾಯ ಬಿಡುವಂತಿಲ್ಲ ಕೃಪಾ ನಾನು ಕೇಳುವದಿಷ್ಟೇ, ಈ ಸಂಪ್ರದಾಯ ಮುರಿಯಬೇಕಾದರ ಎಲ್ಲಾದರೂ ಸ್ವರ್ಗದ ದೇವತೆಗಳು ಬರುವರೋ? ಈಗ ನಮ್ಮ ಸಮಾಜವು ಯಾವ ರೂಢಿಗಳ ನಾಗಪಾಶದಲ್ಲ ಬಿಗಿಯಲ್ಪಟ್ಟಿರುವುದೋ, ಅದಕ್ಕ ಒಂದೇ ಒಂದು ಉಪಾಯವಿದೆ, ಅದೆಂದರ ಯುವಕಸಮುದಾಯ ಮೇಲೇಳಬೇಕು ಚಟಚಟ ಶೃಂಖಲೆ ಹರಿಯಬೇಕು, ಮತ್ತು ಒಲಗುಂದಿದ ಸಮಾಜವನ್ನು–ಕೊಳಚೇಗುಂಡಿಯಿಂದ ಮೇಲಕ್ಕೆತ್ತಿ, ಕಲ್ಯಾಣಪ್ರದ ಆದರ್ಶಮಂದಿರದಲ್ಲಿ–ಮಾನವದೇವನನ್ನು ಪ್ರತಿಷ್ಠಿಸಬೇಕು!"

"ಹೇಗಿದ್ದರೂ ಒಂದು ಮಂದಿರವಾಗಲೇಬೇಕಲ್ಲ, ಎಲ್ಲಿ ಮಂದಿರವೊ ಅಲ್ಲಿ ಅದರ ರೂಪ–ರೇಷಾ, ಸೀಮಾ ಇತ್ಯಾದಿಗಳು ''

"ಕಿಂತು ನಾನು ಹೇಳುವದು ಹೀಗಲ್ಲ ಮಾನವನ ಎಲ್ಲಾ ಬಂಧನ ಹರಿದು ವನಪಶುಗಳಂತೆ ಮನಬಂದಂತೆ ತಿರುಗುವದಲ್ಲ ನಾಲ್ಕೂ ಸುತ್ತು ನಿಂದ ಈಗ ಮನುಷ್ಯನನ್ನು ಬಿಗಿದ ವಸ್ತ್ರವನ್ನು, ಅವನು ಕೊರಳಿಗುರುಳಾದ ವಸ್ತ್ರವನ್ನು ಕಿತ್ತಿ, ಬಿಸಾಕಬೇಕು ಮತ್ತು ಅದರ ಬದಲು ಹೊಸ ವಸ್ತ್ರ ಧರಿಸಬೇಕು ''

" ಹೊಸ ವಸ್ತ್ರವು ಮೈಗೆ ಹೊಳತವಾಗುವದೆಂಬುದಕ್ಕ ನಂಬುಗೆ ಏನು?'' ಕೃಪಾಶಂಕರ ತುಸು ಕಿರುನಗೆಯಿಂದಾಡಿದನು

"ಮಾನವ ಅದನ್ನು ಉಡಬೇಕೆಂದು ಬಯಸುವದೇ ಒಂದು ವಸ್ತ್ರ–ಚಿರಕಾಲ ಬಳಿಸಲು ಸಾಧ್ಯವಿಲ್ಲ ಸಮಾಜವು ಒಂದು ಪ್ರವಾಹದಂತಿದೆ. ಅದರಲ್ಲಿ ಯಾವಾಗಲೂ ಹೊಸ–ಹೊಸ ತರಗಳೇಳುತ್ತವೆ, ಮತ್ತು ಅದರ ಪ್ರವಾಹ ತಡೆದುದೇ ಆದರೆ ನೀರು ಮಲೆತು ಕೊಳಯುಂಟಾಗುತ್ತದೆ ''

ಕೃಪಾಶಂಕರ ಸುಮ್ಮನಿದ್ದ ಕೇಶವನು ಹೇಳುತ್ತಿದ್ದ "ಆದರ ಬಲಹೀನರು ಇಂಥ ಶೃಂಖಲೆಗಳನ್ನು ಹರಿದೊಗೆಯಲಾರರು ಅವರಿಗೆ ವಿಸ್ತಾರವಾದ ಎದೆಬೇಕು, ಅವರಲ್ಲಿ ಹೊಸ ನಿರ್ಮಿತಿಯ ಅಭಿಲಾಷೆಗಳಿರಬೇಕು,

ತಮ್ಮ ಗೂಡಿನಿಂದ ಹೊರಬಿದ್ದು ಹೊರಗೆ ಮುಕ್ತಾಕಾಶದಲ್ಲಿ ವಿಹಾರ ಮಾಡುವ ಸಾಹಸಬೇಕು ಇಂಥವರು ಮಾತ್ರ ಹರಿಯಲು ಸಮರ್ಥರು ''

ಹುಚ್ಚನಂತೆ ಕೃಪಾ ಕೇಳುತ್ತಿದ್ದ, ಹಾಗೇ ಕೇಶವನ ಮಾತು ಎಲ್ಲಿಗೆ ನಿಲ್ಲುವದೆಂಬುದನ್ನು ಅವನು ತಿಳಿಯದಾದ

''ಮತ್ತು ಕೃಪಾ, ನಾನೂ ನಿಶ್ಚೈಸಿಕೊಂಡಿದ್ದೇನೆ ಮಾಲತಿಯೊಡನೆ ನಾನೇ ಲಗ್ನ ಮಾಡಿಕೊಳ್ಳುವೆನು, ಬೇಕಾದರೆ ಇದಕ್ಕಾಗಿ ಜಗತ್ತನ್ನೇ ಬಿಡ ಬೇಕಾದರೂ ಪರವಿಲ್ಲ ''

''ಎಲ, ಅನಂತಣ್ಣಾ ''

''ಅವನನ್ನು ಒಪ್ಪಿಸಲು ಆದಷ್ಟು ಯತ್ನಮಾಡುತ್ತೇನೆ ಅವನು ಒಪ್ಪ ದಿದ್ದರೂ ನಾನು ಮಾಡಿಕೊಳ್ಳುವವನೇ '' ಕೇಶವ ಗಟ್ಟಿಸಿ ನುಡಿದನು. ನಗುತ್ತ ನುಡಿದನು – ಒಳ್ಳೇದು, ಕೃಪಾ ಅಕ್ಕೀಕಾಳಿಗೆ ಬರುತ್ತೀಯಾ, ಅಷ್ಟೇ ಅಲ್ಲ ಊಟಕ್ಕೆ ಸಹ ''

ಕೃಪಾಶಂಕರನ ಮರ್ಮಸ್ಥಳಕ್ಕ ಪೆಟ್ಟಾಗತೊಡಗಿತ್ತು ಏನು ಉತ್ತರ ಕೊಡುವದೆಂದು ಅವನು ಯೋಚಿಸುತ್ತಿದ್ದ ಇಷ್ಟರಲ್ಲಿ ಸೇವಕ ಎಲಿ–ಅಡ ಕೆಯ ತಟ್ಟೆ ತಂದನು ಆ ತಟ್ಟೆ ಕೇಶವನ ಮುಂದೆ ಮಾಡುತ್ತ ನುಡಿದನು "ತಗೋ, ಎಲೆ–ಅಡಕಿ ಹಾಕಿಕೋ'' ನಂತರ ನಾಚಿಕೆಪಟ್ಟುಕೊಂಡು ಒಣನಗೆ ನಗುತ್ತ ಹೇಳಿದನು "ಯಾವಾಗ ಅಕ್ಕಿಕಾಳಿನ ಸಮಯವೋ ಅಲ್ಲಿಯ ವರೆಗೇನೂ ಪರವಿಲ್ಲ, ನಾನೂ ಅಷ್ಟು ಸಾಹಸ ಗುಡ್ಡೆಹಾಕಿ ನೋಡು ತ್ತೇನೆ ''

ಕೇಶವ ವ್ಯಂಗ್ಯ ಮಾತನಾಡಿದನು '' ಮೆಲ್ಲನೆ ಉಂಡು ಹೋಗು ವದೋ ? "

ಕೃಪಾಶಂಕರನೂ ನಗಲಾರಂಭಿಸಿದ ಕೇಶವ ಎದ್ದುನಿಂತನು '' ಒಳ್ಳೇದು ಹೊರಡುವಾ ಬಹಳ ಕೆಲಸಗಳಿವೆ "

## (೩೧)

ಮಾಲತಿಯ ಲಗ್ನ ನಿಂತುಹೋದುವರಿಂದ, ನೆರೆಹೊರೆಯುವಲ್ಲಿ— ವಿಶೇಷವಾಗಿ ಕಾನ್ಯಕುಬ್ಜರಲ್ಲಿ ಅನೇಕ ವಾರ್ತೆಗಳು ಪಸರಿಸಿದವು ಯಾವ

ಮನೆಯಲ್ಲಿ ನಾಲ್ಕು ಜನ ಹೆಂಗಸರು ಕೂಡಿದರೋ, ಅಲ್ಲಲ್ಲಿ ಇದರ ಅನು ಮಾನವಿದ್ದುದೇ ಕೆಲವರನ್ನುತ್ತಿದ್ದರು "ವರದಕ್ಷಿಣೆಯ ಸಲುವಾಗಿ ಒಗಳ ವಾಯಿತು, ವರ ಬೇಡಿದನಂತೆ, ಎರಡು ಸಾವಿರ ರೂಪಾಯಿ ನನಗಾಗಿ ಮೊದಲು ಎಣಿಸಿರಿ ಇವರು ಒಪ್ಪಲಿಲ್ಲ ಆದರೆ ಬರಬರುತ್ತ ಇವೆಲ್ಲ ಸುಳ್ಳುವಾರ್ತೆಗಳೇ ಎನಿಸಿದವು ಇತ್ತ ಕೇಶವನ ಮನೆಯಲ್ಲಿ ಎಲ್ಲರಿಗೂ ಚಿಂತೆ ಎನಿಸಿತ್ತು ಮಾಲತಿ ತಲೆ ಅಪ್ಪಳಿಸುತ್ತಾಳೆ ಮನೆ ಎಲ್ಲ ರಂಬಾಟ ವಾಗುತ್ತದೆ ಆದರೆ ಎಷ್ಟೂ ಹಾಗಾಡಲಿಲ್ಲ ಮಾಲತಿ ಮರುದಿನದಿಂದಲೇ ಎಲ್ಲರೊಡನೆ ನಗುತ್ತ-ಕಲೆಯುತ್ತ ಮಾತನಾಡತೊಡಗಿದಳು ಆಕೆಯ ವ್ಯವ ಹಾರದಲ್ಲಿ ಏನೂ ಬದಲು ಕಾಣಲಿಲ್ಲ.

ಈ ಮಧ್ಯದಲ್ಲಿ ಕೇಶವ ಒಂದು ಸಾರ ಮಾಲತಿಗೆ ತಿಳಿಸಿ ಹೇಳಿದನು ನೀನು ಮನಸ್ಸನ್ನು ಶಾಂತವಾಗಿರಿಸಿಕೋ, ಎಂದು ಹೇಳಿ ತಾನು ನಿನ್ನ ಸಂಗಡ ವಿವಾಹ ಮಾಡಿಕೊಳ್ಳುವನೆಂದೂ ಸ್ಪಷ್ಟಪಡಿಸಿದನು, ಆದರ ಅದಕ್ಕ ಮಾಲತಿಯ ಉತ್ತರವಿಷ್ಟೆ — "ಕೇಶವಣ್ಣಾ, ಹಿಂದೂ ಸ್ತ್ರೀಯರಿಗೆ ಎರಡು ಸಾರೆ ವಿವಾಹವೆಂದಾದರೂ ಉಂಟೆ?" ಕೇಶವ ಬಹಳ ಹೇಳಿದನು — "ಎಲ್ಲಿಯ ವರೆಗ ಕನ್ಯಾದಾನವಾಗಿಲ್ಲವೋ, ಸಪ್ತಪದಿಯಾಗಿಲ್ಲವೋ, ಅಲ್ಲಿಯ ವರೆಗೆ ಅದು ಲಗ್ನವಲ್ಲ" ಆದರ ಮಾಲತಿ ಒಂದೂ ಕೇಳಲಿಲ್ಲ

ಮುಂದೆ ನಾಲ್ಕು ದಿನಗಳ ವರೆಗೆ ಕೇಶವ ಮನೆಯಲ್ಲಿ ಇಲ್ಲದಂತಾದನು ಹೇಳದೆ ಹೋಗಿಬಿಟ್ಟಿದ್ದ, ಹೀಗಾಗಿ ಎಲ್ಲರೂ ಚಿಂತಿತರಾಗಿದ್ದರು, ರಾಮಕಲಿ ಎರಡು ವೇಳೆ ದೇವರ ಮುಂದೆ ತಾಸುಗಟ್ಟಲೆ ಪ್ರಾರ್ಥಿಸುತ್ತಿದ್ದಳು, ಮೂವತ್ತು ಮೂರು ಕೋಟಿ ದೇವತೆಗಳನ್ನು ಸ್ತುತಿಸುತ್ತಿದ್ದಳು ಇವತ್ತು ಕೇಶವ ಒಂದುದಕ್ಕೆ ಎಲ್ಲರ ಜೀವದಲ್ಲಿ ಜೀವಬಂದಂತಾಗಿದೆ

ರಾತ್ರಿ ತನ್ನ ಕೊಟಡಿಯಲ್ಲಿ ಹಾಸಿಗೆ ಮೇಲೆ ಕುಳಿತು ಮಾಲತಿ ಯೋಚಿಸುತ್ತಿದ್ದಳು "ಕೇಶವ ಬಂದಿದ್ದಾನೆ, ಏನೋ ನಾಲ್ಕು ದಿನ ಎಲ್ಲಿ ಹೋಗಿದ್ದ? ತಿರುಗಿ ಅದೇ ಪ್ರಸಂಗ ತರಬಹುದು -ಆಕೆ ಕಡೆಗೆ ಏನು ಉತ್ತರ ಕೊಡಬೇಕೆಂಬುದನ್ನು ನಿರ್ಧರಿಸಿಕೊಂಡಿದ್ದಿಲ್ಲ ಆದರ ಎಂದೂ ಕೇಶವನ ಮಾತಿಗೆ ಒಪ್ಪಲಾರೆ, ಎಂದು ನಿಶ್ಚಿತಮಾಡಿದ್ದಳು ಯಾವಾಗ ಮಾಲತಿ ಇವೆಲ್ಲ ವಿಚಾರ ತರಂಗಗಳಲ್ಲಿ ಮುಳುಗೇಳುತ್ತಿದ್ದಳೋ ಆದೇ

ಸಮಯಕ್ಕೆ ಬಾಗಿಲಿನಲ್ಲಿ ಕೇಶವನ ದನಿ ಕೇಳಬಂದದ್ದು ಮರುಕ್ಷಣದಲ್ಲಿ ಕೇಶವ ಕೊಟಡಿಯನ್ನು ಪ್ರವೇಶಿಸಿದನು.

ಬೇಗ ಬೇಗ ಹಾಸಿಗೆಯಿಂದ ಎದ್ದು ಮಾಲತಿ ಒಂದು ಕುರ್ಚಿಯನ್ನು ಎದುರಿಗಿಟ್ಟು ಕೇಳಿದಳು "ಇಷ್ಟು ದಿನ ಎಲ್ಲಿಹೋಗಿದ್ದೆ ಕೇಶವಣ್ಣಾ?"

"ಕಾಶಿಗೆ ಹೋಗಿದ್ದೆ"

ಆ ಮಾತನ್ನು ಅಲ್ಲಿಗೆ ನಿಲ್ಲಿಸಿ ಪ್ರಸಂಗ ಬದಲಿಸುವ ಉದ್ದೇಶದಿಂದ ಮಾಲತಿ ನುಡಿದಳು "ಎಲ್ಲಿಗೆ ಹೋದರೂ ಹೇಳಿಹೋದರೆ ಮನೆಜನರು ದುಃಖಿಸುವ ಕಾರಣ ಬೀಳುವದಿಲ್ಲ"

"ಯಾರು ದುಃಖಿಸಿದರು ಮಾಲತಿ ನೀನೋ?"

ಬೇರೊಂದು ಕಡೆಗೆ ಕಣ್ಣು ತಿರುಗಿಸಿ ಮಾಲತಿ ಅಂದಳು "ಅಕ್ಕ ಅತ್ತು-ಅತ್ತು ಮನೆ ಮಾರ್ದನಿಗೊಳಿಸಿಬಿಟ್ಟಳು"

"ಸರ್ರನೇ ಕೇಶವ ಮಾತನಾಡಿದನು "ಮತ್ತು ನೀನು ನಗುತ್ತ-ಕಲಿಯುತ್ತ ಮನತುಂಬಿ ಬಿಟ್ಟೆಯಾ? ಅಕ್ಕನ ಮಾತು ಅಕ್ಕ ಹೇಳಿದ್ದಾಳೆ ನಿನ್ನದೇನು ಹೇಳು"

ಮಾಲತಿ ಏನೂ ಹೇಳಲಿಲ್ಲ, ಈ ಮಾತಿನ ಪ್ರವಾಹ ಹೇಗಾದರೂ ಸಾಧಾರಣ ರೀತಿಯಿಂದ ಎಂದಿಗೂ ಏರಗೊಡಬಾರದೆಂದು ಆಕೆ ಅಪೇಕ್ಷಿಸುತ್ತಿದ್ದಳು ಅಷ್ಟೇ

ಮಾಲತಿ ಸುಮ್ಮನಿರುವದನ್ನು ಕಂಡು ಕೇಶವ ನುಡಿದ "ಇದನ್ನು ಹೇಳಲಿಕ್ಕೆ ಸಹ ನಿನ್ನ ನಿಷ್ಠೆಗೆ ಬಾಧೆಬರುವದೋ? ಮಾಲತೀ

ಮಾಲತಿ ಮುಖ ಬಿಳುಪೇರಿತು ನಡುಗುವ ದನಿಯಿಂದ ಅಂದಳು "ನಿಷ್ಠೆಯ ಮಾತಾಡಿ ವ್ಯಥೆಪಡಿಸಬೇಡಣ್ಣಾ"

"ನೀನು ಹಾಗೇನು ಹೇಳುವೆ ಮಾಲತೀ ಇದೆಲ್ಲ ಭ್ರಮೆ ನೀನು ಆಡುತಿರುವ ಮಾತುಗಳನ್ನು ಕೇಳಿ ನನಗೆಷ್ಟು ವ್ಯಥೆಯಾಗುವದು ಬಲ್ಲೆಯಾ ತಿರುತಿರುಗಿ ಅವೇ ಮಾತಾಡುವಿ ನಿನ್ನ ಮನಸ್ಸಾದರೂ ಎಂಥ ಕಲ್ಲು ಮಾಲತೀ!" ನಂತರ ಬಲೆಗೆ ಸಿಕ್ಕ ಹಾವಿನಂತೆ ನಮ್ರತೆಯಿಂದಾಡಿದನು. "ನಾನು ಬಹುದೊಡ್ಡ ಅಪರಾಧ ಮಾಡಿದ್ದೇನೆ—ಮಾಲತೀ —ಅದಕಾಗಿ

ಏಸು ನನಗೆ ಇಂಥ ಕಠಿಣ ದಂಡ ಕೊಡುವಿಯಾ?—ಇಷ್ಟು ದುಃಖಪಟ್ಟರೂ ಪಾಪದ ಪ್ರಾಯಶ್ಚಿತ್ತವಾಗಲಿಲ್ಲವೋ?"

ಜಡವಾದ ದನಿಯಿಂದಾಡಿದಳು ಮಾಲತಿ "ನೀನು ಒಳ್ಳೆಯಣ್ಣಾ, ಈ ದಂಡ ಈ ಪಾಪದ ಮಾತುಗಳಿಂದ ನನಗ ದುಃಖವಾಗುತ್ತದೆ ಎಂದು ನೀನು ಅಪರಾಧ ಮಾಡಿರುವೆ ಎಂಬುದೊಂದು ಭ್ರಾಂತಿ ನಾನು ದಂಡಿಸುತ್ತಿರುವೆ, ಎಂಬುದೊಂದು ಭ್ರಮೆ."

"ಹೋಗಲಿ, ಪಾಪ-ಪುಣ್ಯದ ಮಾತುಗಳನ್ನು ಬಿಡು ಮಾಲತೀ ನೀನು ಏಕೆ ಕೇಳಲಿಲ್ಲ, ನಾನು ಕಾಶಿಗೆ ಹೋದ ವಿಷಯ?"

"ಏನೋ ಅವಶ್ಯದ ಕೆಲಸಕ್ಕೆ ಹೋಗಿರಬಹುದೆಂದುಕೊಂಡೆ"

'ಅವಶ್ಯವೇನೋ ಇತ್ತು, ಅದು ಸಫಲವಾಯಿತು ಮಾಲತೀ" ಹೀಗೆ ಹೇಳುತ್ತ ಜೇಬಿನಿಂದ ಕೆಲವು ಕಾಗದಗಳನ್ನು ಹೊರತೆಗೆದನು "ನೋಡು, ಇದನ್ನು ಕಾಶಿಯ ಪಂಡಿತರು ಕೊಟ್ಟಿದ್ದಾರ ಅವರು ಹೇಳುವದೇನೆಂದರೆ— ಕನ್ಯಾದಾನದ ಮೊದಲು ವಿವಾಹವಾದಂತಲ್ಲ, ಅರಿಷಣ ಹಚ್ಚುವದು ಮುಂತಾದವುಗಳಿಗಂತೂ ಏನೂ ಮೌಲ್ಯವಿಲ್ಲ, ಕಾರಣ ನಿನ್ನ ವಿವಾಹವಾಗಲು ಯಾವ ಆತಂಕವೂ ಉಳಿಯಲಿಲ್ಲ ಇನ್ನು ನನ್ನ ಪ್ರಾರ್ಥನೆಗೆ ಒಪ್ಪಿಗೆಯಷ್ಟೇ?"

ಕೇಶವನ ಮಾತು ಕೇಳಿ ಮಾಲತಿ ತನ್ನ ಮೋರೆ ಬೇರೊಂದೆಡೆಗೆ ತಿರುಗಿಸಿದಳು ಆಕೆಯ ಮನದಲ್ಲ ಯಾವ ಸಂಶಯ ಒಂದಿತ್ತೋ, ಅದು ನಿಜವಾಯಿತು.

ಮಾಲತಿ ಸುಮ್ಮನಿರುವದನ್ನು ನೋಡಿ ವ್ಯಗ್ರತೆಯಿಂದ ಕೇಶವ ಅಂದನು "ಮಾಲತೀ, ಒಂದು ಸಾರೆ ಹೇಳಿಬಿಡು ಒಪ್ಪಿಗೆಯೋ? ವಿಶ್ವಾಸವೆನಿಸದಿದ್ದರೆ ಸ್ವತಃ ಓದಿನೋಡು ಇದೊ—"

"ನಾನು ಇವು ಯಾವನ್ನು ಓದಲಿಚ್ಛಿಸುವದಿಲ್ಲ, ಇವುಗಳಿಗೇನೂ ಬೆಲೆ ಇಲ್ಲ ಯಾಕೆಂದರೆ—ನನ್ನ ಸ್ಥಿತಿಯನ್ನು ಇವುಗಳಿಂದ ತಿಳಿಯದೆ ಇವುಗಳಿಂದಾಗಬೇಕಾದುದೇನು? ಅಲ್ಲದೇ, ಹಣಕೊಟ್ಟರೆ ದೊರೆಯುತ್ತಿರುವ ಇಂಥ ಅಭಿಪ್ರಾಯಗಳಿಗಿಂತ ನಾನು ಆದರಿಸುವ ನಿನ್ನ ಪ್ರಾಮಾಣಿಕ ಮತವನ್ನು ನೀನು ಹೇಳುತಿರುವ, ನನ್ನ ಲಗ್ನವಾಗಲು ಪರವಿಲ್ಲವೆಂದು, ಅಷ್ಟೇ ಸಾಕು ಆದರ—"

ಚಾಂಚಲ್ಯದಿಂದ ಕೇಳಿದನು "ಇಸ್ಟೂ ಆದರೆ ಯಾಕೆ?"

ಮಾಲತಿ ತನ್ನ ಶಾಂತ-ಕರುಣ ದೃಷ್ಟಿಯನ್ನು ಕೇಶವನ ಕಡೆಗೆ ಹೊರಳಿಸಿ, ಒಮ್ಮೆಲೆ ಅಧೋಮುಖಿಯಾಗಿ ನುಡಿದಳು. "ಯಾವದೊಂದು ಕಾರ್ಯಮಾಡಲು ಸಾಧ್ಯವಿದೆ ಎಂದು ಅದನ್ನು ಮಾಡೇ ತೀರಬೇಕಾಗಿಲ್ಲ"

"ಯಾಕೆ ಮಾಡಿ ತೀರಬೇಕಾಗಿಲ್ಲ? ಇದರ ಅರ್ಥವಾಗುವದಿಷ್ಟೇ. ಒಂದು ಜೀವವನ್ನು ದುಃಖಸಾಗರದಿಂದ ಮೇಲೆತ್ತಬೇಕಾಗಿದೆ, ಅದಕಾಗಿ ಮಾಡಲು ಸಾಧ್ಯವಿಲ್ಲವೇ? ಎಂಥ ನಿರ್ದಯತನವಿದು?

ಮಾಲತಿ ಹೇಗೋ ತಲೆ ಎತ್ತಿ ಮಾತಾಡಿದಳು "ನಿರ್ದಯತನವಲ್ಲ ಕೇಶವಣ್ಣಾ! ಇತ್ತ ಎರಡು ಮೂರು ತಿಂಗಳಿಂದ ನಾನು ಎಂಥ ಕಷ್ಟವನ್ನು ಸಹಿಸುತ್ತ ಬಂದನೋ, ಅದನ್ನು ಮನದಲ್ಲಿಟ್ಟು ಮಾಡಿದ ನನ್ನ ಆಜೀವನ ಪ್ರತಿಜ್ಞೆ ಇದು! ನೀನು ನನ್ನ ಮೇಲೆ ಹೇಗೆ ಸ್ನೇಹ ಮತ್ತು ದಯಾ ತೋರುತಿದ್ದೆಯೋ ಹಾಗೇ ಇವು ಇರಲಿ. ನಾನು ಬೇಡುತಿರುವದು ನಿನ್ನ ದಯಾ. ಮತ್ತೇನೂ ಅಲ್ಲ"

"ನನ್ನ ಪ್ರೇಮವು ಅದೇನೂ ಅಲ್ಲವೇ? ಅದನ್ನು ಹೀಗ ಕಾಲಕೆಳಗ ತಿಕ್ಕುವೆಯಾ?"

ಈ ಮಾತು ಕೇಳಿ ಮಾಲತಿ ಕಣ್ಮುಚ್ಚಿಕೊಂಡಳು — "ಮನದಲ್ಲಿ ಬಂದುದನ್ನೆಲ್ಲ ಆಡದಿರು ಅಣ್ಣಾ ಕೇಳಿದರೂ ಕೂಡ ಪಾಪ ನೀನು ಪ್ರೇಮವೆಂದು ಹೇಳಿ ಕೊಡಲೆಳಸುವದೆಲ್ಲ ನಿನ್ನ ದಯಾ, ನಿನ್ನ ದೊಡ್ಡಿತೆ ನೀನು ನನ್ನ ಮೇಲೆ ದಯಾ ತೋರಿಸುವಿ. ತಿರುಗಿ ನಾನು ನಿರ್ದಯ— "

ಕೇಶವ ನಡುವೆ ನಿಲ್ಲಿಸಿ ಹೇಳಿದನು. "ತಡೆ, ಮಾಲತೀ, ತಡೆ, ನಾನು ಬಲ್ಲ ನೀನು ಒಳ್ಳೇ ಮಾತುಗಾರ್ತಿ ಆದರೆ ನಿನ್ನಲ್ಲಿ ಲೇಶಮಾತ್ರವೂ— ದಯಾ ಇಲ್ಲವೇ? ನೀನೂ ಕಲ್ಲೇ? ನಿನಗೆ ಹೃದಯವುಂಟೋ? ಹೇಗೆ ತೋರಲಿ, ನಾನು ಪ್ರೇಮದಿಂದ ಹುಚ್ಚಾಗಿದ್ದೇನೆ ಪ್ರೇಮದ ಗೊತ್ತು ನನಗಾದುದೆಂದರ — ಎಂದು ನಿನ್ನ ಲಗ್ನ ನಿಶ್ಚಯವಾಯಿತೋ, ಅದೇ ದಿನ ನೀನು ನಂಬಲಾರೆ, ನಿನ್ನ ಲಗ್ನದಿನ ಸನಿಯದಲ್ಲಿ ಬಂದಂತೆ ನನಗೆ ದುಃಖವಾಗುತಿತ್ತು; ಮತ್ತು ಯಾವ ದಿನ ಕೃಪಾ ಲಗ್ನ ಮುರಿದನೆಂದು ಕೇಳಿದೆನೋ

ಆ ದಿವಸ ಕೋಪದ ಜೊತೆಗೆ ಆಶೆಯ ಒಂದು ಅಸ್ಪಷ್ಟ ಕಿರಣ ಕಾಣ ಲಾರಂಭಿಸಿತು.

ಕೇಶವನ ಮಾತು ಕೇಳುತ್ತ ಮಾಲತಿಗೆ ರೋಮಾಂಚಗಳೆದ್ದವು ಆಕೆಯಲ್ಲಿ ಮಾತಾಡುವ ಶಕ್ತಿ ಉಳಿದಿರಲಿಲ್ಲ ಆದರೂ ಕಷ್ಟದಿಂದ ನುಡಿದಳು. "ಇದೇನೂ ಸರಿಯಲ್ಲ, ಅಣ್ಣಾ! ಹೀಗೆ ಮೋಹಗೊಳ್ಳುವದು ಒಳಿತಲ್ಲ. ನಾನೊಬ್ಬ ಸಾಮಾನ್ಯ ಹುಡುಗಿ ಹೇಗೆ ಸಹಿಸಬಲ್ಲೆ?"

ಕೇಶವ ನಗುತಿದ್ದ "ನೀನು ಸಾಮಾನ್ಯಳೋ? ಛೀ ನಿನಗಿಂತ ಕಠೋರರು ಯಾರೂ ಇಲ್ಲ, ಮಮತಾ, ದಯಾ, ಕ್ಷಮಾ, ಯಾವವೂ ನಿನ್ನಲ್ಲಿಲ್ಲ ಹೀಗಿದ್ದರೂ ನೀನು ಸಾಮಾನ್ಯ ಹುಡುಗಿಯೋ?"

ಮಾಲತಿ ಕಣ್ಣೀರಿಡುತ್ತ ಅಂದಳು "ಅದು ಕಡಿಮೆಯಲ್ಲ ಕೇಶವಣ್ಣಾ, ಅದೂ ಕಡಿಮೆಯಲ್ಲ,—ಜನ್ಮದ ಕತೆ ಗೊತ್ತಾಯಿತಲ್ಲ ಇಲ್ಲವಾದರೆ,—ಮಾಲತಿ ಕಂಠ ಬಿಗಿದುಹೋಯಿತು

"ಇಲ್ಲವಾದರ ಏನು?"

"ನಿಲ್ಲಿಸುವಾ. ಬರಿ ಮಾತಿನಿಂದೇನು?" ತನ್ನೊಳಗೇ ಎಂದುಕೊಂಡಳು. "ದ್ವಿಚಾರಿಣಿಯಾಗುತಿದ್ದೆ"

"ಕೇಶವಣ್ಣಾ!"

"ಏನು?"

"ನೀನು ದುಲಾರಿಯುದೇನಾದರೂ ವಿಚಾರಮಾಡುತಿರುವೆಯಾ?"

ಕೇಶವ ಕಳೆಗುಂದಿದನು. "ಆಕೆಯದೇನು!"

"ನೀನು ದುಲಾರಿಯ ಲಗ್ನವಾಗುವ ಪ್ರತಿಜ್ಞೆ ಮಾಡಿದ್ದಿಯೆ ಮತ್ತು ದುಲಾರಿ ನಿನ್ನನ್ನು ಪತಿ ಎಂದು ಭಾವಿಸಿ ನಿಶ್ಚಿಂತೆಯಿಂದ ಮನೆಯಲ್ಲಿ ಕುಳಿತಿದ್ದಾಳೆ."

ದುಲಾರಿಯ ವಿಷಯವಾಗಿ ಉತ್ಪನ್ನವಾದ ಜಟಿಲತೆಯಿಂದ ಕೇಶವ ವ್ಯಾಕುಲನಿದ್ದನು "ದುಲಾರಿಯ ಲಗ್ನವಾಗುತ್ತೇನೆಂದು ನಾನು ಹೇಳಿಲ್ಲ, ಮಾತ್ರ ಆಕೆಯ ಭಾರ ನನ್ನದು ಎಂದಿಷ್ಟೇ ನಾನು ಹೇಳಿದ್ದು"

ವಿಸ್ಮಿತಳಾಗಿ ಮಾಲತಿ ಅಂದಳು "ಏನು ಹೇಳುವಿ ಕೇಶವಣ್ಣಾ.' ನೀನು ಪ್ರತಿಜ್ಞೆ ಮಾಡಲಿಲ್ಲವೋ? ನಾನು ಅಲ್ಲೇ ಇದ್ದೆನಲ್ಲ. ನಾನು ಕೇಳಿದ್ದೇನೆ"

ಕೇಶವನು ಚಂಚಲನಾಗಿಹೋದ. ಆದರೂ ಎಚ್ಚತ್ತು ಹೇಳಿದನು "ನೀವೆಲ್ಲ ತಪ್ಪು ತಿಳಿದಿರಿ ಮಾಲತೀ. ನಾನು ಹೇಳಿದ್ದು ಆಕೆಯ ಭಾರ ನನ್ನದು ಎಂದು ಅಷ್ಟೇ. ಅದರ ಅರ್ಥ ಆಕೆಯೊಡನೆ ಲಗ್ನವಾಗುತ್ತೇನೆ. ಎಂದೇನೂ ಅಲ್ಲ "

"ಅದೇನೋ ಅಷ್ಟು ನೆನಪಿಲ್ಲ, ಕಿಂತು ನಿನ್ನ ಮಾತಿನಿಂದ ಎಲ್ಲರೂ ಹಾಗೆ ತಿಳಿದಿದ್ದಾರೆ "

"ಎಲ್ಲರೂ ತಪ್ಪು ತಿಳಿದಿದ್ದಾರೆ ಎಲ್ಲರೂ ತಿಳಿದ ತಪ್ಪಿಗೆ ನಾನು ಹೊಣೆಗಾರನಲ್ಲ."

"ನೀನೇ ಹೊಣೆಗಾರನಣ್ಣಾ, ದುಲಾರಿ ಇಂದಿನ ವರೆಗೆ ಹೀಗೇ ತಿಳಿದಿದ್ದಾಳೆ ನಿನ್ನ ಜೊತೆಗೇ ತನ್ನ ವಿವಾಹವೆಂದು. ಪಾಪ ಆಕೆಯಮೇಲೆ ದಯದೋರು "

ಕೇಶವ ತುಸುವೇಳೆ ಮಾಲತಿಯ ಕಡೆಗೆ ನೋಡಲಾರಂಭಿಸಿದ ತಿರುಗಿ ದೃಢ ಮತ್ತು ಕಾತರ ಭಾವದಿಂದಾಡಿದನು "ನನ್ನ ಬಾಳೆಂದರೆ ಏನೂ ಅಲ್ಲ, ನಾನು ಇರುವುದು ಪರರಿಗಾಗಿ, ನಾನೊಂದು ಕ್ಷುದ್ರ ರಕ್ತ–ಮಾಂಸ ಸಹ ನನ್ನವಲ್ಲ "

ಕೇಶವನ ಇಂಥ ದುರ್ಬಲ ನುಡಿಗೆ ದುಃಖದಲ್ಲಿಯೂ ಮಾಲತಿಯ ತುಟಿಗಳಲ್ಲಿ ಸಣ್ಣ ಹಾಸ್ಯರೇಖೆಯೊಂದು ಹಾದುಹೋಯಿತು "ಕೇಶವಣ್ಣಾ, ನೀವು ಕಠೋರರಾಗಬೇಕು, ಶಕ್ತಿಶಾಲಿಗಳಾಗಬೇಕು ನೀವು ಒಂದು ವೇಳೆ ನಮ್ಮನ್ನು ರಕ್ಷಿಸದಿದ್ದರೆ, ನಾವು ದುರ್ಬಲರು ಹೇಗೆ ಉಳಿಯಬಲ್ಲೆವು?"

"ನೀವು ದುರ್ಬಲರೋ ? ವಜ್ರಕ್ಕಿಂತ ನೀವು ಕಠೋರರು ನಿಮ್ಮಲ್ಲಿ ಮಾಯಾ–ಮಮತಾ– ಎಷ್ಟೂ ಇಲ್ಲ " ಎಂದು ಹೇಳ–ಹೇಳುತ್ತ ಕೇಶವ ಕೊಟಡಿಯಿಂದ ಹೊರಗೆ ಹೋದನು.

ಮಾಲತಿಯ ತುಟಿಗಳಲ್ಲಿ ಈಗ ಸಹ ಆ ಸಣ್ಣ ಹಾಸ್ಯರೇಖೆ ಹಾಗೇ ಇದ್ದಿತು. ಆದರೆ ವರ್ಷಾಕಾಲದಲ್ಲಿ ನಾವು ನೋಡುವದಿಲ್ಲವೇ ? ಸೂರ್ಯನ ಸ್ಪಷ್ಟ ಪ್ರಕಾಶ ಕೂಡಲೇ ಮೋಡಗಳಿಂದ ಮುಚ್ಚಿಹೋಗುವದು, ಅದರಂತೆ ಒಂದು ಕ್ಷಣದಲ್ಲಿ ನಗೆ ಅಡಗಿಹೋಯಿತು. ಮತ್ತು ಕಂಗಳಿಂದ ನೀರೂ ಸುರಿಯಲಾರಂಭಿಸಿದವು.

## (೩೨)

ಮಾಲತಿಯ ಕೊಟಡಿಯಿಂದ ಹೊರಬಿದ್ದ ಕೇಶವ, ದುಲಾರಿಯನ್ನು ಹುಡುಕಲು ಆಕೆಯ ಕೊಟಡಿಗೆ ಸಾಗಿದನು. ಬಾಗಿಲಿನಲ್ಲಿಯೇ ಕೂಗಿದನು– "ದುಲಾರೀ!"

"ದುಲಾರಿ ಹಾಸಿಗೆಬಿಟ್ಟಿದ್ದಳು." ಅಷ್ಟರಲ್ಲಿ ಕೇಶವ ಒಳಗೆ ಬಂದಿದ್ದನು.

ಒಂದು ಕುರ್ಚಿಯ ಮೇಲೆ ಕೂಡುತ್ತ ಕೇಶವ ನುಡಿದನು "ದುಲಾರೀ, ಇವತ್ತು ನಿನ್ನೊಡನೆ ಅಗತ್ಯದ ಒಂದು ಮಾತಾಡಬೇಕಾಗಿದೆ"

"ಏನದು? ಹೇಳಿರಿ"

"ನೀನು ಕುಳಿತುಕೋ ಹೇಳುತ್ತೇನೆ. ಅದು ಸಣ್ಣದಲ್ಲ, ನೀನು ಎಷ್ಟು ಹೊತ್ತೆಂದು ನಿಲ್ಲುವಿ?"

ದುಲಾರಿ ಹಿಂಜಾಳಿಸಿ, ಕಡೆಗೆ ತನ್ನ ಹಾಸಿಗೆ ಬಳಿಯಲ್ಲಿ ಕುಳಿತಳು

"ಮಾಲತಿಯ ಸಂಬಂಧದಲ್ಲಿ ನಿನ್ನೊಡನೆ ಮಾತಾಡಬೇಕಾಗಿದೆ ಪಾಪ! ಆಕೆ ಎಷ್ಟು ದಿನ ಇದೇ ದುಃಖದಲ್ಲಿರಬೇಕು? ಅದಕೇನಾದರೂ ಉಪಾಯ ಮಾಡಬೇಕಲ್ಲವೇ?"

ನಿಶ್ವಾಸ ಎಳೆದುಕೊಂಡು ದುಲಾರಿ ಹೇಳಿದಳು "ಮಾಡುವದೇನೋ ಅವಶ್ಯವೇ, ಆದರೆ ಏನು ಮಾಡಲಾಗುತ್ತದೆ?"

"ಇನ್ನೂ ಮಾಲತಿಯ ಕನ್ಯಾದಾನವಾಗಿರಲಿಲ್ಲ. ಅಕ್ಕೀಕಾಳಂತೂ ಇಲ್ಲವೇ ಇಲ್ಲ, ಎಂದ ಮೇಲೆ ಇದು ಲಗ್ನವಾದಂತೇನೂ ಅಲ್ಲ"

"ಎಂದೂ ಅಲ್ಲ, ಹಾಗಷ್ಟೇ ಆಗಿವೆ ಬಂದ ಬೀಗರು ತಿರುಗಿ ಹೋಗುತ್ತಾರೆ, ಬಾಗಿಲಿಗೆ ಬಂದ ವರ ತಿರುಗಿ ಹೋಗುವದುಂಟು, ಹಾಂ— "ಮುಂದೇನೋ ದುಲಾರಿ ಯೋಚಿಸಲಾರಂಭಿಸಿದಳು

"ಮತ್ತೇನು ಹೇಳಬೇಕೆಂದೆ? ದುಲಾರೀ."

"ಹೀಗೆ ಲಗ್ನಮುರಿದ ನಂತರ ಜನ ವಿಚಾರ ಮಾಡತೊಡಗುತ್ತಾರೆ. ಹೀಗಾದ ಕಾರಣವೇನು? ಇದರಿಂದ ತುಸು ಕುಂದೂ ಉಂಟಾಗುತ್ತದ."

"ಹಾಂ, ಅದನ್ನೇ ನಾನಾದರೂ ಯೋಚಿಸುವುದು. ಮಾಲತಿಯ ಲಗ್ನ ನಿಶ್ಚಯವಾಗಿತ್ತು; ಬರಬೇಕಾದ ವರ ಬರಲಿಲ್ಲ, ಯಾಕೆ ಬರಲಿಲ್ಲ? ಇವೆಲ್ಲ

ಫಿದ್ರಾನ್ವೇಷಿ ನಮ್ಮ ಸಮಾಜ ಅವಶ್ಯ ಯೋಚಿಸುವದು. ಕಾರಣ ಆಕೆಯ ಬಹಿರಂಗ ವಿವಾಹವಾಗುವದು ಕಠಿಣವೆನಿಸುತ್ತದೆ ಒಂದು ವೇಳೆ ಇದನ್ನೆಲ್ಲ ಮುಚ್ಚಿ, ವಿವಾಹ ಮಾಡಬಹುದು, ಮುಂದೆ ಅದು ಪ್ರಕಟವಾದರೆ ಅನರ್ಥ ಸಂಭವಿಸುವದಿಲ್ಲವೇ?"

ಚಿಂತಿತಳಾಗಿ ದುಲಾರಿ ಕೇಳಿದಳು "ಹಾಗಾದರೆ ಏನು ಮಾಡಬೇಕು?"

"ಮಾಲತಿಯ ಸಲುವಾಗಿ ನಾವು ತುಸು ತ್ಯಾಗ ಮಾಡಬೇಕಾದರೂ, ಅದು ಉಚಿತವೆನಿಸುವುದಿಲ್ಲವೇ, ದುಲಾರಿ."

ದುಲಾರಿಯ ಮುಖವು ಕಳೆಗುಂದಿತು, ಮೆಲ್ಲನೆ ಹೇಳಿದಳು. "ಉಚಿತ"

''ಒಂದುವೇಳೆ ನಾನು ಮಾಲತಿಯೊಡನೆ ವಿವಾಹ ಮಾಡಿಕೊಂಡರ ಹೇಗೆ? ಅದರಿಂದೇನು ಗೊಂದಲವಾಗಲಿಕ್ಕಿಲ್ಲವಷ್ಟೇ?"

ಈ ಮಾತು ಕೇಳಿ ದುಲಾರಿಯ ಕಣ್ಣಿಗೆ ಬವಳಿ ಬಂದಂತಾಯಿತು ಆಕೆ ಸಂಜ್ಞಾ ಶೂನ್ಯಳಾದಂತೆ ಕಂಡಳು, ಬಾಯಿಂದೇನೂ ಮಾತು ಬರಲಿಲ್ಲ

ಕೇಶವ ಸ್ನೇಹದಿಂದಾಡಿದನು—"ನಿನ್ನ ಒಪ್ಪಿಗೆ ಇರುವದಷ್ಟೇ ದುಲಾರೀ?

"ಅದಕ್ಕೆ ಮಾಲತಿ ಒಪ್ಪುವಳೇ?

"ಇಲ್ಲ, ಆದರೆ ನೀನು ಆಕೆಯನ್ನು ಒಪ್ಪಿಸಲು ಯತ್ನಿಸಲಾರೆಯಾ?''

ಒಣಗಿದ ಕಂಠದಿಂದಾಡಿದಳು "ಯತ್ನಿಸುತ್ತೇನೆ"

''ನೀನು ಈ ಕಾರ್ಯ ಮಾಡಲು ಶಕ್ತಳಾದರೆ, ನಿನಗ ಬಹಳ ಪುಣ್ಯ ಬರುತ್ತದೆ.''

ಪುಣ್ಯದ್ದೇನು ಇರಲಿ, ನೀವು ಹೇಳುತ್ತೀರಿ ಆದಕ್ಕಾಗಿ ಮಾಡುತ್ತೇನೆ"

''ಅದನೇನು ನಾನು ಅರಿಯನೇ? ನಿನ್ನ ಮಾತಿನ ಅಭಿಪ್ರಾಯವಿಷ್ಟೇ ಹೀಗೆ ನೀನು ಮಾಡಲು ಸಮರ್ಥಳಾದರೆ, ಅದೆಷ್ಟು ಪುಣ್ಯದ ಕಾರ್ಯ ದುಲಾರೀ! ನಿನಗೆ ಗೊತ್ತಿರಲಿಕ್ಕಿಲ್ಲ ದುಲಾರೀ ಮಾಲತಿ ನನ್ನನ್ನು ಎಷ್ಟು ಪ್ರೀತಿಸುತ್ತಿದ್ದಳು ನಾನು ಆಕೆಯ ಪ್ರೀತಿಯನ್ನು ಉಪೇಕ್ಷಿಸಿ, ಆಕೆಯನ್ನು ಕೃಪಾನ ಕೊರಳಲ್ಲಿ ಕಟ್ಟಲು ಹವಣಿಸಿದೆ ಇವತ್ತು ಒಂದು ವೇಳೆ ಅದರ ಪ್ರಾಯಶ್ಚಿತ್ತ ತೆಗೆದುಕೊಳ್ಳುವೆ. ಅಥವಾ ನಿನ್ನಲ್ಲಿ ಮುಚ್ಚಿ

ಇಡುವುದೇಕೆ ದುಲಾರೀ? ಮಾಲತಿ ನನಗೆ ಲಭ್ಯಳಾಗದೇ ನನ್ನ ಬಾಳು ಸುಖವಾಗುವದಿಲ್ಲ"

ರೋಗಿಗೆ ಶಸ್ತ್ರಕ್ರಿಯೆ ಮಾಡುವಾಗ ಹೇಗೆ ಅವನ ಮುಖ ಬಿಳುಪಾಗುವದೋ ಹಾಗ ದುಲಾರಿಯ ಮೊಗವೂ ಕೇಶವನ ಮಾತು ಕೇಳುತ್ತಲಿ ಬಿಳುಪೇರಿತು ಮತ್ತು ಆಕೆಗೆನಿಸಿದುದೇನೆಂದರೆ- ನನ್ನ ಎದೆ ಹಾರುವದು. ನಿಂತು ಹೋಗುವದೇನೋ? ಕಿಂತು ಹೇಗೋ ಅದನ್ನು ತಪ್ಪಿಸಿಕೊಂಡು ಆಕೆ ನುಡಿದಳು "ನೀವು ಹೇಗೆ ಹೇಳುತ್ತಿರೋ, ಹಾಗ ಮಾಡುವೆ"

ಪ್ರಸನ್ನತೆಯಿಂದ ಕೇಶವ ನುಡಿದ "ನಿನಗೆ ಏನೆಂದು ಆಶೀರ್ವದಿಸಲಿ? ಭಗವಂತ ನಿನಗೆ ಕಲ್ಯಾಣ ಮಾಡಲಿ. ಆದರೆ ಮಾಲತಿಯನ್ನು ಒಪ್ಪಿಸುವದು ಸುಲಭವಲ್ಲ ನಿನ್ನನ್ನು ವಂಚಿಸಿ ನಾನು ವಿವಾಹನಾಗಲಾರ, ಹೀಗೇನೋ ಆಕೆ ಹೇಳಬಹುದು, ಆದರದೇನು ವಿಚಾರ ದುಲಾರಿ?"

ತುಸು ವೇಳೆ ಸುಮ್ಮನಿದ್ದು ದುಲಾರಿ ಹೇಳಿದಳು "ಅವೆಲ್ಲ ವ್ಯರ್ಥ ಮಾತುಗಳು ನಾನು ಮಾಲತಿಯನ್ನು ಒಪ್ಪಿಸುತ್ತೇನೆ."

ದುಲಾರಿ ಬಿಚ್ಚಿ ಏನೂ ಮಾತಾಡಲಿಲ್ಲ ಆದರೆ ಕೇಶವ ತಿಳಿದ "ನಿನ್ನ ಅಭಿಪ್ರಾಯವೇನಿದೆ? ದುಲಾರಿ ನಾನು ಮತ್ತು ನೀನು ಎಂದಾದರೂ ವಚನಬದ್ಧರಾಗಿರುವೆವೋ?"

ಈಸಲ ಮಾತ್ರ ದುಲಾರಿ ತಲೆ ಕೆಳಗೆ ಹಾಕಿದಳು. ಬೇರೊಂದು ಕಡೆಗೆ ನೋಡಲಾರಂಭಿಸಿದಳು, ಏನೂ ಉತ್ತರ ಕೊಡಲಿಲ್ಲ

ಕೇಶವ ಹೇಳಿದ "ಕೆಲವರು ಏನೋ ಭಾವಿಸಿಕೊಂಡಿದ್ದಾರೆ; ಕಕ್ಕ ಮೃತ್ಯುಶಯ್ಯೆಯ ಮೇಲಿರುವಾಗ ನಾನು ನಿನ್ನೊಡನೆ ವಿವಾಹವಾಗುವ ಪ್ರತಿಜ್ಞೆ ಮಾಡಿರುವೆನೆಂದು, ಏನು ನೀನು ಸಹ ಹೀಗೇ ಭಾವಿಸಿರುವೆಯಾ ದುಲಾರಿ! ಹಾಗೇನಾದರೂ ಇದ್ದರೆ ನಾನು ನಿನಗೆರಡು ಮಾತು ಹೇಳಲಿಚ್ಛಿಸುತ್ತೇನೆ ಮೊದಲು ನಾನು ಹೇಳುವದೇನೆಂದರೆ—ನಾನು ನಿನ್ನ ಭಾರವನ್ನು ಗ್ರಹಿಸಿದೆ, ಎರಡನೆಯದು ಹಾಗೆ ಪ್ರತಿಜ್ಞೆ ಮಾಡುವದು ನನ್ನ ವಿಷಯದಲ್ಲಿ ಶಕ್ಯವೂ ಇರಲಿಲ್ಲ ಒಂದುವೇಳೆ ಹಾಗಿದ್ದರೆ ನಾನು ಮಾಲತಿಯೊಡನೆಯೇ ಏಕೆ ವಿವಾಹಿತನಾಗಬಾರದಿತ್ತು? ಇದರ ಹೊರತು ಕೃಷ್ಣಚಂದ್ರ ನಿನ್ನ ಮೇಲೆ ವಿಶೇಷ ಪ್ರೀತಿ ಮಾಡುತ್ತಾನೆ ನನ್ನೊಳಗೆ ನಾನೇ ಯೋಚಿಸಿಕೊಂಡಿದ್ದೆ, ಅವನ ಸಂಗಡ ನಿನ್ನ ವಿವಾಹ ಮಾಡೋಣವೆಂದು,

ಕಕ್ಕ ಬೇನೆಯಿಂದ ಹಾಗೆ ಇದ್ದರೂ ಸಹ, ಇವನ್ನೆಲ್ಲ ಹೇಳಬಹುದಾಗಿದ್ದಿತು. ಆದರೆ ಹಾಗಾಗಲಿಲ್ಲ, ದುಲಾರಿ, ಇದರಿಂದ ನೀನು ತಿಳಿದಿರಬಹುದು. ಯಾವ ಸಂಬಂಧದಲ್ಲಿಯೂ ನೀನು ಸಿಕ್ಕಿಲ್ಲ ಲೋಕರೀತಿ ಮತ್ತು ಧರ್ಮ ಎರಡೂ ರೀತಿಯಿಂದ ನೀನು ಕೃಷ್ಣನ ಸಂಗಡ ವಿವಾಹವಾಗಲು ಸಾಧ್ಯವಿದೆ ನಾನು ನಿಃಸಂಕೋಚವಾಗಿ ಹೇಳುವದೇನೆಂದರೆ—ನಿನಗೆ ಯಾವದಾದರೂ ಬಂಧನವೆನಿಸಿದರೆ ಅದು ಕೃಷ್ಣನ ಜೊತೆಯೇ ಪ್ರೇಮವು ಅದೇನು ಬಂಧನಕಾರಿಯಲ್ಲ, ಪ್ರಪಂಚಬಂಧನವೂ ಅಷ್ಟೇ ಇನ್ನು ಹೆಚ್ಚೇನೂ ನಾನು ಹೇಳುವದಿಲ್ಲ ರಾತ್ರಿ ಬಹಳವಾಯಿತು ನೀನು ಮಲಗಿಕೋ.''

ಕೇಶವ ಹೋದ ಮೇಲೆ ಎಷ್ಟೋ ವೇಳೆ ದುಲಾರಿ ನಿಶ್ಚಲಳಾಗಿ ನಿಂತುಕೊಂಡಿದ್ದಳು ನಂತರ—ಜೋಲಿ ಹೋಗಿ ಕುರ್ಚಿಯ ಬಳಿಗ ಹೋದಳು ಪುನಃ ಎಚ್ಚತ್ತು ಹಾಸಿಗೆ ಮೇಲೆ ಕುಳಿತಳು

ಮರುದಿನ ಎರಡು ಪ್ರಹರವಾಗಿರಬಹುದು, ಕೇಶವ ರಾಮಕಲಿಯ ಬಳಿಗೆ ಬಂದನು ''ಅತ್ತಿಗೆ, ನಿನ್ನ ಮೇಲೆ ಒಂದು ದೊಡ್ಡ ಕಾರ್ಯದ ಭಾರವಿಡಬೇಕೆಂದಿದ್ದೇನೆ''

ಆ ಕಾರ್ಯವೆಂದರೆ ಮಾಲತಿಯನ್ನು ವಿವಾಹಕ್ಕೊಪ್ಪಿಸುವುದು, ಅಥವಾ ಇದೇ ತರದ ಇನ್ನೊಂದು ಏನಾದರೂ ಎಂದು ಯೋಚಿಸಿ ರಾಮಕಲಿ ಚಿಂತಿತಳಾದಳು. ಆದರೆ ಕೇಶವ ನಗುತಿರುವದನ್ನು ಕಂಡು ಅವನನ್ನು ಕೇಳುವ ಸಾಹಸ ಮಾಡಿದಳು ''ಅದಾವ ಕಾರ್ಯ? ಹೇಳಿ''

"ಇದೇ ಬರುವ ವೈಶಾಖದಲ್ಲಿ ಒಂದೇ ಮುಹೂರ್ತಕ್ಕೆ ಒಂದು ಅಲ್ಲ, ಎರಡು ವಿವಾಹದ ಸಿದ್ಧತೆ ನೀನು ಮಾಡಬೇಕು, ಕೃಷ್ಣ ಮತ್ತು ದುಲಾರಿ ಮಾಲತಿ ಮತ್ತು ಕೇಶವ.''

"ಒಂದು ವೇಳೆ ಹೀಗಾದರ ಇದಕಿಂತ ಸಂತೋಷ ಇನ್ನೇನು? ಆದರೆ ಇದೆಲ್ಲ ಕೂಡುವುದು ಹೇಗೆ? ಮಾಲತಿ ಒಪ್ಪಿಕೊಂಡಿರುವಳೇ?"

"ಆ ಭಾರ ನನ್ನದು. ಆ ವಿಷಯಕ್ಕೇನೂ ನೀನು ಚಿಂತಿಸಬೇಡ"

ತುಸು ವೇಳೆ ಯೋಚಿಸಿ ರಾಮಕಲಿ ಆಡಿದಳು. ನೀವು ಏನು ಬೇಕಾದುದನ್ನು ಹೇಳಿರಿ. ಇದರಲ್ಲಿ ಇನ್ನೊಂದು ಗೊಂದಲವಿದೆ. ದುಲಾರಿ ಒಪ್ಪುವದಿಲ್ಲ. ಅದರಂತೆ ಮಾಲತಿ ಸಹ. ಮಾಲತಿ ಮೊದಲಿನಂತೇನೋ ನಿಮ್ಮನ್ನು

ಪ್ರೀತಿಸುತಿಸುತ್ತಾಳೆ, ಆದರೆ ದುಲಾರಿಯನ್ನು ದುಃಖ ಪಡಿಸಿ ಆಕೆ ಸುಖಿಯಾಗಲಾರಳು ನಾನು ಹೇಳುವದೇನೆಂದರೆ- ಇದನ್ನು ವಿಚಾರಿಸಬೇಕಾಗುವುದು ಬರಿ ಮಾಲತಿಯ ವಿಚಾರವನ್ನಷ್ಟೇ ಮಾಡಿದರೆ ಸರಿಯಲ್ಲ ಮಾಲತಿ ದುಃಖಿತಳಾದರೆ ನೀವೇನು ಮಾಡೀರಿ? ಎಷ್ಟು ಜನ ತಂತಮ್ಮ ಕರ್ಮಾನುಸಾರ ದುಃಖಕ್ಕೀಡಾಗಿಲ್ಲ?

ತುಸು ವೇಳೆ ಅತ್ತಿಗೆಯನ್ನು ದಿಟ್ಟಿಸಿ ನೋಡುತ್ತ ನಿಂತು ಕೇಶವ ನುಡಿದ "ಮಾಲತಿ ತಿರಸ್ಕೃತಳು ಆಕೆಯೊಡನೆ ಲಗ್ನವಾಗುವದರಿಂದ ನಾನೂ ಪತಿತನಾಗುತ್ತೇನೆ ಎಂದು ನೀನು ಕೂಡ ಹೇಳುವಿಯಾ ಅತ್ತಿಗೆ?"

ದುಃಖಿತಳಾಗಿ ರಾಮಕಲಿ ಹೇಳಿದಳು "ನಾನು ಆ ಅರ್ಥದಿಂದ ಮಾತಾಡಲಿಲ್ಲ ಆದರೆ ನಮ್ಮ ಸಮಾಜ "

ನಡುವೆ ಕೇಶವ ನುಡಿದ "ಸಮಾಜದ ಮಾತು ಅಣ್ಣನಿಗಷ್ಟೇ ಇರಲಿ, ಆ ವಿಷಯ ಅವನು ನಿರ್ಣಯಿಸುತ್ತಾನೆ"

"ಆದರೆ ಅವರ ಮಾತೂ ಕೇಳಬೇಕಾಗುವದಲ್ಲ? ಅವರಿಗೆ ವಿರುದ್ಧ ನಾನು ಹೋಗಬಲ್ಲೆನೇ?"

"ಅವನು ಒಪ್ಪದಾದರೆ ಅವನನ್ನು ಬಿಟ್ಟು ನಿಲ್ಲುತ್ತೇನೆ ಮತ್ತು ಅದರ ಜೊತೆಗೆ ನಿನ್ನನ್ನೂ ದೂರಮಾಡಬೇಕಾಗುತ್ತದೆ, ಅದು ಕಷ್ಟವೇನೋ ನಿಜ, ಆದರ ತ್ಯಜಿಸುತ್ತೇನೆ ಅತ್ತಿಗೆ!

ಇಷ್ಟರಲ್ಲಿ ಅನಂತನೂ ಅಲ್ಲಿಗೆ ಬಂದ ರಾಮಕಲಿ ಕಾತುರಳಾಗಿ ನುಡಿದಳು 'ಇವರು ಮಾಲತಿಯೊಡನೆ ಲಗ್ನವಾಗುತ್ತೇನೆಂದು ಹೇಳುವರಲ್ಲ?' ಕೇಳದವರಂತೆ ಅನಂತ ಸುಮ್ಮನಿದ್ದುಬಿಟ್ಟ

"ಕೇಶವ ನುಡಿದ "ಕಾಶಿಯ ಪಂಡಿತರೆಲ್ಲ ಹೇಳಿದ್ದಾರೆ ಇಂಥ ಪ್ರಸಂಗ ಬಂದರ ವಿವಾಹಕ್ಕೇನೂ ತಡೆಯಿಲ್ಲ, ಎಂದು ಅವರು ಸಮ್ಮತಿಸಿದ್ದಾರ"

ಅನಂತ ಹೇಳಿದ "ಕೇಶವ, ಪಂಡಿತರ ಮಾತು ಬಿಟ್ಟುಬಿಡು ನಮ್ಮ ಸಮಾಜದ ಮೂರ್ಖರಿರುವರಲ್ಲ, ಇವರನ್ನು ಸಮಾಧಾನ ಪಡಿಸುವದು ಹೇಗೆ?

"ನೀನು ಆ ಸಮಾಜದ ಮೂರ್ಖರ ಬಾಲಕಸಿಯಾಗಿ ನಡೆಯ

ಒಹುದು, ನನಗೆ ಇವೆಲ್ಲ ವಿಷಯಗಳಲ್ಲಿ ಬಹಳ ವಿಚಾರ ಬೇಕಾಗಿದೆ,'' ಎಂದು ಹೇಳಿ ಹೊರಡಲು ಅವನು ಎದ್ದು ನಿಂತನು.

ಅವನನ್ನು ತಡೆದು ಅನಂತ ಹೇಳಿದನು ''ಕೇಶವ, ಕೇಳು ಸಮಾಜ ಇಷ್ಟೊಂದು ಉಪೇಕ್ಷಣೀಯವಲ್ಲ. ಬೇಕಾದರೆ ಮಾಲತಿಯ ಸಲುವಾಗಿ ಒಂದು ಕನ್ಯಾ ಪಾಠಶಾಲೆ ತೆಗೆದುಕೊಡಬಹುದು, ಆಕೆ ಸಮಾಜ ಸೇವೆಯಲ್ಲಿ ಜೀವನ ಕಳೆಯಬಹುದು. ತುಸು ಶಾಂತತೆಯಿಂದ ವಿಚಾರಿಸು. ಕೋಪದಿಂದ ಕಾರ್ಯವಾಗದು.''

ತುಸು ವೇಳೆ ಸುಮ್ಮನಿದ್ದು ನಂತರ ದೃಢಸ್ವರದಿಂದ ಕೇಶವ ಹೇಳಿದನು "ಹಾಗೇ ಆಗಲಿ. ಸಮಾಜವೆಂಬ ಕಟುಕರಂಗಡಿಯಲ್ಲಿ ಆಕೆಯ ಕೊರಳಮೇಲೆ ಚೂರಿ ಇಡು. ಆಕೆ ನೀಚಳು, ತಿರಸ್ಕೃತಳು, ಅಸ್ಪೃಶ್ಯಳು. ಹೀಗಿದ್ದು ಆಕೆಯನ್ನು ಮನೆಯಲ್ಲೇಕೆ ಇರಿಸಿಕೊಂಡಿರುವಿ? ನಾವು ದೊಡ್ಡವರು, ನಾವು ಪವಿತ್ರರು, ಹೀಗಿರುವಾಗ ಆಕೆ ನಮ್ಮ ಕೂಡ ಈ ಮನೆಯಲ್ಲಿ ಇರಲು ಹೇಗೆ ಸಾಧ್ಯ? ಆದರೆ ಅಣ್ಣಾ, ನಿನಗೆ ನಾನು ಸ್ಪಷ್ಟಪಡಿಸಿಕೊಡುತ್ತೇನೆ. ಈ ನಿನ್ನ ಮೇಲು-ಕೀಳು, ಜಾತಿ-ಅಭಿಮಾನ, ಈ ಮುಚ್ಚುಮರೆ ಇವು ಸಮಾಜದ ಹೆಸರಿನಲ್ಲಿ ನಡೆಯುವ ಹತ್ಯಾಕಾಂಡ ಬಹಳ ದಿನ ಬಾಳಲಾರದು. ಇದೆಲ್ಲ ಒಂದು ದಿನ ಮಣ್ಣುಗೂಡಿ ಹೋಗುವುದು. ಇದನೆಲ್ಲ ಮಾಡುವವರು ಮತ್ತಾರೂ ಅಲ್ಲ, ಯಾರನ್ನು ನೀವು ನೀಚರೆಂದು ತಿರಸ್ಕರಿಸುತಿರುವರೋ, ಅವರೇ. ಆ ದಿನ ಇನ್ನು ಬಹಳ ದೂರವಿಲ್ಲ" ಇಷ್ಟು ಹೇಳಿ ಕೇಶವ ಕೊಟಡಿಯಿಂದ ಹೊರಬಿದ್ದು ಹೋದನು.

ಅನಂತ ಸುಮ್ಮನೆ ಕುಳಿತು ಬಿಟ್ಟಿದ್ದನು. ರಾಮುಕಲಿಯು ಮೌನದಿಂದ ನಿಂತುಕೊಂಡಿದ್ದಳು. ತುಸು ವೇಳೆಯನಂತರ ಅನಂತ ಹೇಳಿದ "ಇನ್ನು ಮನ ಮುಳುಗಿತು, ಮನೆಯಲ್ಲಿ ಬೆಂಕಿ ಹೊತ್ತಿದೆ, ಇದರಿಂದ ಉಳಿಯುವುದು ಕಠಿಣ!''

ರಾಮುಕಲಿ ಅವನ ಬೆನ್ನ ಮೇಲೆ ಕೈ ಇಟ್ಟು ನುಡಿದಳು "ಇಷ್ಟು ಕೈಕಾಲು ಬಿಡುವದೇಕೆ? ಗಂಡಸರಾಗಿ!'' ಹೀಗೆ ಹೇಳುತಿರುವಾಗಲೇ ಆಕೆಯ ಕಣ್ಣಿನಿಂದ ಎರಡು ಹನಿಗಳುದುರಿ ಅನಂತನ ಕೈಗಳಲ್ಲಿ ಬಿದ್ದವು.

## (೩೩)

ಚಳಿಗಾಲ ಹೋಗುವ ಸಿದ್ಧತೆಯಲ್ಲಿದ್ದಿತು ಇಂದು ಬೆಳಗಿನಿಂದ ಲಖನೌದಲ್ಲಿಯೂ ವಸಂತಾಗಮನ ಸೂಚನೆಯನ್ನು ಗಾಳಿ ಸೂಚಿಸಿಕೊಡ ಲಾರಂಭಿಸಿತ್ತು. ಇನ್ನೂ ಸಂಜೆಯಾಗಿರಲಿಲ್ಲ ಆಗಿನಿಂದ ತನ್ನ ಮುಂದೆ ಅಂಚೆಯಿಂದ ಬಂದ ಓದು ಪತ್ರುವನ್ನಿಟ್ಟುಕೊಂಡು ಉದಾಸೀನಳೂ, ಅನ್ಯಮನಸ್ಕಳೂ ಆದ ಮಾಲತಿ ಹೊರಗೆ ಮುಗಿಲನ್ನು ನೋಡುತ್ತಿದ್ದಳು.

ಬೆಳದಿಂಗಳಿನಿಂದ ಬೆಳಗುತಿರುವ ಆಕಾಶದೆದೆಯ ಮೇಲೆ, ಕಿಲ-ಕಿಲ ನಗುತಿರುವ ಚಿಕ್ಕದೊಂದು ತಾರಕೆಯನ್ನು ಕಂಡು, ಮಾಲತಿಯ ಕಪೋ ಲವಲ್ಲಿ ಏಕೋ ಕಣ್ಣೀರು ಹರಿದವು ಇವತ್ತು ಮುಂಜಾವದಿಂದಲೇ, ಎಂದರೆ ಈ ಪತ್ರ ದೊರೆತಾಗಿನಿಂದಲೇ ಆಕಯ ಮನಸ್ಸು ನಿವ್ಹಲವಾಗಿ ಹೋಗಿತ್ತು

ಈ ಚಿರಪರಿಚಿತವೂ, ಅತಿಶಯ ಪ್ರಾಯವೂ, ಹಾಗೂ ಶರೀರದ ನಾಡಿ ನಾಡಿಯಲ್ಲಿ ಭೇದಿಸಿಕೊಂಡ ಆಶ್ರಯಸ್ಥಳದಿಂದ ಎಲ್ಲಾ ವಾಸನಾ ಕಾಮನಾ ಇವುಗಳ ಶೃಂಖಲೆಯನ್ನು ಹರಿದೊಗೆದು, ಹೋಗಬೇಕಾಗುವದಲ್ಲ? ಅದು ಕೂಡ ಯಾವುದೋ ಗೊತ್ತಿಲ್ಲದ ಗುರಿಯಿಲ್ಲದ ಹಾದಿಗೆ! ಅತಿ ದೂರ ಸ್ಥಳ ದಲ್ಲಿ ಬಾಂಧವಹೀನ, ಸ್ವಜನಹೀನ ಪರದೇಶದಲ್ಲಿ ಗುರುತಿಲ್ಲದ ಜನಗಳ ನಡುವೆ ಬಾಳುವೆಯ ಹೊಸ ಅಧ್ಯಾಯ ಆರಂಭಿಸಬೇಕು ಎಷ್ಟು ದಿನಗಳವರೆಗೆ? ಅದರ ಕಡೆ ಎಂದು? ಅದರ ಸಾರ್ಥಕತೆ ಏನು?

ಈ ಕೊಟಡಿಯ ಅಣುಪರಮಾಣುಗಳು ಕೂಡ ಆಕೆಯ ಗುರುತಿನವು. ಕಣ್ಣು ಕಟ್ಟಿಕೊಂಡು ಪ್ರವೇಶ ಮಾಡಿದರೂ ಕೂಡ, ಈ ಕೊಟಡಿಯ ಗಾಳಿ ಯನ್ನು ಮೂಸಿ ನೋಡಿ ಆಕೆ ತಿಳಿಯಬಲ್ಲಳು, ಕತ್ತಲೆಯಲ್ಲಿ ಮಲಗಿ ಆಕೆ ತನ್ನ ಮಂಚದ ಸುಖ ಸ್ಪರ್ಶವನ್ನು ಅನುಭವಿಸಬಲ್ಲಳು, ಕೊಟಡಿಯ ಎಲ್ಲಾ ವಸ್ತು, ಆಕೆಯ ಉಪಯೋಗಕ್ಕೆ ಸದಾ ಸಿದ್ಧ; ಕುರ್ಚಿಯ ಮೇಲೆ ಆಕೆಯ ಸಲುವಾಗಿ ಗಾದಿ ಹಾಸಿದೆ. ತೂಗು ಮಂಚ ಆಕೆಗೆಂದೇ ತಗ್ಗಿಸಿ ಕಟ್ಟಿದ್ದಾರೆ! ಇದೇ ಕೊಟಡಿಯಲ್ಲಿ ಆಕೆ ಸುಖದಿಂದ ನಕ್ಕಿದ್ದಾಳೆ, ದುಃಖದಲ್ಲಿ ಅತ್ತಿದ್ದಾಳೆ; ರೋಗ ಬಂದಾಗ ನರಳಿದ್ದಾಳೆ, ಆರಾಮದಲ್ಲಿ ಇಲ್ಲಿಯೇ ವಿನೋದ ಮಾಡಿ

ದ್ದಾಳೆ, ಇದೇ ಕೊಟಡಿಯನ್ನು ಆಕೆ ಪ್ರೀತಿಸಿದ್ದಾಳೆ, ಪ್ರೀತಿ ಮಾಡುವದನ್ನು ಇದೇ ಕೊಟಡಿಯಲ್ಲಿ ಕಲಿತಿದ್ದಾಳೆ.

ಈಗ ಒಮ್ಮೆಲೇ ಇವುಗಳನೆಲ್ಲಾ ಬಿಟ್ಟು, ಗೊತ್ತು ಗುರಿ ಇಲ್ಲದ ಒಂದು ಕಡೆಗೆ ಹೋಗಲು ಕರೆ ಬಂದಿದೆ! ಹೋಗುವದೇನೋ ಸರಿ, ಆದರೆ ಕಿವಿಯಲ್ಲಿ ಯಾರೋ ಹೇಳುತಿದ್ದಾರೆ ಇರು, ಇರು! ಮನಸ್ಸಿನಲ್ಲಾರೋ ನಿಷೇಧಿಸುತಿದ್ದಾರೆ, ಹೋಗಬೇಡ, ಹೋಗಬೇಡ! ಈ ಬಗೆಯ ವ್ಯರ್ಥವೂ, ವ್ಯಥೆಯುಳ್ಳದುದೂ, ಆದ ಜೀವನದಲ್ಲಿ ಇಂದು ಕೂಡ ಒಂದೇ ಒಂದು, ಕಾಮನಾ ವಸ್ತುವಾಗಿ ನೆಲೆಸಿದೆ ಅದು ತನ್ನ ಬಳಲಿದ ಕೈಗಳನ್ನು ಚಾಚಿ ಹೃದಯದ ಕಡೆಗೆ ಕರೆಯತೊಡಗಿದೆ, ಬಾ, ಬಾ! ಆದರೂ ಹೋಗಬೇಕಲ್ಲ ಹೋಗದೇ ಕಾರ್ಯ ನಡೆಯುವಂತಿಲ್ಲ ಇದೆಂಥ ನಿಷ್ಠುರ ಹೋಗೋಣ? ಎಂಥ ಕಠೋರ ಪರೀಕ್ಷೆ!

ಹೀಗೆ ಮಾಲತಿ ತನ್ನ ಮನದಲ್ಲಿ ಇರುವಿಕೆ–ಹೋಗುವಿಕೆ, ಭೋಗ ಮತ್ತು ತ್ಯಾಗ ಈ ತತ್ವಗಳ ಪರೀಕ್ಷೆ ಮಾಡುತಿದ್ದಳು ಗುರುತಿರುವ ಹಾಗೂ ಬಯಸುತಿರುವರನ್ನು ಬಿಟ್ಟುಹೋಗಬೇಕೆಂದರೆ ಮನಸ್ಸಿನಲ್ಲಿ ಹಾಹಾಕಾರವಾಗುತಿದ್ದಿತು , ಇದೆಲ್ಲಾ ಬಿಟ್ಟು ಹೋಗುವದೇ ಆದರ ಯಥಾರ್ಥ ಬೆಲೆ! ಇಂಥ ತ್ಯಾಗ ದುಃಖದಿಂದ ಬಣ್ಣವೇರಿದರೂ ಕೂಡ ಭೋಗ ವಸ್ತುಗಳು ಇನ್ನಷ್ಟು ರಮಣೀಯ ಕಾಣಲಾರಂಭಿಸಿವೆ. ವಿರಹದ ಸಜಲ ರೇಖೆಯೇ ಮಿಲನ ಚಿತ್ರವನ್ನು ಇಷ್ಟು ಸುಂದರ ಮಾಡಿಬಿಟ್ಟಿದೆ. ಅದಕಾಗಿ ತ್ಯಾಗವು ಭೋಗದ ವಿರಹವು–ಮಿಲನದ ಮೂಲ್ಯವೆನಿಸಿದೆ ಮಾಲತಿ ಸಂಕಲ್ಪಿಸಿಕೊಂಡಳು, ಏನು ಬೇಕಾದುದಾಗಲಿ ಈ ಮೂಲ್ಯವನ್ನು ಹೊಂದುತ್ತೇನೆ

ಈ ಮಧ್ಯದಲ್ಲಿ ದುಲಾರಿ ಪ್ರವೇಶಿಸಿದಳು, ಕಾಲಸಪ್ಪಳ ಕೇಳಿ ಮಾಲತಿ ಹೊರಳಿ ನೋಡಿ ನುಡಿದಳು. "ಬಾರಮ್ಮಯ್ಯ ಇತ್ತ ಕೂಡು. ಹು–ತಲೆಶೂಲೆ ಈಗ ಹೇಗೆ ಹೇಳು"

ಮಾಲತಿಯ ಬಳಿಯ ಕುರ್ಚಿಯ ಮೇಲೆ ಕೂಡುತ್ತ ದುಲಾರಿ ಹೇಳಿದಳು "ಹಾಗೇ ನೀನೊಬ್ಬಳೇ ಸುಮ್ಮನೇ ಹೇಗೆ ಕುಳಿತಿದ್ದೆ ಮಾಲತೀ?"

ನಗುತ್ತ ಮಾಲತಿ ಅಂದಳು. "ನೀನು ಬಂದೆಯಲ್ಲ. ಇನ್ನು ಮೇಲೇನೂ ನಾನು ಒಬ್ಬಳಲ್ಲ ಮತ್ತು ಇನ್ನು ಮೌನವಾಗಿಯೂ ಇರುವದಿಲ್ಲ"

ದುಲಾರಿ ಕೊರಳು ತುಸು ವಕ್ರಗೊಳಿಸಿ ಕೇಳಿದಳು. "ಒಂದು ಮಾತು ಕೇಳಬೇಕಾಗಿದೆ ನಿಜ ಹೇಳುವೆಯಾ ?"

"ಅದೇನಮ್ಮಾ?"

"ನೀನು ನಿನ್ನ ಬಾಳಿನ ಎಲ್ಲಕ್ಕೂ ಮಹತ್ವದ ವಿಷಯ ನನ್ನಿಂದ ಮರ ಮಾಡಿ ಇಟ್ಟದ್ದೇಕೆ?"

ತುಸು ವೇಳೆ ಸುಮ್ಮನಿದ್ದು ಮಾಲತಿ ಅಂದಳು "ನಿನ್ನ ಗುರುತಾದಾಗ, ಆ ಮಹತ್ವದ ವಿಷಯ ಭಯಂಕರವೆನಿಸಿ ಹೋಗಿತ್ತು."

"ಹೇಗಿದ್ದರೂ ಆ ದುಃಖದ ವಿಷಯವನ್ನು ನನ್ನೊಡನೆ ಏಕೆ ಹೇಳಲಿಲ್ಲ, ನಿನ್ನ ದುಃಖದ ಮಾತು ಕೇಳಲು ಈಕೆ ಹೃದಯಹೀನಳೆಂದು ತಿಳಿದೆಯಾ"

"ಹಾಗಲ್ಲ ದುಲಾರೀ, ದುಃಖದ ಅಸಲಿಗಿಂತ ಈಗ ಬಡ್ಡಿ ಬಹಳ ಬೆಳೆದು ಹೋಗಿದೆ, ಅದರಿಂದ ನಿನಗೂ ತುಸು ಕೊಡುತ್ತೇನೆ ಆದರೆ ಇಂದೇ ಅಲ್ಲ. ,ಇಂದು ನೀನು ಕೇಶವಣ್ಣನ ದೂತಿಯಾಗಿ ಬಂಗಿರುವದನ್ನು ಬಲ್ಲೆ"

ವಿಸ್ಮಿತಳಾಗಿ ದುಲಾರಿ ಅಂದಳು "ನಾನು ಸ್ವೇಚ್ಛೆಯಿಂದ ಬಂದಿರುವೆನೋ, ದೂತಿಯಾಗಿ ಬಂದಿರುವೆನೋ—ಅದೇನೇ ಇರಲಿ ಆದರ ನನ್ನ ಪ್ರೇಮದ ವಿಷಯದಲ್ಲಿ ನೀನು ಸಂದೇಹತಾಳದಿರು ಮಾಲತಿ ಇಂದು"

ಮಾಲತಿ ಆಕೆಯ ಮಾತು ಮುಗಿವ ಮೊದಲೇ ನುಡಿದಳು "ಇದರಲ್ಲಿ ಸಂದೇಹದ ಮಾತೇಕ? ನಾನು ನಿನ್ನನ್ನು ಗುರುತಿಸುತ್ತೇನೆ ದುಲಾರೀ. ನಾನು ಎಲ್ಲಾ ಬಲ್ಲೆ,"

"ಮಾಲತೀ !"

"ಏನು ಹೇಳು"

"ನನ್ನ ಒಂದು ಮಾತು ಕೇಳುತ್ತೀಯಾ?"

"ಇಲ್ಲ."

"ಕೇಳಿಕೊಳ್ಳದೇ ಇಲ್ಲವೆಂದರೇನದು?"

ಕೇಳಲಿಲ್ಲ, ಆದರೂ ತಿಳಿಯುತ್ತೇನೆ ಹುಡುಗಾಟ ಮಾಡಬೇಡ ದುಲಾರೀ ನಿನ್ನಂಥ ಹುಚ್ಚಿಯನ್ನು ನಾನು ನೋಡೇ ಇಲ್ಲ"

"ಏನಾದರೂ ಸರಿಯೇ, ಆದರೆ ಈ ನನ್ನ ಮಾತು ನೀನು ಒಪ್ಪಲೇಬೇಕು. ಇಲ್ಲವಾದರೆ ನನಗೆ ಬಹು ದುಃಖವಾಗುವುದು."

ಮಾಲತಿ ನಗುತ್ತಿದ್ದಳು "ಹು ಒಪ್ಪಿಕೊಂಡರೆ ಬಹು ಸುಖಿಯಾಗುವಿಯಲ್ಲವೇ? ಹೇಳು, ನಿಜ ಹೇಳು."

ತುಸು ವೇಳೆ ಸುಮ್ಮನಿದ್ದು ದುಲಾರಿ ಆಡಿದಳು. "ಹಾಗೆ ಕಾಣುತ್ತದೆ ಅಗುತ್ತೇನೆ ನೀನು ಸುಖಿಯಾದರ ನಾನು ಸುಖಿ."

ನಗುತ್ತ ಹೇಳಿದಳು ಮಾಲತಿ ' ನೀನು ಸುಖಿಯಾದರೆ ನಾನು ಸುಖಿಯಾಗಲು ಅಧಿಕಾರವಿಲ್ಲವೇ ನನಗೆ?"

"ಇರದೇ ಏನು? ಆದರೆ ನಮ್ಮ ಸುಖವನ್ನಷ್ಟೇ ನಾವು ನೋಡುವದೊಳಿತಲ್ಲ ಮಾಲತೀ ನಾವು ನೋಡಬೇಕಾಗಿರುವದೆಂದರೆ ಅವರು ಹೇಗೆ ಸುಖಿಗಳಾಗುತ್ತಾರೆ ಅಷ್ಟೇ

"ಅವರು ಹೇಗೆ ಸುಖಿಗಳಾಗುತ್ತಾರೆಂಬುದು ನಿನಗೆ ಹೇಗೆ ತಿಳಿಯಿತು ದುಲಾರೀ?"

ಮಾಲತಿಯ ಈ ಪ್ರಶ್ನೆಯಿಂದ ದುಲಾರಿ ಸಂಕಟದಲ್ಲಿ ಸಿಕ್ಕಳು ಮಾಲತಿ ಆಕೆಯನ್ನು ಒಲೆಯಲ್ಲಿ ಹಿಡಿದಿದ್ದಾಳೆ ಬೇರೆ ಉಪಾಯಗಾಣದೆ ಹೇಳಿದಳು

"ಅದನ್ನು ನಾನು ತಿಳಿಯುತ್ತೇನೆ ಅವರು ಹೇಗೆ ಸುಖಿಗಳಾಗುವರೋ ಎಂಬುದನ್ನು ಸ್ವತಃ ಕೂಡ ಹೇಳಿದ್ದಾರೆ.''

"ಸ್ವತಃ ಹೇಳಿದನೇ? ಅಹ! ಎಂಥ ಕಠೋರತನ?" ಹೀಗೆ ನುಡಿಯುವುದು ಮಾಲತಿಗಿಷ್ಟವಿರಲಿಲ್ಲ ಆದರೆ ಮಾತಿನ ವೇಗದಲ್ಲಿ ಹೊರಟು ಹೋಯಿತು

ಮಾಲತಿಯ ಮಾತು ಕೇಳಿ ದುಲಾರಿ ಕ್ಷುಬ್ಧಳಾಗಿ ನುಡಿದಳು ''ಇಂಥಾ ಮಾತಾಡಬೇಡ ಮಾಲತೀ ಅವರು ಕಠೋರರಲ್ಲ ಹೃದಯವೆಷ್ಟು ಕೋಮಲ! ನಿನ್ನ ಸಲುವಾಗಿ ಅವರೆಷ್ಟು ಕಷ್ಟಪಡುತ್ತಾರೋ, ನೋಡಿದರೆ ಕಣ್ಣೀರು ಬರುತ್ತವೆ"

"ಏನು ಮಾಡಲಿ? ನಿನಗೆ ಕೊಡುತ್ತಿರುವ ದುಃಖದಿಂದ ಬಿರಸು ಮಾತು ಬಾಯಿಂದ ಬರುತ್ತವೆ. ತಂಗೀ"

"ಅವರು ನನಗೇನೂ ಕಷ್ಟ ಕೊಡುತ್ತಾರೆ ನನ್ನ ಸಲುವಾಗಿ ಅವರನ್ನು ದೂಷಿಸುವಂತಿಲ್ಲ, ಅವರು ನನಗೆ—" ಮುಂದೆ ದುಲಾರಿ ಗದ್ಗದಿತಳಾದಳು

ತುಸು ತಡೆದು ಮಾಲತಿ ಹೇಳಿದಳು- "ಒಳ್ಳೇದು; ಅವರೆಂದೂ ನಿನ್ನನ್ನು ಪ್ರೀತಿಸಲಿಲ್ಲವೆಂಬುದನ್ನು ಒಪ್ಪುತ್ತೇನೆ, ಆದರೆ ನೀನು ದುಲಾರೀ!'

"ನನಗೆ ನಿನ್ನ ಕತೆ ಗೊತ್ತಿದ್ದರ ಮಾಲತೀ, ನಾನು—''ಪುನಃ ಮಾತಾಡಲಾಗಲಿಲ್ಲ

"ಕೇಶವಣ್ಣನನ್ನು ಪ್ರೀತಿಸುತಿರಲಿಲ್ಲ ಆದರೆ ಒಮ್ಮೆ ಪ್ರೀತಿಸಿದೆಯಲ್ಲ?" ಸಹಸಾ ಒಂದು ಸಂದೇಹ ತಲೆದೋರಿತು, ಮಾಲತಿ ಕೂಗಿದಳು 'ದುಲಾರೀ'

ಉತ್ತರವನ್ನು ಹೊಂದದೆ ಮಾಲತಿ ದೀಪವನ್ನು ಹೊತ್ತಿಸಿ ನೋಡು ತ್ತಾಳೆ, ದುಲಾರಿ ಅಳುತ್ತಾಳೆ

"ನೀನು ಅಳತೊಡಗಿದೆಯಲ್ಲ? ದುಲಾರೀ"

"ನೀನು ಅಳುವಂತಾಡಿದರೆ, ಅಳದಿರುವೆನೇ?"

ನಗುತ್ತ ಮಾಲತಿ ನುಡಿದಳು. "ಚನ್ನಾಗಿದೆ,''

''ಮಾಲತೀ, ನೀನು ಸಹಾನುಭೂತಿಯನ್ನು ತೋರುತಿರುವಿ ಆದರೆ ನನಗೆ ಅಳು ಬರುತ್ತದೆ, ನೀನು ನಿಜವಾಗಿ ನನ್ನ ಪ್ರೀತಿ ಮಾಡುತಿದ್ದರೆ— ನಾನು ಸುಖಿಯಾಗುವಂತೆ ಮಾಡು''

"ನಿನಗೆ ಹೇಗಾದರೆ ಸುಖವೋ ನಾನು ಕಾಣೆ"

ದುಲಾರಿ ಬೇಗನೆ ಕುರ್ಚಿಯಿಂದ ಮೇಲೆದ್ದು ಮಾಲತಿಯ ಎರಡೂ ಕೈಹಿಡಿದುಕೊಂಡಳು "ನಾನು ಸುಖಿಯಾಗುತ್ತೇನೆ ನಂಬು, ನಾನು ಸುಖಿ ಯಾಗುತ್ತೇನೆ ನೀನು ಕೇಶವಣ್ಣನ ಸಂಗಡ ಲಗ್ನವಾಗು, ಹಾಗಾದರೆ ನಾನು ಸುಖಿ ಇಲ್ಲವಾದರೆ ಇಲ್ಲ ಮತ್ತು ಕೇಳು, ನಾನು ಅಳುತಿದ್ದೆ ಎಂದು ಅವರ ಮುಂದೆ ಹೇಳಬೇಡ ನಾನು ಬಹಳ ಅನುಚಿತ ಕಾರ್ಯ ಮಾಡಿದೆ, ಒಳ್ಳೇದು ಈಗ ನಾನು ಹೋಗುತ್ತೇನೆ ತಲೆ ಸಿಡಿದು ಬೀಳಹತ್ತಿದೆ''

ಹೋಗಲನುವಾದ ದುಲಾರಿಯನ್ನು ತನ್ನ ಕೈಗಳಿಂದ ಬಿಗಿದಪ್ಪಿ— ಮಾಲತಿ ನುಡಿದಳು 'ಒಂದು ಮಾತು ಕೇಳಿ ಹೋಗು ದುಲಾರೀ ಕೇಶ ವಣ್ಣನ ಕೂಡ ನಿನ್ನ ವಿವಾಹವಾಗದಿದ್ದರೆ ನೀನು ಕೃಷ್ಣಚಂದ್ರನ ಜೊತೆಗೆ ವಿವಾಹಿತಳಾಗುವಿಯೋ ಇಲ್ಲವೋ?''

ಮಾಲತಿಯನ್ನು ಸಕರುಣ ದೃಷ್ಟಿಯಿಂದ ನೋಡಿ ಅಪ್ಪುಗೆ ಬಿಡಿಸಿಕೊ ಳ್ಳಲು ಯತ್ನಿಸುತ್ತ ದುಲಾರಿ ಹೇಳಿದಳು 'ಮುಂದಿನ ಮಾತು ಮುಂದೆ"

ಇನ್ನಷ್ಟು ಬಲವಾಗಿ ಅಪ್ಪಿ ಮಾಲತಿ ಕೇಳಿದಳು. "ಅಲ್ಲ, ಅದು ಮೊದಲ ಮಾತು, ಹೇಳದೇ ನಾನು ಬಿಡುವಂತಿಲ್ಲ"

ದುಲಾರಿ ಮಾಲತಿಯ ಮೋರೆಯಲ್ಲಿ ದೃಷ್ಟಿ ಇಟ್ಟು ತಡೆಯುತ್ತ ಆಡಿದಳು "ನೋಡು ಮಾಲತೀ ನನಗೆ ಬಾಳು ಮತ್ತು ವಿವಾಹ ಎರಡರ ವಿಷಯದಲ್ಲಿಯೂ ತಿರಸ್ಕಾರ ಉಂಟಾಗಿದೆ, ನಾನಂತೂ ಸಂಕಲ್ಪಿಸಿಕೊಂಡಿದ್ದೇನೆ, ಬದುಕಿರುವವರೆಗೆ ಹೀಗೇ ಇರಬೇಕು ನನಗೆ ಇನ್ನಾರಿದ್ದಾರೆ?"

ಮರಳಿ ದುಲಾರಿಯ ಕಣ್ಣುಗಳಿಂದ ನೀರು ಸುರಿಯಲಾರಂಭಿಸಿದವು ಎಷ್ಟೋ ಹೊತ್ತು ಇಬ್ಬರೂ ಅಪ್ಪಿಕೊಂಡು ಅತ್ತರು.

ಅದೇ ದಿನ ರಾತ್ರಿ ಮುಂದೆ ತುಸು ವೇಳೆಯ ಮೇಲೆ ಮಾಲತಿ ಕೇಶವನ ಕೊಟಡಿಯ ಬಾಗಿಲು ತಟ್ಟಿದಳು "ಕೇಶವಣ್ಣಾ!"

ಬಾಗಿಲು ತೆರೆದು ಕೇಶವ ಮಾಲತಿಯನ್ನು ನೋಡಿ ನುಡಿದ "ಏನು ಒಳಗೆ ಒರುವೆಯಾ?"

ಏನೂ ಉತ್ತರಿಸದೇ ಮಾಲತಿ ಒಳಗೆ ಒಂದಳು, ಹಾಗೂ ಬಾಗಿಲು ಹಾಕಿದಳು ಕೇಶವನ ಕಳೆಗುಂದಿದ ಮೊಗ ನೋಡಿ ಮಾಲತಿ ಅಂದಳು "ಅಣ್ಣಾ ನಿನ್ನ ಬಳಿಯಲ್ಲಿ ಎರಡು ಪ್ರಾರ್ಥನೆ ಮಾಡಿಕೊಳ್ಳಬೇಕಂದಿದ್ದೇನೆ ಬಹುಶಃ ಇವೆರಡೂ ನಮ್ಮ ಕಡೆಯ ಪ್ರಾರ್ಥನೆಗಳಾಗಬಹುದು"

ಕೇಶವನ ಮೊಗದಲ್ಲಿ ನಗೆ ಕಂಡಿತು "ಅವುಗಳನ್ನು ನನ್ನ ಅಂತ್ಯ ದಿನಕ್ಕೆಂದು ಮೀಸಲಾಗಿಡು, ಇನ್ನೂ ತುಸು ದಿನ ನಾನು ಬದುಕಬೇಕು."

ಕೇಶವನ ಮಾತಿನಿಂದ ದುಃಖಿತಳಾಗಿ ಮಾಲತಿ ಅಂದಳು "ಕೆನ್ನೆಯರ ಈ ಮಾತುಗಳನೆಲ್ಲ ಕೇಳಿ ನಿನಗೆ ದುಃಖವಾಗುತ್ತದೆ, ಅದಕಾಗಿ ಹೀಗೆ ಹೇಳುವಿ. ಆದರೆ ಇವತ್ತು ನನ್ನ ಮಾತಿಗೆ ನೀನು ಒಪ್ಪಬೇಕು"

"ಏನು ವಿಷಯ? ತುಸು ಕೇಳೋಣ"

ಮಾಲತಿ ತುಸು ಹಿಂದೆಳಿಸಿದಳು. "ಮೊದಲ ಮಾತೆಂದರೆ ನೀನು ದುಲಾರಿಯೊಡನೆ ವಿವಾಹವಾಗಬೇಕು. ಎರಡನೆಯದು, ನಾಳೆ ಮುಂಜಾವದಲ್ಲಿ ನನಗೆ ಅಪ್ಪಣೆ ಕೊಡಬೇಕು"

ತುಸು ವೇಳೆ ಕೇಶವನ ಮುಖ ಒಣಗಿದಂತಾಯಿತು ಆದರೆ ಕೂಡಲೇ

ಅದನ್ನು ಹತ್ತಿಕ್ಕಿಕೊಂಡು ನುಡಿದನು ವಿವಾಹದ ಮಾತು ಹಿಂದಿನಿಂದ ಆದರೆ ಈ ಅಪ್ಪಣೆ ಕೊಡುವದೆಂದರೇನು? ಇದೇನು ಕಡೆಯವರೆಗೋ?''

ಮಾಲತಿಯ ಕಣ್ಣು ನೀರು ತುಂಬಿದವು ''ಹಾಂ ಹಾಗೇ''

''ಸ್ಪಷ್ಟವಾಗಿ ಹೇಳು ಮಾಲತೀ ನಾನು ತಿಳಿಯದಾಗಿದ್ದೇನೆ''

ಮಾಲತಿ ಏನೂ ಹೇಳದೇ ಪತ್ರವನ್ನು ಕೇಶವನ ಕೈಯ್ಯಲ್ಲಿತ್ತಳು. ಕೇಶವ ಅದನೋದಿ ತಿರುವಿ ಮೇಲೆ ಕಳಗೆ ಮಾಡಿ ನೋಡಿದನು ಮರಳಿ ಜಡವಾದ ದನಿಯಿಂದ ಕೇಳಿದನು ''ರಾಧಾಕಾಂತ ದೀಕ್ಷಿತರು ಯಾರು? ಕೃಷ್ಣಚಂದ್ರನ ತಂಗಿಯ ಗಂಡನೋ?''

''ಹಾ''

ಮಾಲತಿಯನ್ನು ತಲೆಯಿಂದ ಕಾಲವರಗೆ ನೋಡಿದನು ಮತ್ತು ಹೇಳಿದನು ''ನಾನು ಸಿದ್ಧನಿದ್ದೇನೆ ಮುಂಬಯಿಯ ಕನ್ಯಾ ಪಾಠಶಾಲೆಯ ಮುಖ್ಯಾಧ್ಯಾಪಿಕೆಯೊಡನೆ, ಏನು ಕಡಮೆ? ನೂರು ರೂಪಾಯಿ ವೇತನ ಸ್ವತಂತ್ರವಾದ ಜೀವನ!''

ಮಾಲತಿ ಮೌನವಿದ್ದಳು ಇಂದಿನವರೆಗೆ ಯಾವ ಕೇಶವ ತನ್ನ ಪ್ರೇಮವನ್ನು ಸಂಯಮನದಿಂದ ಹಿಡಿದಿಟ್ಟುಕೊಳ್ಳುತಿದ್ದನೋ ಅವನು ಈಗ ವಿದ್ರೋಹಿಯಾಗುತಿದ್ದಾನೆ ಕೇಶವ ಉತ್ತೇಜಿತನಾಗಿ ಹೇಳಿದನು ''ಚನ್ನಾಗಿದೆ ಮಾಲತಿ ಚನ್ನಾಗಿದೆ ಹಿಂದೊಮ್ಮೆ ಚಕ್ರಬಡ್ಡಿ ಸಹಿತ ಋಣದ ಮಾತಾಡಿದ್ದೆ ಅದನ್ನು ಈಗ ಪೂರ ಮುಟ್ಟಿಸುವೆ! ಅದೂ ಕವಡೆ ಸಹ ಎಣಿಸಿ'

ಕಣ್ಣೀರ್ಗರೆಯುತ್ತ ಮಾಲತಿ ಬಳಲಿ ಹೇಳಿದಳು ''ಆ ದಿವಸ ಒಳ್ಳೇ ಪ್ರಮಾದವಾಯಿತಣ್ಣಾ ನಿನ್ನ ಋಣ ಒಂದು ಜನ್ಮದಲ್ಲಿ ತೀರದು'

ಕೇಶವ ತೀವ್ರ ಕಟಾಕ್ಷದಿಂದ ನೋಡಿ ಕೇಳಿದನು ಅದನ್ನು ನೋಡುತ್ತಿದ್ದೇನ ''ಇದಕಾಗಿ ದಿವಾಳಿ ತೆಗೆದು ಋಣದಾತೃಗಳ ಭಯದಿಂದ ದೇಶಗೇಡಾಗಿ ಹೋಗುವ ಸಿದ್ಧತೆಯೋ ಇದು?''

ಇಂಥ ಕಷ್ಟಸ್ಥಿತಿಯಲ್ಲಿಯೂ ಮಾಲತಿಗದೇಕೋ ನಗು ಬಂತು ''ಋಣದಾತೃಗಳು ಯಾವಾಗಲೂ ಬಂಧಿಸಬೇಕೆಂದು ಭಯಗೊಳಿಸುವರು'

ಕೇಶವ ಹುಚ್ಚು ನಗೆ ನಕ್ಕನು ''ಅದಕಾಗಿ ಮತ್ತೋರ್ವ ಋಣ

ಬಾತ್ಮವಿಗೆ ನಿನ್ನನ್ನು ಸಮರ್ಪಣ ಮಾಡುವಿಯಾ? ಅವನೂ ಜೊತೆಗೆ ಬರುವನೋ? ''

"ಯಾರು ?" ವಿಸ್ಮಯದಿಂದ ಮಾಲತಿ ಕೇಳಿದಳು

''ನಿನಗೆ ಕುಟಿಲ ನೀತಿ ಕಲಿಸಿದ ಮೋಸಗಾರ ಕೃಷ್ಣಚಂದ್ರ"

ಮಾಲತಿಯ ಮೊಗ ಕಠೋರತೆಯನ್ನು ಹೊಂದಿತು ಆರಕ್ತವಾಯಿತು, ಗಟ್ಟಿಸಿ ಮಾತಾಡತೊಡಗಿದಳು "ಇಲ್ಲ ಇಲ್ಲ ಕೇಶವಣ್ಣಾ! ಕೃಷ್ಣಚಂದ್ರ ಕುಟಿಲ ನೀತಿ ಕಲಿಸಿದವನೂ ಅಲ್ಲ, ವಿಶ್ವಾಸಘಾತಕನೂ ಅಲ್ಲ ಅವರು ನನಗೆ ಬೇಡವೆಂದು ತಿಳಿಸಿ ಹೇಳುತ್ತಿದ್ದರು ಆದರ ನಾನೇ ಒಂದು ಪತ್ರಿಕೆಯಲ್ಲಿ ಪ್ರಕಟನೆಯನ್ನೋದಿ ಅರ್ಜಿ ಹಾಕಿದೆ ನಿರುಪಾಯವಾಗಿ ಅವರು ತಮ್ಮ ತಂಗಿಯ ಗಂಡನಿಗ ಒಂದು ಪರಿಚಯ ಪತ್ರ ಕೊಟ್ಟರು ನಾನು ನಿರ್ಬಂಧ ಪಡಿಸಿದ ಮೂಲಕ ನಿನಗೆ ಅವರು ಏನೂ ತಿಳಿಸಿಲ್ಲ"

ಕೇಶವನ ಕಣ್ಣುಗಳಿಂದ ಕಿಡಿಗಳುದುರಲಾರಂಭಿಸಿದ್ದವು "ಆದರ ಕೃಷ್ಣಚಂದ್ರ ನಿನ್ನ ಪರಿಚಯ ಏನು ಬಲ್ಲ? ಅದನ್ನು ನಾನು ಬರೆಯಬೇಕಿತ್ತು ಬರೆದು ಕೊಡುತಿದ್ದೆ ಒಬ್ಬ ಪಾಷಾಣಿ, ಈಕೆಯನ್ನು ಅವಶ್ಯವಾಗಿ ನಿಮ್ಮ ಪಾಠಶಾಲೆಯಲ್ಲಿ ನೇಮಿಸಿಕೊಳ್ಳಿರಿ ನಿಮ್ಮ ಬಾಲಕಿಯರು ಓದಿ ಧನ್ಯರಾಗುತ್ತಾರೆ!'' ಎಂದು

ಕೇಶವನ ಈ ಸ್ನೇಹಯುಕ್ತವೂ, ಮಾರ್ಮಿಕವೂ ಆದ ಮಾತುಗಳಿಂದ ಮಾಲತಿಯ ದೃಢತೆಯು ಕರಗಲಾರಂಭಿಸಿತು ಆದರೂ ಆಕೆ ಜಾಗ್ರತಳಾಗಿ ಹೇಳಿದಳು "ಅಣ್ಣಾ, ನಾನು ಪಾಷಾಣಿಯೇ ನಿಜ ಆದರೆ ನೀನು ನಿರ್ದಯನಾಗಿ ಈ ಪಾಷಾಣವನ್ನು ಕರಗಿಸಬೇಡ ನನ್ನ ಹಾದಿ ತಡೆಯಬೇಡಣ್ಣಾ''

ಕೇಶವನ ದೇಹ ನಡುಗಲಾರಂಭಿಸಿತು, ಯಾರು ಬಲ್ಲರು? ಎಲ್ಲಿಯ ಹುಚ್ಚುತನ ಅವನ ಮೈಯ್ಯಲ್ಲಿ ಪ್ರವೇಶಿಸಿತೋ? ಅವನು ಅಲ್ಲಿಯೇ ಬೀರುವಿನಲ್ಲಿದ್ದ ಒಂದು ಫೋಟೋ ತೆಗೆದುಕೊಂಡು ಮಾಲತಿಯ ಮುಂದಿಟ್ಟು ಹೇಳಿದನು "ಮಾಲತೀ, ನಾನು ಹಾದಿ ಕಟ್ಟುವುದಿಲ್ಲ ನನಗೆ ನಿನ್ನ ಅವಶ್ಯವಿಲ್ಲ, ನೀನು ಹೋಗಬಹುದು ನನಗೆ ಇದೇ ಬಹಳವಾಯಿತು ಸಾಕು" ಎಂದು ನುಡಿದು ಫೋಟೋವನ್ನು ಮುದ್ದಿಸಿಬಿಟ್ಟನು ಮಾಲತಿ ಫೋಟೋ

ತನ್ನದೇ ಒಂದು ದನಿಷ್ಟು ನೋಡಿದಳು ಮಾತ್ರ. ಆಕೆಗೆ ಎಚ್ಚರದಪ್ಪುವಂತಾಯಿತು ಮೂರ್ಛೆಯೋ ಏಂತೇನೋ ? ಹಾಸಿಗೆ ಮೇಲೆ ಉರುಳಿಬಿಟ್ಟಳು

ಒಮ್ಮೆಲೇ ಕೇಶವನ ಮುಖ ಭಂಗವಾಯಿತು ಹೀಗ ಉರುಳಾಡುತ್ತ ಬಿದ್ದಿರುವ ಮಾಲತಿಯನ್ನು ನೋಡಿ, ಅವನು ಆಕೆಯನ್ನು ಎತ್ತಿ ಸರಿಯಾಗಿ ಮಲಗಿಸಿದನು ಮತ್ತು ನೀರು ಚಿಮುಕಿಸತೊಡಗಿದನು, ಇಷ್ಟರಲ್ಲಿ ಹೊರಗೆ ಯಾರದೋ ಸದ್ದು ಕೇಳಿ ಬಾಗಿಲು ಮುಂದೂಡಿದನು ಮತ್ತು ಇಂಥ ಪ್ರಸಂಗದಲ್ಲಿ ಮಾಲತಿ ಯಾರ ಕಣ್ಣಿಗೂ ಬೀಳಲಾಗದೆಂದು ದೀಪವನ್ನು ಆರಿಸಿಬಿಟ್ಟನು ಆದರೆ ಕ್ಷಣ ಮಾತ್ರದಲ್ಲ "ಕೇಶವಾ ಇದ್ದೀಯಾ?" ಎಂದು ಕೂಗುತ್ತ ಅನಂತ ಒಳಗೆ ಬರಲಾರಂಭಿಸಿದನು ಅವನ ಹಿಂದೆ ಒಬ್ಬ ಸ್ತ್ರೀ, ಎಂದರೆ ಅತ್ತಿಗೆ ರಾಮಕಲಿ.

ಕೇಶವ ಬೇಗನೆ ಬಂದು ಬಾಗಿಲ ಹಿಡಿದುಕೊಂಡು ನಿಂತು ಅವನು ಒಳಗೆ ಬರದಂತೆ ಯತ್ನಿಸಬೇಕೆಂದನು ಆದರ ಅಷ್ಟರಲ್ಲಿ ಇಬ್ಬರೂ ಕೊಟಡಿಯಲ್ಲಿ ಬಂದುಬಿಟ್ಟಿದ್ದರು

ಚಿಂತಿತನಾಗಿ ಅನಂತ ನುಡಿದ "ಕೇಶವ, ಮಾಲತಿಯ ಪತ್ತೆ ಇಲ್ಲ ಆಕೆಯ ಕೊಟಡಿ ಬರಿದಾಗಿದೆ ಪೆಟ್ಟಿಗೆ ತೆರೆದು ಹೋಗಿದೆ ಏನಾಗಿರಬಹುದು?"

ಭಯದಿಂದ ರಾಮಕಲಿ ಕೇಳಿದಳು "ಇದೇನಾಗಿರಬಹುದು? ಹೇಳಿ"

"ಏನೂ ಪರವಿಲ್ಲ ಆಕೆ ಇಲ್ಲಿಯೇ ಇರಬಹುದು ನೀವು ಮುಂದಾಗಿರಿ. ನಾನು ಬರುತ್ತೇನೆ"

ಕೊಟಡಿಯಲ್ಲಿ ಬೆಳಕಿರಲಿಲ್ಲ ಆದರೂ ಬೀದಿಯ ಬೆಳಕು ಕಿಟಕಿಯಿಂದ ಒಳಗೆ ಬರುತ್ತಿದ್ದಿತು. ಒಳಗಿನ ಪದಾರ್ಥ ಸ್ಪಷ್ಟ ಕಾಣದಿದ್ದರೂ ಅಸ್ಪಷ್ಟ ಆಕಾರವೇನೋ ತೋರಿದಂತಾಗುತ್ತಿತ್ತು.

ರಾಮಕಲಿ ವ್ಯಾಕುಲತೆಯಿಂದಾಡಿದಳು "ಆದರೆ ಆಕೆ ಮನೆಯಲ್ಲಿ ಎಲ್ಲಿರಬೇಕು? ನಾನು ಮನೆಯನ್ನೆಲ್ಲ ನೋಡಿ ಬಂದಿದ್ದೇನೆ"

ಕೇಶವ ಹೇಳಬೇಕೆನ್ನುವ ಮೊದಲೇ ಒಂದು ನೀಳವಾದ ಉಸಿರು ಬಿಟ್ಟು ಮಾಲತಿ ಮಂಚದ ಮೇಲೆ ಎದ್ದು ಕುಳಿತಳು ಸ್ಪಷ್ಟವಾಗಿ ತಿಳಿಯದಿದ್ದರೂ ಯಾರೋ ಮನುಷ್ಯರು ಇರುವರೆಂದು ಭಾಸವಾಯಿತು.

"ಮಂಚದ ಮೇಲೆ ಯಾರು?" ಎಂದವನೇ ಅನಂತನು ಮುಂದಾಗಿ ದೀಪವನ್ನು ಏರಿಸಿದನು

ಕೋಟಡಿ ಎಲ್ಲಾ ಬೆಳಗಿತು. ಭಯಗೊಂಡು ಎರಳೆಯಂತೆ ರಾಮಕಲಿ ನೋಡಿದಳು. ಕೇಶವನ ಮಂಚದ ಮೇಲೆ ಮಾಲತಿ! ಅನಂತ, ಕೇಶವ, ರಾಮಕಲಿ ಮೂವರು ಪಿಳಿ-ಪಿಳಿ ಕಣ್ಣು ಬಿಡುತ್ತ ನಿಂತುಕೊಂಡರು. ಮಾಲತಿ ಮೊದಲು ಎಲ್ಲರನ್ನೂ ಆಶ್ಚರ್ಯದಿಂದ ನೋಡಿದಳು. ಮರಳಿ ಕೇಶವನ ಮಂಚವನ್ನು ನಿರೀಕ್ಷಿಸಿದಳು ಆಗ ಅರಿವೆಗಳನ್ನು ಸರಿಪಡಿಸಿಕೊಂಡು ನೆಲದ ಮೇಲೆ ಇಳಿದು ನಿಂತಳು

ಇದನೆಲ್ಲಾ ನೋಡಿ ತಿರಸ್ಕಾರ ಮತ್ತು ಕ್ರೋಧದಿಂದ ಅನಂತ ಹೇಳಿದ "ಈಗ ನಿನಗೆ ನಿಶ್ಚಿಂತೆಯಾಯಿತೇ? ರಾಮಕಲಿ? ಇನ್ನು ನಡೆ ನಾನು ಅದೇ ಹೇಳಿದ್ದೆ ಮನೆಯಲ್ಲಿ ಬೆಂಕಿ ಹೊತ್ತಿದ ಇನ್ನು ಉಳಿಯುವುದು ಕಠಿಣವೆಂದು!"

ರಾಮಕಲಿಯಲ್ಲಿ ಮಾತಾಡುವ ಶಕ್ತಿಯೇ ಇರಲಿಲ್ಲ ಆಕೆ ಒಲಗುಂದಿ ಒಂದು ಕುರ್ಚಿಯ ಮೇಲೆ ಕುಳಿತುಬಿಟ್ಟಳು

ಈ ಸಲ ಕೇಶವ ಮಾತಾಡಿದನು. ತೀಕ್ಷ್ಣತೆಯಿಂದ ಕೇಳಿದನು. ಏನು ಬೆಂಕಿ ಹತ್ತಿದೆ ಅಣ್ಣಾ? ಯಾರು ಹಚ್ಚಿದ್ದಾರೆ?"

ತಡೆದುಕೊಳ್ಳಲು ಅನಂತ ಬಹಳ ಸಾಹಸ ನಡೆಸಿದ್ದನು ಆದರೆ ಕೇಶವನ ಮಾತು ಕೇಳಿ ಯಾವದೂ ಉಳಿಯಲಿಲ್ಲ "ನಿನ್ನ ಪಾಪದಿಂದ ಬೆಂಕಿ ಹೊತ್ತಿದ, ಮತ್ತೆ ಬೇರೆ ಯಾತರಿಂದ? ಕೇಶವಾ, ನಿನ್ನನ್ನು ನಾನು ಗುರುತಿಸಲಿಲ್ಲ, ನಂತರ ಮಾಲತಿಯ ಕಡೆಗೆ ಹೊರಳಿ ನುಡಿದನು "ಮಾಲತೀ, ನನಗೆ ಬಹಳ ದುಃಖವಾಯಿತು, ಹೆಚ್ಚೇನು ಹೇಳಲಿ?"

ಕೇಶವ ಕಲ್ಲಿನಂತೆ ನಿಂತುಕೊಂಡ ಮಾಲತಿಯ ಕಡೆಗೆ ನೋಡಿ ಹೇಳಿದನು 'ಇನ್ನು ಮೇಲೆ ನೀನು ಈ ಮನೆಯಲ್ಲಿರಬೇಕಾಗಿದ್ದರೆ ಎಲ್ಲಾ ತಿಳಿಸು ಕ್ಷಮ ಬೇಡು ಬೇಡಾಗಿದ್ದರೆ ಹಜರತಗಂಜದ ಮನೆ ನಿನಗಿದೆ, ಅಲ್ಲಿ ನಡೆ ಈಗ ಈ ಮನೆಯಲ್ಲಿ ಒಂದು ಕ್ಷಣ ಕೂಡ ನಿಲ್ಲುವದು ಪಾಪ!"

ಯಾಕೋ ಮಾಲತಿಯ ಬಾಯಿ ಯಾರೋ ಹಿಡಿಸಿದಂತಾಯಿತು 'ಈಗಲೇ ಹೋಗುವಾ!"

ಪ್ರಸನ್ನತೆಯಿಂದ ಕೇಶವ ನುಡಿದ "ಬೇಗ ನಿನ್ನ ಸಾಮಾನು ಸರಿಪಡಿಸಿಕೋ ನಾನೂ ಒಂದೆರಡು ಸಾಮಾನು ತೆಗೆದುಕೊಳ್ಳುತ್ತೇನೆ"

ಅನಂತ ಮಾಲತಿಗೆ ಹೇಳಿದನು "ಮಾಲತೀ, ಇದೇನು? ಏನಾದರೂ ಮಾತಾಡು ಹೇಳು ನಾನು ಕೇಳುತ್ತೇನೆ"

ಮಾಲತಿ ಅಂದಳು "ನಾನು ಬರಿ ಇಷ್ಟು ಮಾತ್ರ ಹೇಳಬಯಸುತ್ತೇನೆ ನೀವೆಷ್ಟು ನನಗೆ ಉಪಕಾರ ಮಾಡಿರುವಿರೋ, ಅಷ್ಟೇ ಅಪಕಾರ ಮಾಡಿ ನಾನೀ ಈ ಮನೆ ಬಿಟ್ಟು ಹೊರಟಿದ್ದೇನೆ ಶಕ್ಯವಾದರೆ ಕ್ಷಮಿಸಿಬಿಡಿರಿ ನಾನೇನು ಈಗ ಹೊರಟಿರುವೆನೋ, ಅದು ಇವತ್ತಿನ ಪ್ರಸಂಗದಿಂದ ಮಾತ್ರ ಎಂದೂ ಅಲ್ಲ, ಹಿಂದಿನಿಂದ ನಿಮಗೆಲ್ಲ ತಿಳಿದು ಬರುವದು"

ಉಕ್ಕುತಿರುವ ಕಣ್ಣೀರು ಹೇಗೋ ಹಿಂದೂಡಿ ಮಾಲತಿ ರಾಮಕಲಿಯನ್ನಪ್ಪಿ ಸರಿದುಬಿಟ್ಟಳು!

(೩೪)

ಮರುದಿನ ಮುಂಜಾವಿನಲ್ಲಿ ರಾಮಕಲಿ ತನ್ನ ಕೊಟಡಿಯಲ್ಲಿ ಮಂಚದ ಮೇಲೆ ಕುಳಿತಿದ್ದಳು ಆಕೆ ಆಗ ಕಿಟಕಿಯ ಹೊರಗೆ ಶಾಂತವಾಗಿದ್ದ ಬೀದಿಯನ್ನು ದಿಟ್ಟಿಸುತ್ತಿದ್ದಳು. ಕಿಂತು ಆಕೆಯ ಮನಸ್ಸು ಕೇಶವ ಮತ್ತು ಮಾಲತಿಯರಲ್ಲಿ ತೊಡಕಿಕೊಂಡಿದ್ದಿತು ಮಾಲತಿಯ ಜೊತೆಗೆ ಇಷ್ಟು ದಿನ ಕಳೆದವು, ಇವತ್ತು ಮಾಲತಿ ಹೊರಟುಹೋದಳು ಅದು ಕೂಡ ಈ ರೀತಿ! ಕೇಶವನೂ ಅಗಲಿ ಹೋಗಿಬಿಟ್ಟನು ನಿನ್ನೆ ರಾತ್ರಿಯ ಘಟನೆಯಿಂದ ಮಾಲತಿಯನ್ನು ನೆನೆದು ತಿರಸ್ಕಾರವೇನೋ ಎನಿಸುತಿತ್ತು; ಆದರ ಅದರಲ್ಲಿ ಸಂದೇಹವೂ ಕೂಡಿಕೊಂಡದ್ದಿತು ಕೇಶವ—ಮಾಲತಿಯರು ಹೊರಟುಹೋದ ಮೇಲೆ ಅನಂತನು ಹಾಗೆ ಆಡಿಯೂ ತೋರಿಸಿದ್ದ, ನಾವೇನೋ ತಪ್ಪು ಭಾವಿಸಿಕೊಂಡಿದ್ದೇವೆ ಎಂದು

ರಾಮಕಲಿ ಹೀಗೆ ವಿಚಾರಮಗ್ನಳಾಗಿರುವಾಗ, ಒಂದು ಟ್ಯಾಕ್ಸಿ ಬಾಗಿಲನಲ್ಲಿ ಬಂದು ನಿಂತುಕೊಂಡಿತು, ರಾಮಕಲಿ ಉತ್ಸುಕತೆಯಿಂದ ನೋಡಿದಳು ಕೃಷ್ಣಚಂದ್ರ ಅದರಿಂದಿಳಿದು ಬೇಗ—ಬೇಗ ಮನೆಯಲ್ಲಿ ಪ್ರವೇಶಿಸಿದನು ಕೃಷ್ಣಚಂದ್ರನಿಂದ ಕೇಶವ ಮಾಲತಿಯರ ಸುದ್ದಿ ತಿಳಿಯುಬಹುದೆಂದ.

ಯೋಚಿಸಿ ರಾಮಕಲಿ ಚಂಚಲಳಾದಳು ಬೇಗನೆ ಕೊಟಡಿಯಿಂದ ಹೊರ ಬಿದ್ದು ಮೆಟ್ಟಲಿನಲ್ಲಿ ಬಂದು ನಿಂತುಕೊಂಡಳು

ಕೃಷ್ಣಚಂದ್ರ ಪ್ರವೇಶಿಸಿ ಕೇಳಿದನು. "ಅತ್ತಿಗೆ, ದುಲಾರಿ ಈಗ ಎಚ್ಚತ್ತಿರುವಳೋ ಹೇಗೆ? ಆಕೆಯೊಡನೆ ಅಗತ್ಯದ ಕೆಲ ಮಾತಾಡಬೇಕಾಗಿದೆ ನೀನು ತುಸು ನೋಡು!"

ರಾಮಕಲಿ ದುಲಾರಿಯ ಕೊಟಡಿ ಪ್ರವೇಶಿಸಿದಳು ದುಲಾರಿ ಇದೇ ಎಚ್ಚತ್ತಿದ್ದಳು ಮತ್ತು ತನ್ನ ಕೊಟಡಿಯ ಕಿಟಕಿಯ ಬಳಿಯಲ್ಲಿ ಆಲಸ್ಯದಿಂದ ನಿಂತು ಕೊಂಡಿದ್ದಳು ರಾಮಕಲಿ ಕೈಸನ್ನೆಯಿಂದ ಕೃಷ್ಣಚಂದ್ರನನ್ನು ಕರೆದಳು

ಕೃಷ್ಣಚಂದ್ರ ಅಲ್ಲಿ ಪ್ರವೇಶಿಸಿ, ರಾಮಕಲಿಗೆ ಹೇಳಿದನು 'ಅತ್ತಿಗೆ ನೀನು ತುಸು ಹೊತ್ತು ಹೊರಗೆ ಹೋಗಬೇಕು. ನಾನು ಕೆಲವು ಗುಪ್ತ ಮಾತಾಡಬೇಕಾಗಿದೆ" ರಾಮಕಲಿ ಹೊರಟುಹೋದಳು ಕೃಷ್ಣಚಂದ್ರ ಒಂದು ಪಾಕೇಟು ತೆಗೆದು ಕೊಟ್ಟು, ನುಡಿದನು "ಇದನ್ನು ತಾವು ಓದಬೇಕು"

ದುಲಾರಿ ಒಡೆದು ನೋಡುತ್ತಾಳೆ ಅದೊಂದು ಮಾಲತಿಯ ಪತ್ರ ಅದರಲ್ಲಿ ಬರದಿತ್ತು "ಪ್ರಿಯ ದುಲಾರಿ, ನಿನ್ನ ಕೈಯ್ಯಲ್ಲಿ ಈ ಪತ್ರ ಬೀಳು ಹೊತ್ತಿಗೆ ನಾನು ಮುಂಬಯಿ ಮುಟ್ಟಿರುತ್ತೇನೆ ಭಗವಂತ ಈ ಅನಾಥಳನ್ನು ಮರೆತು ಬಿಟ್ಟಿಲ್ಲ, ತುಸು ನನ್ನ ವ್ಯವಸ್ಥ ಮಾಡಿದ್ದಾನೆ, ಮುಂಬಾಯಿಯಲ್ಲಿ ಕನ್ಯಾ ಪಾಠಶಾಲೆಯ ಪ್ರಧಾನಧ್ಯಾಪಿಕೆಯ ಕೆಲಸ ನನಗೆ ಸಿಕ್ಕಿದೆ

ಹೋಗುದ ಮೊದಲು ಅವಸರದಿಂದ ಚೀಟಿ ಬರೆದಿದ್ದೇನೆ, ಎರಡು ಕಾರಣಗಳಿಂದ, ನಿನ್ನೆ ಹೊರಡುವ ಮುಂದೆ ನಿನಗೆ ಬೆಟ್ಟಿಯಾಗಲಿಲ್ಲ ನೀನು ಮಲಗಿಕೊಂಡಿದ್ದೆ, ಎರಡನೆಯದೆಂದರೆ, ಒಂದು ಪ್ರಾರ್ಥನೆ ಇದೆ

ನಿನ್ನೆ ರಾತ್ರಿ ನಿನ್ನೊಡನೆ ಮಾತಾಡಿ ಹೋದನಂತರ, ಕೇಶವಣ್ಣನ ಅಪ್ಪಣೆ ಪಡೆಯಲು ಹೋಗಿದ್ದೆ, ಅಲ್ಲಿ ಮಾತಾಡುತಿರುವಾಗ ಒಮ್ಮೆಲೇ ನನ್ನ ಪ್ರಕೃತಿ ಯಾಕೋ, ಒಳಲಿದಂತಾಯಿತು ನಾನು ಬವಳಿಬಂದು ಬಿದ್ದುಕೊಂಡೆನು. ಎಚ್ಚತ್ತು ನೋಡುತ್ತೇನೆ, ಭಾವ, ಅಕ್ಕ ಮತ್ತು ಕೇಶವಣ್ಣ! ಆಗ ಕೇಶವಣ್ಣ ದೀಪ ಆರಿಸಿದ ಕಾರಣವೆಂದರೆ ಇಂಥ ಪ್ರಸಂಗದಲ್ಲಿ ಯಾರೂ

ನೋಡದಿರಲಿ ಎಂದು, ಇದು ಅವನ ಭ್ರಮವಾಯಿತು ನನ್ನನ್ನು ನೋಡಿ ಭಾವ ಏನು ತಿಳಿದುಕೊಂಡರೋ ನಾನರಿಯೆ ಅಕ್ಕ ಸಹಿತ ಹಾಗೇ ತಿಳಿದು ಕೊಂಡಳೋ, ಅಥವಾ ಇನ್ನೇನೋ! ಕೇಶವನ ಸ್ವಭಾವವನ್ನು ನೀನೂ ಬಹು ಮಟ್ಟಿಗೆ ಬಲ್ಲೆಯಷ್ಟೇ ಅವನು ಯಾವ ಪ್ರಸಂಗದಲ್ಲಿಯೂ ಇಂಥ ಸಂಗತಿ ಪ್ರಕಾಶಪಡಿಸುವದಿಲ್ಲ ಇನ್ನು ನಾನು ಮಾತಾಡದಿರಲು ಎರಡು ಕಾರಣಗಳಿದ್ದವು ತುಸು ವಿಚಾರ ಮಾಡು ದುಲಾರೀ. ಯಾವ ನಾನು ಬಡಿಸಿದೆಡೆಯನ್ನು ಬಿಟ್ಟು ಹೊರಟಿರುವೆನೋ, ಅಂಥ ನಾನೇ ಕೇಶವಣ್ಣನ ಮನೆಯಲ್ಲಿ ಕಳವು ಮಾಡಲೆಳೆಸುವೆನೇ? ಇನ್ನೊಂದೇನೆಂದರೆ, ನಾನು ಮುಂಬಾಯಿಗೆ ಹೋಗಬೇಕಾಗಿದ್ದಿತು ಮತ್ತು ಕೇಶವಣ್ಣನ ಅಪ್ಪಣೆ ಪಡೆದನಂತರ ಅಕ್ಕ ಮತ್ತು ಭಾವ ಇವರಿಂದ ಅಪ್ಪಣೆ ಪಡೆಯುತ್ತಿದ್ದೆ? ಅಕ್ಕ ಎಂಥ ಪ್ರಸಂಗದಲ್ಲಿಯೂ ಒಪ್ಪಿಕೊಳ್ಳುತ್ತಿರಲಿಲ್ಲ ಕಾರಣ ನಾನು ಇದೊಳ್ಳೇ ಸಮಯವೆಂದು ತಿಳಿದೆ ಏನೋ ದೇವರೇ ಇಂಥ ಸಮಯ ಒದಗಿಸಿಕೊಟ್ಟಿದ್ದಾನೆ

ಈಗ ನಿನ್ನಲ್ಲಿ ಒಂದು ಪ್ರಾರ್ಥನೆ ನಾನೇನು ಬೆಂಕಿ ಹೊತ್ತಿಸಿ ನಡೆದಿರುವೆನೋ, ನೀನು ಅದನ್ನು ಆರಿಸುವ ಯತ್ನ ಮಾಡು ನಾನು ಕೇಶವಣ್ಣನಿಗೆ ಹೇಳಿದ್ದೇನೆ ಒಂದು ವೇಳೆ ಅವನು ನಿನ್ನೊಡನೆ ವಿವಾಹ ಮಾಡಿಕೊಂಡರೆ ನಾನು ಮುಂಬಯಿಯಿಂದ ಬರುವ ಆಸೆ ಹಿಡಿ ಮತ್ತು ಹಾಗಾದರೆ ಮಾತ್ರ ನಿಮ್ಮ ಜೊತೆಗಿರುತ್ತೇನೆ ತಂಗೀ ನಾನು ಒಂದು ನಿಮ್ಮೊಡನಿರಬೇಕಂದು, ಲಖನೌಕ್ಕೆ ಬಂದು ಜೊತೆಗಾತಿಯಾಗಬೇಕೆಂದು ನೀವು ಇಚ್ಛಿಸುತಿದ್ದರೆ, ನನ್ನ ಆಜ್ಞೆಯನ್ನು ಪಾಲಿಸು ಕೇಶವಣ್ಣ ನನ್ನನ್ನು ಮುಂಬಯಿಗೆ ಕಳಿಸಲು ಬರುವೆನೆಂದು ಹೇಳುತ್ತಾನ, ಆದರೆ ಬಹಳವಾಗಿ ನಾನು ಅವನನ್ನು ಸಂಗಡ ಕರೆದೊಯ್ಯುವದಿಲ್ಲ ಅವನು ಇತ್ತ ಬರದಂತೆ ನೀನು ಯತ್ನಿಸು ಎಂದರೆ– ಮರಳಿ ನಾನು ಬರುತ್ತೇನೆ ತಂಗೀ ಈ ಚೀಟಿ ನಿನಗೆ ಕೇಶವಣ್ಣನಿಂದ ದೊರೆಯುತ್ತದೆ ನೀನು ಚೀಟಿಯೋದಿ ಹರಿದು ಹಾಕಿಬಿಡು, ಅಕ್ಕ–ಭಾವ ಇವರಿಗೆ ಅದು ಸಿಗಬಾರದು ಅವರು ಸುಮ್ಮನೆ ದುಃಖಿಗೊಳ್ಳುತ್ತಾರ ಪ್ರೀತಿಪೂರ್ವಕ ಆಶೀರ್ವಾದ–ನಿನ್ನ ಮಾಲತಿ."

ಪತ್ರ ಓದಿ ದುಲಾರಿ ಕೇಳಿದಳು "ನಿಮಗೆ ಈ ಪತ್ರ ಹೇಗೆ ಸಿಕ್ಕದ್ದು?"

ಪತ್ರವನ್ನು ನನಗೆ ಕೇಶವ ಕೊಟ್ಟ. ಮತ್ತು ಅವನು ಹೇಳಿದುದೇ ನಂದರೆ ಮಾಲತಿಗೆ ದುಲಾರಿಯಿಂದ ಒಂದು ಚೀಟಿ ಬರೆಸಿಕೊಂಡು ಬಾ ತಾನು ನನ್ನ ಸಂಗಡ ವಿವಾಹಕ್ಕೆ ಸಿದ್ಧಳಿರುವಳೆಂದು, ಹೀಗಾದರೆ ನಾನು ಮಾಲತಿಯನ್ನು ಮರಳಿ ಕರೆತರುತ್ತೇನೆ ಬೇಗ ಬರೆದುಕೊಡಿ ಎಂಟು ಗಂಟೆಗೆ ಗಾಡಿ ಬಿಡುತ್ತದೆ. ಈವಾಗಲೇ ಆರುವರ''

ದುಲಾರಿ ಏನೂ ಮಾತಾಡಲಿಲ್ಲ ಕೇಶವನ ಜೊತೆಗೆ ಆಕೆಯ ವಿವಾಹ ವಾಗುವದೆಂದರೆ, ಹಾದಿಯ ಬದಿಗೆ ಕುಳಿತು ಭಿಕ್ಕೆ ಬೇಡುವಂತೆಯೇ ಸರಿ ಆಕೆಗೆ ಇದರಿಂದೇನೂ ಸಂತೋಷವೆನಿಸಲಿಲ್ಲ

ದುಲಾರಿ ಸುಮ್ಮನಿರುವದನ್ನು ಕಂಡು ಕೃಷ್ಣಚಂದ್ರ ನುಡಿದನು. ಚೀಟಿಯನ್ನಷ್ಟು ಬರೆದುಕೊಡುತ್ತೀರಾ?''

''ಹಾಗೆ ಎಂದೂ ಬರೆದು ಕೊಡಲಾರೆ''

ದುಲಾರಿಯ ಮಾತು ಕೇಳಿ ಮೊದಲಿಗೆ ಕೃಷ್ಣ ಚಂದ್ರ ಸುಮ್ಮನಾದನು. ತಿರುಗಿ ನುಡಿದನು ''ಬರೆದುಕೊಟ್ಟರೆ ಸರಿಯಾಗಿತ್ತು''

ಇವತ್ತು ದುಲಾರಿಯ ಮನದಲ್ಲಿ ಬಂಡಾಯವೆದ್ದ ಕಾರಣ ಶಬ್ದಗಳ ಕೊರತೆ ಎನಿಸುವಂತಿರಲಿಲ್ಲ ಆಕೆ ಹೇಳಿದಳು

''ಯಾರ ಸಲುವಾಗಿ ಸರಿಯಾಗಿತ್ತು?''

ಉತ್ತರ ಕೊಡಲೆಳಸುತಿರುವ ಕೃಷ್ಣಚಂದ್ರನಿಗೆ ಒಂದೇನೋ ವಿಚಾರ ಹೊಳೆಯಿತು, ಅವನೆಂದ '' ಇವೆಲ್ಲ ಲೆಕ್ಕ ಬಾಕಿಗಳಿಗೆ ನನ್ನದೇನೂ ಸಂಬಂಧವಿಲ್ಲ ನನ್ನ ವಿಷಯಕ್ಕೆ ತಾವು ಚಿಂತಿಸಬಾರದು''

ಕೂಡಲೇ ದುಲಾರಿ ನುಡಿದಳು ''ನಿಮಗೇನೂ ಸಂಬಂಧವಿಲ್ಲವನ್ನು ವದು ಸರಿ. ನನ್ನ ಮಟ್ಟಿಗಿರುವದಲ್ಲ ನನಗೂ ತುಸು ಇಚ್ಛಾ-ಅನಿಚ್ಛಾ ವಿಚಾರ ವಿವೇಕಗಳುಂಟು''

ಈ ಮಾತು ಕೇಳಿ ಕೃಷ್ಣಚಂದ್ರನ ಸಂದೇಹ ಇನ್ನೂ ಇಮ್ಮಡಿಸಿತು, ಅವನು ಹೇಳಿದ ''ಇಂಥ ಸಮಯದಲ್ಲಿ ಸ್ಪಷ್ಟವಾಗಿ ಮಾತಾಡುವದೇ ಒಳಿತು, ನಾನು ಕೇಶವನಿಂದ ಕೇಳಿದ್ದೇನೆಂದರೆ, ನೀವು ಮಾಲತಿಗೇನೋ ಹೇಳಿರುವಿರಂತೆ 'ನಾನು ಅವಿವಾಹಿತಳಾಗಿರುತ್ತೇನೆ' ಎಂದು, ಕಡೆಗೆ ಹೀಗೇಕೆ? ಇದಕ್ಕೆ ನಾನೇದರೂ ಹೊಣೆಗಾರನಾಗುವಂತಿದ್ದರೆ, ನನಗೆ

ಬಹಳ ವ್ಯಥೆಯಾಗುತ್ತದೆ ನಾನು ಆ ದಿವಸ ನಿಮಗೆ ಹೇಳಿದ್ದೆ, ನಾವು ಗಂಡಸರು, ನೀವೆಲ್ಲರೂ ಪ್ರಸನ್ನರಾಗುವಂತೆ ಯತ್ನಿಸುವದೇ ನಮ್ಮ ಕಾರ್ಯ. ಮತ್ತು ನನ್ನ ಚಿಂತೆ ಮಾಡದಿರಿ ನಮ್ಮ ನೆರೆಮನೆಯಲ್ಲಿ ಓರ್ವ ಪಾಂಡೆ ಇದ್ದಾನೆ, ಅವನ ಮಗಳು ತುಸು ಗಿಡ್ಡಕಾಗಿದ್ದಾಳೆ, ನಾನು ಆಕೆಯೊಡನೆ ಲಗ್ನ ಮಾಡಿಕೊಳ್ಳುತ್ತೇನೆ, ಅದರಿಂದ ಓರ್ವ ಬ್ರಾಹ್ಮಣನ ಕಲ್ಯಾಣವಾದರೂ ಆಗುತ್ತದೆ ”

ಕಿಟಕಿಯನ್ನು ಇನ್ನಷ್ಟು ತೆರೆಯುವ ನೆವ ಮಾಡಿ ದುಲಾರಿ ಮೇಲೆದ್ದಳು ತನ್ನ ಕಣ್ಣೀರು ಮೆಲ್ಲನೆ ಒರೆಸಿಕೊಂಡು ಬಂದು ಹೇಳಿದಳು

“ತಾವೇನೋ ಪಾಂಡೆಯವರ ಹುಡುಗಿಯೊಡನೆ ಲಗ್ನ ಮಾಡಿಕೊಳ್ಳುತ್ತೀರಿ. ಆದರೆ ಮಾಲತಿಯ ಅವಸ್ಥೆ ಏನು?”

“ಮಾಲತಿ ನಿಮ್ಮೆಲ್ಲರ ಜೊತೆಗೆ ಇರುತ್ತಾಳೆ, ಅಥವಾ ಇದೂ ಒಂದು ಶಕ್ಯವಿದೆ, ನಾನು ಒಂದು ವೇಳೆ ಮಾಲತಿಯನ್ನೇ ಲಗ್ನವಾಗಬಹುದು ”

ದುಲಾರಿಯ ತುಟಿಗಳ ಮೇಲೆ ಬಹಳ ಕಿರುನಗೆಯೊಂದು ಮಿನುಗಿತು ಆಕೆ ನುಡಿದಳು “ಮಾಲತಿ ಒಪ್ಪುವಳೇ?”

“ನೀವು ಒಪ್ಪಿಸಿರಿ ಹೇಗೆ ಆಕೆ ಕೇಶವನೊಡನೆ ವಿವಾಹವಾಗಲ ನಿಮಗೆ ಆಗ್ರಹ ಪಡಿಸುತಿರುವಳೋ, ಅದರಂತೆ ನೀವೂ ಹೇಳಿರಿ ”

“ ಮಾಲತಿ ಅನುಚಿತ ವರ್ತಿಸುತ್ತಾಳೆ, ನಾನು ಹಾಗೆ ಮಾತ್ರ ಮಾಡಲಾರೆ ”

ಮರಳಿ ಗಡಿಯಾರ ನೋಡಿ ಕೃಷ್ಣಚಂದ್ರ ನುಡಿದ “ಹಾಗಾದರೇನು ಇನ್ನಾವ ಹಾದಿಯೂ ಇಲ್ಲವೇ? ನೋಡಿ ಏಳು ಹೊಡೆಯಿತು ”

“ಒಳ್ಳೇದು ನನ್ನನ್ನು ನಿಲ್ದಾಣಕ್ಕೆ ಕರೆದೊಯ್ಯಿರಿ ನಾನು ಮಾಲತಿಯನ್ನು ಕೇಶವನ ಸಂಗಡ ವಿವಾಹವಾಗಲು ಒಪ್ಪಿಸುತ್ತೇನೆ ”

“ಇದು ಶಕ್ಯವೋ? ”

“ಹಾಂ”

“ಮತ್ತೆ ನೀವೇನು ಮಾಡುತ್ತೀರಿ?”

ಈ ಸಾರಿ ದುಲಾರಿಯ ಮೊಗದಲ್ಲಿ ಕೆಂಪು ಕಾಣಿಸಿತು ಆಕೆ ದೃಷ್ಟಿಯನ್ನು ಕೆಳತಗ್ಗಿಸಿ ನಿಂತುಬಿಟ್ಟಳು

"ಹೇಳಿ, ಹೇಳಿ, ನೀವೇನು ಮಾಡುತ್ತೀರಿ?"

ದುಲಾರಿ ಕಂಪಿಸುತಿರುವ ದನಿಯಿಂದಾಡಿದಳು. "ತಾವು ಹೇಳುವಂತೆ"

"ಹೀಗೆ ತಿಳಿಯಿರಿ, ನಾನು ಹೇಳಬಹುದು, ತಿಳಿಯಿರಿ, ನಾನು ಆಜ್ಞಾಪಿಸಬಹುದು."

ಕೃಷ್ಣಚಂದ್ರನ ಮಾತು ಮುಗಿಯಲಿಲ್ಲ, ದುಲಾರಿ ಆಡಿದಳು. "ನಾನು ಒಪ್ಪಿಕೊಳ್ಳುತ್ತೇನೆ."

"ಸುಖಿಗಳಾಗುವಿರಾ?"

"ಹಾಂ."

"ಬರಿ ಇದಕಾಗಿಯೋ? ಕೇಶವ-ಮಾಲತಿ ಸುಖಿಗಳಾಗುತ್ತಾರೆ?"

"ಅಲ್ಲ, ಬರಿ ಅದಷ್ಟೇ ಅಲ್ಲ."

"ನಾನು ಸುಖಿಯಾಗುವೆನೆಂದೋ?"

ತಲೆ ಕೆಳಗಿಟ್ಟು ದುಲಾರಿ ನುಡಿದಳು "ಬರಿ ಅದಕಾಗಿಯೂ ಅಲ್ಲ"

"ದುಲಾರೀ"

ದುಲಾರಿ ಬಾಗಿದ ತಲೆ ಕೃಷ್ಣಚಂದ್ರನನ್ನು ನೋಡಲೆತ್ತಿದಳು.

"ನನಗೆ ವಿಶ್ವಾಸವೆನಿಸದಾಗಿದೆ"

"ಇದರಲ್ಲಿ ಏನೂ ಸುಳ್ಳಿಲ್ಲ."

ಪುನಃ ಗಡಿಯಾರ ನೋಡಿ ನುಡಿದಳು "ಏಳುವರೆ ಆಯಿತು. ತುಸು ತಾವು ಕುಳಿತುಕೊಳ್ಳಿ ನಾನು ಅತ್ತಿಗೆಯನ್ನು ಕಂಡು ಬರುತ್ತೇನೆ" ಎಂದು ಹೇಳಿ ದುಲಾರಿ ಬೇಗ ಬೇಗ ರಾಮಕಲಿಯ ಬಳಿಗೆ ಹೊರಟು ಹೋದಳು.

## (೩೫)

ಕೃಷ್ಣಚಂದ್ರ ಒರ್ವನೇ ಕುಳಿತು ಯೋಚಿಸುತಿದ್ದ, ಏನು ಮಾಡಲಿಕ್ಕೆ ಬಂದಿದ್ದೆ, ಇದೇನಾಯಿತು? ಹಿಂದೊಮ್ಮೆ ಕೃಷ್ಣಚಂದ್ರ ಹೇಗೆ ದುಃಖದಿಂದ ಕಂಗೆಟ್ಟಿದ್ದನೋ ಇವತ್ತು ಹಾಗೆಯೇ ಸುಖದಿಂದ ಉಬ್ಬಿ ಹೋಗಿದ್ದಾನೆ.

ಇವನು ಹೀಗೆ ಯೋಚಿಸುತಿರುವಾಗಲೇ ದುಲಾರಿ ರಾಮಕಲಿಯೊಡನೆ ಪ್ರವೇಶ ಮಾಡಿದಳು

"ಆಶೀರ್ವಾದ ಕೃಷ್ಣಾ, ನೀನು ದುಲಾಗಿ ಸುಖಿಗಳಾಗಿರಿ. ಪಾಪ, ನಾನು ಈಕೆಯ ಸಲುವಾಗಿ ಹಗಲು ರಾತ್ರಿ ಯೋಚಿಸಿ ಸತ್ತುಹೋಗುತಿದ್ದೆ "

ಕೃಷ್ಣಚಂದ್ರ ವಂದಿಸಿ ನುಡಿದನು. "ಅತ್ತಿಗೆ, ಇನ್ನು ಉಳಿದ ದುಃಖವೂ ದೂರಾದಂತೆ, ಅಣ್ಣಾ ಇದನ್ನೆಲ್ಲ ಕೇಳಿದ್ದಾನಷ್ಟೇ ?

"ಹಾಂ. ಎಲ್ಲಾ ಕೇಳಿದ್ದಾರೆ, ಅವರೂ ಬರುತ್ತಿದ್ದಾರೆ ಆದರೆ ಕೃಷ್ಣಾ ಅವರಿಬ್ಬರೂ ಕಹಳ ಕಠಿಣ ಹೃದಯಿಗಳು."

ಕೃಷ್ಣಚಂದ್ರ ಉತ್ಸಾಹದಿಂದ ತಲೆದೂಗುತ್ತ ಹೇಳಿದನು. ಎಲ್ಲಾ ಸರಿಯಾಗುತ್ತದೆ, ಅತ್ತಿಗೆ, ನಮ್ಮ ಜೊತೆಯಾದರೂ ಕಠಿಣತೆಯಲ್ಲಿ ಕಡಮೆಯದೇನೂ ಅಲ್ಲ ''

ರಾಮಕಲಿ ನಗುತ್ತ ಮಾತಾಡಿದಳು ಇನ್ನೆಲ್ಲಿ ಕಠಿಣವೋ ? ಈಗ ಒಳ್ಳೇ ಮೆತ್ತಗೆ."

ಕೃಷ್ಣಚಂದ್ರ ಆಡಿದ "ಆದರೆ ಎಷ್ಟು ಶ್ರಮಪಟ್ಟನಂತರ?"

ಇಷ್ಟರಲ್ಲ ಅನಂತನೂ ಬಂದನು ಎಲ್ಲರೂ ನಿಲ್ದಾಣಕ್ಕೆ ಹೊರಟರು ತಿಳಿಯುತಿರುವಾಗಲೇ ಅನಂತ ಹೇಳಿದನು "ನಿನ್ನೆ ರಾತ್ರಿ ಜರುಗಿದ ಅನರ್ಥ ಇಷ್ಟು ಸರಳವಾಗಿ ಮುಗಿದುಹೋಗುವದೆಂದು ನಾನೆಣಿಸಿರಲಿಲ್ಲ ಕೃಷ್ಣಾ. ರಾತ್ರಿ ಏನು ಪ್ರಮಾದ ಘಟಿಸಿತೋ, ಅದರಿಂದ ಕೂಡ ಮಂಗಲವೇ ಆಯಿತಲ್ಲ! ಇಲ್ಲವಾದರೆ ಈ ಗೊಂದಲದ ತೊಡಕು ಇನ್ನೂ ಎಷ್ಟು ದಿನ ಹಾಗೇ ಇರುತಿದ್ದಿತೋ? ಯಾರು ಬಲ್ಲರು? ಬಹಳ ಕಷ್ಟವನ್ನು ಸಹನ ಮಾಡಿ ನಾನು ತಿಳಿದೆ. ಸಮಾಜ ಮತ್ತು ಶಾಸ್ತ್ರ ಇವೆಲ್ಲವುಗಳನ್ನು ಮೀರಿ ಇದ್ದಾನ, ಮಾನವ!''

ಹೊರಗೆ ಬಂದು ಟ್ಯಾಕ್ಸಿಯಲ್ಲಿ ಕುಳಿತು ಎಲ್ಲರೂ ನಿಲ್ದಾಣಕ್ಕೆ ನಡೆದರು-ಎಲ್ಲರೂ ಕುಳಿತದ್ದೇನೋ ಒಂದರಲ್ಲಿ. ಕಿಂತು ಅವರವರ ಮನಸ್ಸು ಬೇರೆ, ಬೇರೆ, ಅನಂತ ಮತ್ತು ರಾಮಕಲಿ ಯೋಚಿಸುತ್ತಿದ್ದರು; ಕೇಶವ

ಮಾಲತಿಯರಿಗೆ ಮನೆಗೆ ಬನ್ನಿರೆಂದು ಹೇಗ ಹೇಳಬೇಕು? ರಾತ್ರಿಯಲ್ಲೇನು ಭ್ರಮ ಬಂದಿತೋ, ಅವರ ವಿಷಯಕ್ಕೆ ಹೇಗೆ ವಿಷಾದ ಪ್ರಕಟಿಸಬೇಕು. ಇತ್ಯಾದಿ

ದುಲಾರಿ–ಹಾಗು ಕೃಷ್ಣಚಂದ್ರರು ಯೋಚಿಸುತ್ತಿದ್ದರು. ಅದು ತಮ್ಮ ಹೊಸ ಬಾಳಿನ ಸಂಬಂಧವಾಗಿ ದುಲಾರಿಯ ಯೋಚನೆ ಎಂದರೆ– ನಾನು ಇಬ್ಬರು ಪುರುಷರಿಂದ ಹೇಗೆ ತಿರಸ್ಕೃತಳಾದೆನಲ್ಲ? ಆದರೆ ಇಂದು ನಾನು ದೀನಳಲ್ಲ, ತಿರಸ್ಕೃತಳಲ್ಲ, ಇಂದು ಧನ್ಯಳಾದೆ ತನ್ನ ಪ್ರಿಯವಸ್ತು ಕೈಸೇರಿದ್ದರಿಂದ. ಕೃಷ್ಣಚಂದ್ರನಂತೂ ಸುಖಸಾಗರದಲ್ಲಿ ತೇಲಾಡುತ್ತಿದ್ದನು ಗಾಡಿಯು ಭಂವ್–ಭಂವ್, ಎಂದು ವೇಗವಾಗಿ ಓಡುತ್ತಿದ್ದಿತು, ಹಾದಿಯಲ್ಲಿ ಓರ್ವ ಟಾಂಗಾದವನಿಗೆ ಹಾರ್ನು ಕೊಟ್ಟು ಡ್ರಾಯವರನು ಹಿಂತಿರುಗಿಸಿದನು. ಗಾಡಿ ಮುಂದೋಡಿತು ಮತ್ತು ನಿಲ್ದಾಣಕ್ಕೆ ಬಂದು ನಿಂತುಕೊಂಡಿತು.

ಎಲ್ಲರೂ ಇಳಿದರು ಅನಂತ ಹೇಳಿದ 'ನಾನು ಹೋಗುತ್ತೇನೆ ನೀನು ಇವರನ್ನೆಲ್ಲ ಕರೆದುಕೊಂಡು ಬಾ' ಮುಂದೆ ರೇಲುವೇ ಗಡಿಯಾರದಲ್ಲಿ ದೃಷ್ಟಿ ಬಿತ್ತು, ಗಡಿಯಾರದಲ್ಲಿ ಎಂಟು ಗಂಟೆ ಎರಡು ನಿಮಿಷ ಅನಂತ ಗಡಬಡಿಸಿ ಹೋದನು ಬೇಗ ಅಲ್ಲೊಂದು ಪೂಲು ಹಾರಿದನು, ಹಿಂದು ಮುಂದೆ ನೋಡದೇ ಓಡುತ್ತ ಬೇಗ–ಬೇಗ ಎರಡನೇ ನಂಬರದ ಪ್ಲಾಟಫಾರ್ಮಿನ ಮೇಲೆ ಬಂದನು ಇನ್ನು ಅವನು ಗಾಬರಿಯಿಂದ ದೃಷ್ಟಿಯನ್ನು ಆಚೆ–ಈಚೆ ತಿರುಗಿಸುತ್ತ ಓಡಾಡುತಿರುವಾಗಲೇ ಗಾಡಿ ಕೂಗಿಬಿಟ್ಟಿತು, ಅನಂತ ಗಾಡಿಯ ಒಂದು ಬದಿಯಿಂದ 'ಕೇಶವಾ, ಕೇಶವಾ, ಎಂದು ಕೂಗುತ್ತ ಓಡಿದನು ಗಾಡಿ ಭುಕ್–ಭುಕ್ ಎಂದು ದನಿ ಮಾಡಿತು, ಗಾಲಿಗಳು ಉರುಳತೊಡಗಿದವು, ಹೇಗೆ ಹೇಗೆ ಗಾಲಿ ಉರುಳತೊಡಗಿದವೋ, ಅನಂತನ ಹೆಜ್ಜೆಗಳು ಹಾಗೆ ಒತ್ತರಿಸಿದವು ಅವನು ತುಸು ದೂರದ ಎರಡನೇ ತರಗತಿಯ ಡಬ್ಬಿಯೊಂದರಲ್ಲಿ ಕೇಶವನು ಕಿಟಕಿಯ ಬಳಿ ನಿಂತಿರುವದನ್ನು ಕಂಡನು ಬಲವಾಗಿ ಒದರಿಕೊಂಡನು. 'ಕೇಶವಾ ಸರಪಳಿ ಜಗ್ಗಿ ಬಿಡು, ಇಳಿದು ಬಾ ಕೇಶವಾ"

ಕೇಶವ ಮತ್ತು ಮಾಲತಿಯರ ದೃಷ್ಟಿ ಓಡಿಬರುತ್ತಿರುವ ವ್ಯಕ್ತಿಯ ಮೇಲೆ ಬಿದ್ದಿತು, ಇಬ್ಬರೂ ಕೈ ಎತ್ತಿ ನಮಸ್ಕರಿಸಿದಂತೆ ಕಂಡುಬಂತು

ಗಾಡಿಯ ಓಟ ಇನ್ನೂ ಹೆಚ್ಚಿತು, ಮತ್ತು ನೋಡು ನೋಡುತ್ತಿರುವಷ್ಟರಲ್ಲಿ ಗಾಡಿ ನಿಲ್ದಾಣ ದಾಟಿ ಹೊರಗೆ ಹೋಯಿತು. ಗಾಡಿ ನಡೆದ ಹಳಿಗಳು ಮಿಂಚತೊಡಗಿದವು, ಅನಂತ ಮಂಕಾಗಿ ನಿಂತುಬಿಟ್ಟಿದ್ದಾನ; ಅಷ್ಟರಲ್ಲಿ ಕೃಷ್ಣಚಂದ್ರ ಎಲ್ಲರನ್ನೂ ಕರೆದುಕೊಂಡು ಬಂದನು ತನ್ನ ಗಡಿಯಾರ ನೋಡಿ ನುಡಿದ. "ಎಲ, ಇನ್ನೂ ಎರಡು ನಿಮಿಷ ಅವಕಾಶವಿದೆ, ಇದೇನೋ ಗಡಿಯಾರ ಹಿಂದುಳಿಯುವ ಹಾಗಿದೆ."

ರಾಮಕಲಿ ಕಣ್ಣೀರ್ಗರೆಯುತ್ತಿದ್ದಳಷ್ಟೇ ಬಾಯಿಂದೇನೂ ಮಾತು ಹೊರಡಲಿಲ್ಲ!

---